# ಕರ್ನಾಟಕ-ಗತವೈಭವ



ಲೇಖಕರು :

ದಿ ಆಲೂರ ವೆಂಕಟರಾಯರು

ಬಿ. ಎ., ಎಲ್ ಎಲ್. ಬಿ



ಆ ಸೌಂದರ್ಯದ ರಾಜಧಾನಿಯಕಟಾ ! ಆ ರಾಜನಾ ವೈಭವಂ ।
ಆ ಸಾಮಂತಸಮೂಹವಾಬುಧಸಭಾಸ್ಥಾನಂಗಳಾ ಗ್ರಂಥಗಳ್ ॥
ಆ ಸೋಮಾನನೆಯರ್ ಪ್ರಮತ್ತನೃಪಪುತ್ರರ್ ಘೋಷಿಪಾವಂದಿಗಳ್ ।
ಆ ಸರ್ವರ್ ಮರೆಯಾದರಾರ ವಶದಿಂದಾಕಾಲಗೀ ವಂದನಂ ॥

—ಶಾಂತಕವಿ

( ಭರ್ತೃಹರಿಯ ವೈರಾಗ್ಯಶತಕದಿಂದ )

ಸಮಾಜ ಪುಸ್ತಕಾಲಯ, ಧಾರವಾಡ-೧

ಪರಿಷ್ಕೃತ
ಒಂಬತ್ತನೆಯ ಆವೃತ್ತಿ : ೧೯೬೮

*

ಬೆಲೆ : ರೂ. ೩-೦೦

*

ಪ್ರಕಾಶಕರು :
ಮನೋಹರ ಘಾಣೇಕರ, ಬಿ. ಎ , ಬಿ.ಕಾಂ.
ಸಮಾಜ ಪುಸ್ತಕಾಲಯ, ಧಾರವಾಡ

*



*

ಮುದ್ರಕರು :
[illegible] ಘಾಣೇಕರ, ಎಲ್. ಪಿ. ಟಿ.
ಪ್ರತಿಭಾ ಮುದ್ರಣ, ಧಾರವಾಡ

# ಅನುಕ್ರಮಣಿಕೆ


(೧)— ಆರನೆಯ ಆವೃತ್ತಿಗೆ ಪ್ರಸ್ತಾವನೆ

(೨)—ಪ್ರೊ. ಮುಗಳಿ ರಂ. ಶ್ರೀ. ಇವರ ಮುನ್ನುಡಿ

(೩)—ಪ್ರಬಂಧ-ಪರಿಚಯ

| ಪ್ರಕರಣ | | ವಿಷಯ | ಪುಟ |
|---|---|---|---|
| ೧ನೆಯ ಪ್ರಕರಣ | | ಈ ಮೃತವಾದ ಕರ್ನಾಟಕದಿಂದೇನು ? | ೧- ೮ |
| ೨ನೆಯ | ,, | ಕರ್ನಾಟಕವು ಮೃತರಾಷ್ಟ್ರವೇ ? | ೯- ೧೫ |
| ೩ನೆಯ | ,, | ಕರ್ನಾಟಕ ವಿಸ್ತಾರ ... ... | ೧೬- ೨೪ |
| ೪ನೆಯ | ,, | ಕರ್ನಾಟಕ ವಿಭೂತಿಗಳು ... | ೨೫- ೩೪ |
| ೫ನೆಯ | ,, | ಸಾಧನ-ಸಾಮಗ್ರಿ ... ... | ೩೫- ೪೪ |
| ೬ನೆಯ | ,, | ಚಾಲುಕ್ಯರ ಪೂರ್ವದ ಕರ್ನಾಟಕ ಇತಿಹಾಸ | ೪೫- ೫೪ |
| ೭ನೆಯ | ,, | ಬಾದಾಮಿಯ ಚಾಲುಕ್ಯರ ವಂಶಾವಳಿ | ೫೫ |
| | | ಬಾದಾಮಿಯ ಚಾಲುಕ್ಯರು ... | ೫೬- ೬೦ |
| ೮ನೆಯ | ,, | ರಾಷ್ಟ್ರಕೂಟ ವಂಶಾವಳಿ ... | ೬೧ |
| | | ರಾಷ್ಟ್ರಕೂಟರು ... | ೬೨- ೬೫ |
| ೯ನೆಯ | ,, | ಕಲ್ಯಾಣ ಚಾಲುಕ್ಯರ ವಂಶಾವಳಿ ... | - ೬೬ |
| | | ಕಲ್ಯಾಣದ ಚಾಲುಕ್ಯರು .... ... | ೬೭- ೭೪ |
| ೧೦ನೆಯ | ,, | ಕಲಚೂರ್ಯ ಯಾದವ ಮುಂತಾದವರು | ೭೫- ೮೫ |
| ೧೧ನೆಯ | ,, | ವಿಜಯನಗರದ ವಂಶಾವಳಿ .... | – ೮೬ |
| | | ವಿಜಯನಗರದ ಅರಸರು .... | ೫೭– ೯೪ |
| ೧೨ನೆಯ | ,, | ವೈಭವ-ವರ್ಣನೆ ... | ೯೫–೧೦೪ |
| ೧೩ನೆಯ | ,, | ಕರ್ನಾಟಕದ ಕಟ್ಟಡಗಳು ... | ೧೦೫-೧೧೯ |
| ೧೪ನೆಯ | ,, | ಧಾರ್ಮಿಕ ಉನ್ನತಿ ... | ೧೨೦-೧೨೬ |
| ೧೫ನೆಯ | ,, | ವಾಙ್ಮಯ ವೈಭವ ... | ೧೨೭-೧೩೫ |
| ೧೬ನೆಯ | ,, | ಉಪಸಂಹಾರ ... | ೧೩೬-೧೩೯ |
| ಪೂರಕಪ್ರಕರಣ | | ೧—ಕರ್ನಾಟಕ-ಇತಿಹಾಸ-ಸಂಶೋಧನೆ | ೧೪೦–೧೬೬ |
| ,, | ,, | ೨— ಲಿಪಿಗಳ ಮುದ್ರಣ-ಪದ್ಧತಿ ... | ೧೬೭–೧೭೩ |

## ೬ನೆಯ ಆವೃತ್ತಿಗೆ ಪ್ರಸ್ತಾಪನೆ



'ಕರ್ನಾಟಕ ಗತವೈಭವ'ದ ೫ನೆಯ ಆವೃತ್ತಿಯು ಮುದ್ರಿತವಾಗಿಯೇ ಹತ್ತು ವರ್ಷಗಳಾದವು. ಇದು ಮುಂಬಯಿ ಮದ್ರಾಸ ಮೈಸೂರ ಹೈದ್ರಾಬಾದ ಬನಾರಸ ಮುಂತಾದ ವಿಶ್ವವಿದ್ಯಾಲಯಗಳ ಮ್ಯಾಟ್ರಿಕ್, ಇಂಟರ, ಬಿ. ಎ. ಮೊದಲಾದ ಪರೀಕ್ಷೆಗಳಿಗೆ ಪಠ್ಯಪುಸ್ತಕವಾಗಿತ್ತು. ಪ್ರತಿಗಳೆಲ್ಲವೂ ತೀರಿ, ಅನೇಕ ವರ್ಷಗಳಾಗಿದ್ದರೂ ಮುದ್ರಿಸುವುದಾಗಿದ್ದಿಲ್ಲ. ಅದಕ್ಕೆ ನಮ್ಮ ಆರ್ಥಿಕ ಅನಾನುಕೂಲತೆಯೇ ಕಾರಣ. ಇಂಥ ಅನಾನುಕೂಲತೆಯ ಮೂಲಕವೇ ಹಿಂದಿನ ನಾಲ್ಕು ಆವೃತ್ತಿಗಳ ಮುದ್ರಣದ ಹಕ್ಕನ್ನು ಮುಂದಿಗೆ ಮಾರಬೇಕಾಯಿತು. ಹೈದ್ರಾಬಾದ ಮುಂತಾದ ಸಂಸ್ಥಾನಗಳು ಈಗ ವಿಲೀನ ಹೊಂದಿರುವುರಿಂದಲೂ ಗಡಿನಾಡುಗಳಲ್ಲಿ ಜಾಗ್ರತಿಯಾಗಹತ್ತಿರುವುದರಿಂದಲೂ ಈ ಗ್ರಂಥದ ಅವಶ್ಯಕತೆ ಹೆಚ್ಚಾಗಿದೆ.

ಗತವೈಭವದ ನೆನಪು ನಮ್ಮಲ್ಲಿ ಮೂಡಿ ೪೫–೫೦ ವರ್ಷಗಳಾದವು. ಕತ್ತಲೆಯ ಯುಗಗೆ ಕೊನೆಗ, ಬೆಳಕಿನ ಮುಂಜಾವಿನಲ್ಲಿ ಈ ಪುಸ್ತಕದ ಉದಯ. ಈ ಗ್ರಂಥವು ನಮ್ಮ, ಸುಮಾರು ೧೨ ವರ್ಷಗಳ ದೀರ್ಘಾಭ್ಯಾಸದ ಫಲವು. ನಮ್ಮಷ್ಟಕ್ಕೆ ನಾವು ಅಭ್ಯಾಸ ಮಾಡುತ್ತ ಆನಂದಪಡುತ್ತಿರುವಾಗ ಆಕಸ್ಮಿಕವಾಗಿ (ಪ್ರಬಂಧ-ಪರಿಚಯ ಓದಿರಿ) ಅದಕ್ಕೆ ಮೂರ್ತಸ್ವರೂಪ ಉಂಟಾಯಿತು. ನಾವು ನಮ್ಮ ಸಂಶೋಧನೆಯಲ್ಲಿ ಸಂಗ್ರಹಿಸಿದ್ದ ಸಂಗತಿಗಳಿಗೆ ಆಧಾರಗಳನ್ನು ಕೊಡಬೇಕಾಗಿತ್ತು. ಆದರೆ, ಜೇನುನೊಣವು ಮಧುವನ್ನು ಸಂಗ್ರಹಿಸಿಡುವ ಆನಂದದಲ್ಲಿದ್ದಾಗ ಅದು ಆ ಮಧುದನ್ನು ಇಂತಿಂಥ ಹೂವುಗಳಿಂದಲೇ ಆರಿಸಿತೆಂಬುದನ್ನು ಅದಕ್ಕೆ ಹೇಳಲಾದೀತೆ ? ಅಲ್ಲದೆ, ಕುಡಿಯುವವರಿಗೆ ಮಧುವಷ್ಟು

ಸಾಲದೆ ? ಆಗಿನ ಕಾಲವೆಂದರೆ ಕರ್ನಾಟಕರೇ ಕರ್ನಾಟಕವನ್ನು ತುಚ್ಛೀ-ಕರಿಸುತ್ತಿದ್ದ ಕಾಲವು. ಆದಕಾರಣ, ಅವರಲ್ಲಿ ಅಭಿಮಾನ ಹುಟ್ಟಿಸುವುದೇ ಆಗಿನ ಕಾರ್ಯವಾಗಿತ್ತು. ಆ ಕಾರ್ಯ ಇದರ ಮೂಲಕ ಬಹು ಮಟ್ಟಿಗೆ ಸಾಧಿಸಿತೆಂಬುದು ನಮಗೆ ಹೆಮ್ಮೆಯ ಮಾತು. ಆದರೆ, ಆ ಕಾರಣದಿಂದ ಇದರ ಉಪಯುಕ್ತತೆ ಈಗ ಕಡಿಮೆಯಾಗಿದೆ ಎಂದು ಮಾತ್ರ ಹೇಳಲಾಗದು. ಏಕೆಂದರೆ, ಇದೀಗ ಹಲವರಲ್ಲಿ ಜಿಜ್ಞಾಸಾಬುದ್ಧಿ ಜಾಗ್ರತವಾಗಿದೆ. ಅಂಥವರಿಗೆ ಇದು ಮಾರ್ಗದರ್ಶಿಯಾಗದೆ ಇರದು. ಅಲ್ಲದೆ ಇದೀಗ " ಹಳೆಯದನ್ನು ಹೊಗಳಿ ಫಲವೇನು, ಹಿಂದಿನ ಪೌರುಷದ ಮಾತು ಸಾಕು " ಎಂಬ ಅಪಸ್ವರ ಕೇಳಿಬರುತ್ತಿದೆ. ಅಂಥವರಿಗೆ, ಇತಿಹಾಸದ ಮಹತ್ವವೇ ಗೊತ್ತಿಲ್ಲವೆಂದು ದುರ್ದೈವದಿಂದ ಹೇಳಬೇಕಾಗುತ್ತದೆ. ಅಹುದು, ಕೇವಲ ಹೊಗಳುಭಟ್ಟರಾಗುವುದಕ್ಕೆ ನಾವು ಈ ಪುಸ್ತಕ ಬರೆದಿಲ್ಲ. ಭಾವೀಭಾರತದ ನಿರ್ಮಾಣಕ್ಕೆ ಇಂಥ ಗ್ರಂಥಗಳು ಅವಶ್ಯವೆಂಬ ಬುದ್ಧಿಯಿಂದ ಬರೆದಿರುವೆವು. ಇದರ ೧ನೆಯ ಆವೃತ್ತಿಯಲ್ಲಿಯೇ ಹೀಗೆಂದು ಎಚ್ಚರಿಸಿರುವೆವು— " ಆದರೆ, ಕರ್ನಾಟಕಸ್ಥರೇ, ನಾವು ನಮ್ಮ ರಾಷ್ಟ್ರೀಯ ಧ್ಯೇಯವನ್ನು ಮಾತ್ರ ಎಂದೆಂದಿಗೂ ಕಣ್ಣು ಮುಂದಿನಿಂದ ಕಿತ್ತಬಾರದು. " ನಮ್ಮ ಪೂರ್ವಜರು ದೊಡ್ಡವರಿದ್ದರು. ವಿದ್ವಾಂಸರಿದ್ದರು, ಬಲಾಢ್ಯರಿದ್ದರು, ಅವರ ವೈಭವವು ಅಪಾರವಾಗಿತ್ತು ಎಂದು ಮುಂತಾಗಿ ಒರಲುತ್ತ ಕುಳಿತ ಮಾತ್ರಕ್ಕೆ ಕಾರ್ಯವಾಗಲಿಲ್ಲ. ಆ ವಿಚಾರಗಳಿಂದ ಉತ್ಸಾಹಗೊಂಡು, ವರ್ತಮಾನಕಾಲದ ಹೀನಸ್ಥಿತಿಯನ್ನು ದೂರ ಮಾಡಬೇಕೆಂದು ಪ್ರತಿಜ್ಞೆಮಾಡಿ ಭವಿಷ್ಯಕಾಲದ ಧ್ಯೇಯವನ್ನು ಪಡೆಯಲಿಕ್ಕೆ ಈ ಇತಿಹಾಸದ ಸಹಾಯವನ್ನು ಪಡೆದರಲ್ಲವೇ ಇದರ ಪ್ರಯೋಜನ ? ಹಿಂದಿನ ವೈಭವವನ್ನು ನೆನಿಸುವುದು ನಿರರ್ಥಕವೆಂದು ತಿಳಿಯುವುದು ಎಷ್ಟು ಹೆಡ್ಡತನವೋ ಅಷ್ಟೇ ಹಿಂದಿನ ವೈಭವವನ್ನು ನೆನಿಸಿ ಮುಳು ಮುಳು ಅಳುತ್ತ ಕೈಕಾಲು ಕಳೆದುಕೊಂಡು ಕೂಡ್ರುವದೂ ತಿರಸ್ಕರಣೀಯವು. (ಪುಟ ೧೩೧).

" ನನ್ನ ಜೀವನಸ್ಮೃತಿಗಳು " ಎಂಬ ಪುಸ್ತಕದಲ್ಲಿ " ಹೀಗೆ ನಮ್ಮ ಕಾರ್ಯಕ್ಷೇತ್ರವು ಕರ್ನಾಟಕವಾದರೂ ಭರತಭೂಮಿಯೇ ಧರ್ಮ

ಕ್ಷೇತ್ರವು. ಕನ್ನಡನುಡಿಯೂ ನಾಡೂ ನಮ್ಮ ನಡು-ಮನೆಯಾದರೂ ವಿಶ್ವವೆಂಬೀ ಪಗಡೀಪಟದಲ್ಲಿ ಭರತಭೂಮಿಯೇ ನಮ್ಮ ಕಟ್ಟೆಯಮನೆ ಯೆಂಬುದನ್ನು ನಾವು ಮರೆತಿಲ್ಲ. ರಾಷ್ಟ್ರ ನಿರ್ಮಾಣದಲ್ಲಿ ಇತಿಹಾಸದ ಮಹತ್ವವು ಎಷ್ಟಿವೆಯೆಂಬುದನ್ನು ಅರಿತು ಮಾನ್ಯ ರಾಜೇಂದ್ರಪ್ರಸಾದರೆ ಮುಂತಾದವರು ನೂತನ ಭಾರತ ಇತಿಹಾಸ ಬರೆಯಿಸುವುದಕ್ಕೆ ಪ್ರಯ ತ್ನಿಸುತ್ತಿರುವರು. ಮಾನ್ಯ ನೆಹರೂರವರು ಮೊನ್ನೆ ಮೊನ್ನೆ ಅಮೇರಿಕೆ ಯಲ್ಲಿ ಮಾಡಿದ ಭಾಷಣದಲ್ಲಿ ಇತಿಹಾಸವನ್ನು ಆಳವಾಗಿ ಅಭ್ಯಸಿಸುವು ದಕ್ಕೆ ತರುಣರಿಗೆ ಎಚ್ಚರಿಸಿರುವರು. ಕರ್ನಾಟಕವು $\frac{1}{3}$ ಭಾರತವನ್ನು ಸಾವಿರಾರು ವರ್ಷಗಳ ವರೆಗೆ ಆಳಿದ ದೇಶವು. ಇದರ ಪ್ರಭಾವವು ಧರ್ಮ, ರಾಜಕಾರಣ, ಸಾಹಿತ್ಯ, ಕಲೆ ಮುಂತಾದ ಸಂಸ್ಕೃತಿಯ ಪ್ರತಿಯೊಂದು ಅಂಗದಲ್ಲಿ ಕಂಡುಬರುತ್ತಿದೆ. ಭಾರತೀಯ ಸಂಸ್ಕೃತಿಯನ್ನು ನಮ್ಮ ಇತಿಹಾಸವು ವಿಶಿಷ್ಟಬಗೆಯಾಗಿ ರೂಪಿಸಿದೆ. ಅದನ್ನು ತಿಳಿಯುವುದು ಅವಶ್ಯವಲ್ಲವೇ? ಹತ್ತಾರು ಸಾವಿರ ಶಿಲಾಲಿಪಿಗಳು ಇನ್ನೂ ಹೂಳಿ ಹೋಗಿವೆ. ಈಗಿನ ಆಮೆಯ ನಡಿಗೆಯಂತೆ ಸಂಶೋಧನ ಸಾಗಿದರೆ ನಮ್ಮ ಇತಿಹಾಸವು ಪೂರ್ಣವಾಗುವುದಕ್ಕೆ ನೂರು ವರ್ಷಗಳು ಬೇಕಾದಾವು! ಅದಕ್ಕೆ ತರು ಣರೇ, ಎಚ್ಚರಾಗಿರಿ; ಈ ಗತವೈಭವದ ಮಹತ್ವವನ್ನರಿಯಿರಿ.

ನಮ್ಮ ಗ್ರಂಥವು ಗೀತೆಯ ಮಾದರಿಯ ಮೇಲೆ ರಚಿಸಿದ ಗ್ರಂಥವೆಂ ಬುದನ್ನು ನಾವು ಈ ಹಿಂದಿನ ಆವೃತ್ತಿಯ ಪ್ರಸ್ತಾವನೆಯಲ್ಲಿ ಹೇಳಿಯೇ ಇರುವೆವು.

ಪ್ರೊ. ಮುಗಳಿ ರಂಗರಾವ ಎಂ. ಎ. ಇವರು ಈ ಗ್ರಂಥದ ೬ನೆಯ ಆವೃತ್ತಿಗೆ ಅಮೂಲ್ಯವಾದ ಮುನ್ನುಡಿಯನ್ನು ಒದಗಿಸಿದ್ದಕ್ಕಾಗಿ ಅವರಿಗೆ ನಮ್ಮ ಸಪ್ರೇಮ ವಂದನೆಗಳು.

ಧಾರವಾಡ<br>೧೫–೮–೧೯೫೦<br>ಸ್ವಾತಂತ್ರ್ಯೋತ್ಸವ<br>ದಿನ

ಆಲೂರ ವೆಂಕಟರಾಯ<br>ಗೀತಾಭವನ, ಧಾರವಾಡ

# ಪ್ರೊ. ರಂ. ಶ್ರೀ. ಮುಗಳಿ ಅವರ ಮುನ್ನುಡಿ

'ಕರ್ನಾಟಕ ಗತವೈಭವ' ಈ ಪುಸ್ತಕವು ಕರ್ನಾಟಕದ ಹಾಗೆ 'ಗತವೈಭವ' ವಾಗಿ ಹೋಯಿತೆಂದು ಹಲವರು ತಿಳಿದಿರಬಹುದು. ಆದರೆ ಕರ್ನಾಟಕದ ಗತವೈಭವವು ಇಂದಿಗೂ ನೆನೆಯತಕ್ಕುದು ಎಂಬುದನ್ನು ತಿಳಿದು ಸ್ಫುರಣ ಹೊಂದಬೇಕಾದರೆ ಈ ಪುಸ್ತಕವನ್ನು ಯಾವಾಗಲೂ ಓದ ಬೇಕು. ಇದರ ವೈಭವವೆಂದೂ ಗತ ಎಂದರೆ ಮಾಸಿದ, ಕಳೆದುಹೋದ ವೈಭವವಲ್ಲ.

ಹಿರಿಯರಾದ ಶ್ರೀ ಆಲೂರ ವೆಂಕಟರಾಯರು ಇದರ ಆರನೆಯ ಆವೃತ್ತಿಗೆ ಮುನ್ನುಡಿ ಬರೆಯಬೇಕೆಂದು ನನ್ನನ್ನು ಕೇಳಿದಾಗ ಮೇಲಿನ ಕಾರಣಕ್ಕಾಗಿ ನಾನು ಒಪ್ಪಿಕೊಂಡೆ. ಈ ಪುಸ್ತಕದ ಸ್ವರೂಪವನ್ನೂ ಮಹತ್ವವನ್ನೂ ತಿಳಿಸುವುದು ಅಗತ್ಯ ಎಂದು ತೋರಿತು. ಕನ್ನಡಿಗರಲ್ಲಿ ಎಚ್ಚರೇನೋ ಹುಟ್ಟಿದೆ. ಆದರೆ ಎಲ್ಲರಲ್ಲಿ ತನ್ನರಿವು ಎಂಬುದು ಸಾಕಷ್ಟು ತಲೆದೋರಿಲ್ಲ. ಎಂದ ಮೇಲೆ ಇಂಥ ಪುಸ್ತಕಗಳ ಅಗತ್ಯ ಐವತ್ತು ವರುಷಗಳ ಹಿಂದೆ ಆದಷ್ಟು ಇನ್ನೂ ಇದೆ. ಕನ್ನಡ ಜನಕ್ಕೆ ತನ್ನರಿವು ತನಿಗೊಂಡು ಉಂಟಾದ ಮೇಲೆ, ಇಂಥ ಪುಸ್ತಕಗಳು ಬೆಳೆಯುತ್ತಿರುವ ಮಕ್ಕಳ ಹೃದಯದಲ್ಲಿ, ಪ್ರೌಢ ಅಭ್ಯಾಸಿಗಳ ಚಿತ್ತಭೂಮಿಯಲ್ಲಿ ಕನ್ನಡ ಸಂಸ್ಕೃತಿಯ ಅಭಿಮಾನ ಬೀಜಗಳನ್ನು ಬಿತ್ತಲು ನೆರವಾಗುತ್ತವೆ. ಅಂತೇ ಇದಕ್ಕೆ ಚಿರಕಾಲವಾದ ಬೆಲೆಯಿದೆ. ಕಾಲಕ್ಕೆ ಸಂಬಂಧಿಸಿದ ಹಾಗೂ ಕಾಲವನ್ನು ಮೀರಿದ ಹೀಗೆ ಎರಡೂ ಬಗೆಯ ಮಹತ್ವ ಇದಕ್ಕಿದೆ. ಕಾಲ ಸಂಬಂಧಿಯಾಗಿ ಇದನ್ನು ನೋಡಿದರೆ, ಇದೊಂದು ಸಣ್ಣ ಸ್ವರೂಪದಲ್ಲಿ ಯುಗ ಪ್ರವರ್ತಕವಾದ ಕೃತಿಯಾಗಿದೆ. ಕನ್ನಡ ಜನತೆಯ ಕನ್ನಡದ ಕಣ್ಣನ್ನು ಇದು ತೆರೆಯಿಸಿತು. ಕನ್ನಡ ಹೃದಯವನ್ನು ಕೆರಳಿಸಿತು, ಅರಳಿಸಿತು. ಶತಶತಮಾನದಿಂದ ಹೆರವರ ತೊತ್ತಾಗಿ ಸ್ವಂತದರಿವನ್ನು ಕಳೆದುಕೊಂಡು ಸುಪ್ತವಾದ ಜಡವಾದ ಕಣ್ಣನ್ನು ಇದು ಆಗಲಾಗಿ ತೆರೆ

ಯಿಸಿ ವಿಶಾಲವಾದ ನೋಟವನ್ನು ಕೊಟ್ಟಿತು; ಭಾರತ ಮತ್ತು ಕರ್ನಾ-
ಟಕ ಇವುಗಳ ಸಮ್ಯಗ್ದರ್ಶನವನ್ನು ಒದಗಿಸಿತು. ಶ್ರೀ ಆಲೂರ ವೆಂಕಟ
ರಾಯರು ಎಷ್ಟು ನಾಡು ನುಡಿಗಳ ಅಭಿಮಾನಿಗಳಾಗಿದ್ದರೋ ಅಷ್ಟೇ
ತತ್ವಪ್ರಿಯರೂ ಆಗಿದ್ದವರು. ಕರ್ನಾಟಕದ ಗತವೈಭವವನ್ನು ಅರಿಯದೆ
ಅನ್ಯಭಾಷೆ ಸಂಸ್ಕೃತಿಗಳ ಮೋಹಕ್ಕೊಳಗಾದ ಕನ್ನಡಿಗರನ್ನು ಕಂಡು
ಅವರು ಸಾತ್ವಿಕ ಸಂತಾಪದಿಂದ ಕೆರಳಿದರು. ಅವರ ಸಂತಾಪವು
ಸಾತ್ವಿಕವಾಗಿತ್ತೆಂದೇ ಅವರ ಕರ್ನಾಟಕ ದರ್ಶನವು ವಿಶಾಲವೂ ತತ್ವ
ನಿಷ್ಠವೂ ಆಯಿತು. ಅದು ಸಂಕುಚಿತವೂ ಮಾರಕವೂ ಸರ್ವಥಾ
ಆಗಲಿಲ್ಲ. ಕರ್ನಾಟಕದ ಸರ್ವವಿಧವಾದ ಪುನರುಜ್ಜೀವನಕ್ಕಾಗಿ ಅವರು
ಮಾಡಿದ ಕಾರ್ಯವನ್ನು ಕುರಿತು ಇಲ್ಲಿ ವಿಸ್ತರಿಸಿ ಬರೆಯಬೇಕಾಗಿಲ್ಲ.
ಈ ಪುಸ್ತಕದ ಮೂಲಕವಾಗಿ ಮಾತ್ರ ಅವರು ಹೊಸ ಒಂದು ಪೀಳಿಗೆ
ಯನ್ನು ನಿರ್ಮಾಣಮಾಡಲು ನೆರವಾದರೆಂಬುದನ್ನು ನಾವು ತುಂಬಿದೆದೆ
ಯಿಂದ ನೆನೆಯಬೇಕು. ಅದರಲ್ಲಿ ಅಂಥ ಭಾವ ಪ್ರಚೋದಕವಾದ
ಸತ್ವವಿದೆ. ಬುದ್ಧಿ ಪ್ರೇರಕವಾದ ತತ್ವವಿದೆ.

ಇದರಲ್ಲಿಯ ವಿಷಯ ಕ್ರಮ ಮತ್ತು ಸಂಯೋಜನೆಯನ್ನು
ನೋಡಲಾಗಿ ಇದು ಸ್ಫೂರ್ತಿದಾಯಕ ಹಾಗೂ ಚಾರಿತ್ರಿಕ ಸ್ವರೂಪ-
ದ್ದೆಂಬುದನ್ನು ಅರಿತುಕೊಳ್ಳಬಹುದು. ಮೊದಲಿನ ಎರಡು ಪ್ರಕರಣ
ಗಳಂತೂ ಓದುಗರ ಅಂತಃಕರಣದ ಬೇರುಗಳನ್ನೇ ಅಲುಗಾಡಿಸುವಷ್ಟು
ಭಾವೋಜ್ವಲವಾಗಿ ಸ್ಫೂರ್ತಿದಾಯಕವಾಗಿವೆ. ಮುಂದಿನ ಪ್ರಕರಣಗಳಲ್ಲಿ
ಚಾರಿತ್ರಿಕ ಜ್ಞಾನವನ್ನು ಗುರುತು ಗೆರೆಯಾಗಿ ಮಾಡಿಕೊಡುವ ಬುದ್ಧಿ
ಹೆಚ್ಚಾಗಿ ತೋರಿದೆ. ಆದಾಗ್ಯೂ ಇವುಗಳಲ್ಲಿ ಸಹ ಭಾವಪ್ರಚೋದಕ
ವಾದ ಅಂಶಗಳು ಇಲ್ಲದಿಲ್ಲ. ತಾವು ಅರಸುಮಕ್ಕಳೆಂದು ಅರಿಯದೆ
ದಿಕ್ಕೆಡಿಗಳಾಗಿ ಕಾಡು ಪಾಲಾದವರನ್ನು ತಿರುಗಿ ತಂದು ಅವರ ವೈಭ
ವದ ನಾಡಿನಲ್ಲಿ ಸುಳಿದಾಡಿಸಿ ಅರಮನೆಯ ಎಲ್ಲ ಭಾಗಗಳನ್ನು ತೋರಿಸಿ
ಹೇಳುವ ಅರಿವುಗಾರನಂತೆ ಲೇಖಕರು ಕರ್ನಾಟಕದ ಇತಿಹಾಸ ಸಾಹಿತ್ಯ,
ಸಂಸ್ಕೃತಿಗಳ ಪರಿಚಯವನ್ನು ಮಾಡಿಕೊಡುತ್ತಲೇ ಹೊಸ ಕ್ಷಿತಿಜವನ್ನು ತೆರೆ
ದಿಟ್ಟು ಹೊಸ ಹೆಮ್ಮೆಯಿಂದ ಹೃದಯವನ್ನು ತುಂಬುತ್ತಾರೆ. ಒಮ್ಮೊಮ್ಮೆ

ಬರಿಯೊಂದು ಇತಿಹಾಸದ ಪುಸ್ತಕದಂತೆ ಶುಷ್ಕ ಸಂಗತಿಗಳ ಮಾಲಿಕೆ ಯಾಗಿ ಆರಂಭದ ಭಾವಾವೇಗದ ಬರೆವಣಿಗೆಯೊಡನೆ ವಿಸಂಗತವೆಂದು ತೋರಬಹುದು. ಕಲಾದೃಷ್ಟಿಯಿಂದ ಇದರ ಸಮಗ್ರವಾದ ಸಂಯೋಜನೆ ಹೆಚ್ಚು ಸುಂದರವೂ ಉಜ್ವಲವೂ ಆಗಬೇಕಾಗಿತ್ತು. ಆದರೆ ಎರಡು ಮೂರು ಉದ್ದೇಶಗಳ ಮಿಶ್ರಣದಿಂದ ಇದಕ್ಕೆ ವಿಶಿಷ್ಟವಾದ ಸ್ವರೂಪ ಬಂದಿದೆಯೆಂಬುದನ್ನೂ ಅಂದಿನ ಕಾಲವೇ ಇದಕ್ಕೆ ಕಾರಣವೆಂಬುದನ್ನೂ ತಿಳಿಯಬೇಕು.

ಇದರ ಶೈಲಿ ಹೊಸಗನ್ನಡದ ಹೊಸತಿಲಲ್ಲಿ ಹಚ್ಚಿಟ್ಟ ಒಂದು ವಿಶೇಷವಾದ ದೀವಿಗೆಯಂತೆ ಇದ್ದುದು. ಭಾವಪ್ರದೀಪ್ತವಾದ ಬರೆವಣಿಗೆಯಲ್ಲಿ ಅದು ತಿಳಿಯಾದ ಆದರೂ ಕಿಡಿಕಿಡಿಯಾದ ಗದ್ಯದಿಂದ ಕೂಡಿದೆ. ಅಂಥ ಗಂಡುತನ, ಗಡಸು, ಅದೇಕೆ ಉರಟು ಸಹ ಇದೆ ಎನ್ನಬಹುದು. ಸಂಸ್ಕೃತದಿಂದಲೂ ಬಳಕೆ ಮಾತಿನಿಂದಲೂ ತನ್ನ ಕೈಗೆ ಸಿಕ್ಕ ಸಾಮಗ್ರಿಯನ್ನು ತೆಗೆದುಕೊಂಡು ಕನ್ನಡದ ಕಹಳೆಯನ್ನು ಕೂಗಿ ಸೋಮಾರಿತನದ ಕೂಡ ಕಾಳಗಕ್ಕೆಂದು ಎಚ್ಚರಿಸುತ್ತ ಹೊರಟಂತಿದೆ ಈ ಶೈಲಿ. ಕರ್ನಾಟಕವು ಮೃತರಾಷ್ಟ್ರವೆ ? ಈ ಪ್ರಕರಣವು ಈ ದೃಷ್ಟಿಯಿಂದ ಹೊಸಗನ್ನಡ ಗದ್ಯದ ಚರಿತ್ರೆಯಲ್ಲಿ ವಿಶೇಷ ಸ್ಥಾನವನ್ನು ಪಡೆಯತಕ್ಕುದಾಗಿದೆ. ಜ್ಞಾನದಾಯಕವಾದ ಭಾಗದಲ್ಲಿ ಅದು ಸ್ವಂತವಾಗಿ ಹರಿಯುವ ಹೊಳೆಯಂತೆ ಏಕಪ್ರಕಾರವಾಗಿದೆ. ಸರಳವೂ ನಿರಾಡಂಬರವೂ ಆಗಿದೆ. ಶ್ರೀ ಆಲೂರ ವೆಂಕಟ-ರಾಯರು ಹೊಸ ಗದ್ಯದ ಪ್ರಾರಂಭಕಾಲದಲ್ಲಿ ಪ್ರಮುಖರೆಂಬುದನ್ನೂ, ಶೈಲಿಕಾರರೆಂಬುದನ್ನೂ ಈ 'ಗತವೈಭವ' ವು ಯಾವಾಗಲೂ ಸಾರುತ್ತ ನಿಲ್ಲುವದು. ಚಿರಕಾಲಿಕವಾದ ಉಪಯೋಗದ ದೃಷ್ಟಿಯಿಂದ ಇದನ್ನು ಹೊಸಹೊಸ ಆವೃತ್ತಿಯ ಕಾಲಕ್ಕೆ ಪರಿಷ್ಕಾರಗೆರಳಿಸುವುದು ಅಗತ್ಯ. ಲೇಖಕರು ಕೆಲಮಟ್ಟಿಗೆ ಇದನ್ನು ಮಾಡುತ್ತ ಬಂದಿದ್ದಾರೆ. ಆದರೆ ಕನ್ನಡ ಇತಿಹಾಸ ಮತ್ತು ಸಂಸ್ಕೃತಿಗಳ ಬಗ್ಗೆ ಈಗ ಹೆಚ್ಚಾದ ಜ್ಞಾನಸಾಮಗ್ರಿ ದೊರೆತಿದೆ, ಇನ್ನೂ ದೊರೆಯಲಿದೆ. ಇವುಗಳಲ್ಲಿ ನಿರ್ವಿವಾದ ಸಂಗತಿಗಳನ್ನು ಇದರಲ್ಲಿ ಕಾಲಕಾಲಕ್ಕೆ ಸೇರಿಸಲಾಗುವದು ಎಂದು ನಂಬಿದ್ದೇನೆ.

ವಿಶ್ರಾಮ ಬಾಗ ೨೩–೧–೫೦ ರಂ. ಶ್ರೀ. ಮುಗಳಿ

# ಓದುಗರು ಇತ್ತ ಲಕ್ಷ್ಯವಿಡಬೇಕು

## ( ೩ನೆಯ ಆವೃತ್ತಿಯ ಪ್ರಸ್ತಾವನೆಯಿಂದ )

ಕರ್ನಾಟಕ ದೇವಿಯ ಮೂರ್ತಿಯು ನಮ್ಮ ಹೃದಯದಲ್ಲಿ ಮೊದಲಿಗೆ ಒಡಮೂಡಿದಾಗ ಆ ಮೂರ್ತಿಯ ಚಿತ್ರವು ಸದ್ದಾಮುದ್ದಾ ಇದ್ದಂತೆಯೇ ಕನ್ನಡಿಗರೆದುರಿಗೆ ಇಡುವುದು ಒಳಿತೆಂದು ತಿಳಿದು ಆಗ ಇದ್ದಕ್ಕಿದ್ದಂತೆಯೇ ಇಟ್ಟಿರುವೆವು. ಈ ಗ್ರಂಥದಲ್ಲಿ ಹೊಸ ಸುಧಾರಣೆ ಮಾಡಲಿಕ್ಕೆ ಹೋದರೆ ಮುಂಚಿನ ಸ್ವಯಂಭೂ ಚಿತ್ರಕ್ಕೆ ಹಾನಿಯುಂಟಾಗುತ್ತದೆಂದು ನಮ್ಮ ಸ್ನೇಹಿತರು ಹೇಳಿದ ಕಾರಣ, ನಾವು ಈ ಗ್ರಂಥದಲ್ಲಿ ಹೊಸ ಶೋಧಗಳಾವವನ್ನೂ ಸೇರಿಸಿರುವದಿಲ್ಲ. ಓದುಗರು ಇತ್ತೀಚಿನ ಐತಿಹಾಸಕ ನಿಶ್ಚಿತ ಶೋಧಗಳನ್ನು ಓದಿಕೊಂಡು, ಈ ಗ್ರಂಥದಲ್ಲಿ ಅವುಗಳನ್ನು ಅನ್ವಯಿಸಿಕೊಳ್ಳಬಹುದು. ಆದರೆ, ಇಷ್ಟು ಮಾತ್ರ ಹೇಳಬಲ್ಲೆವು. ಏನೆಂದರೆ, ಎಷ್ಟೇ ಹೊಸ ಸಂಗತಿಗಳು ಗೊತ್ತಾದರೂ ಒಟ್ಟಿನ ಮೇಲೆ ಈ ಗ್ರಂಥದಲ್ಲಿ ಹೇಳಿದ ಮುಖ್ಯ ವಿಧಾನಗಳಿಗೆ ಯಾವ ಧಕ್ಕೆಯೂ ತಗುಲುವುದಿಲ್ಲ. ಆದುದರಿಂದ ವಾಚಕರು ಇದರಲ್ಲಿ ಹೇಳಿದ ನಮ್ಮ ಮುಖ್ಯ ವಿಧಾನಗಳು ಶಾಶ್ವತವಾಗಿವೆಯೆಂದು ತಿಳಿಯಲು ಅಡ್ಡಿ ಇಲ್ಲ.

ಹಾಗೆಯೇ ಪೂರಕ ಪ್ರಕರಣಗಳಲ್ಲಿ ಸಂಗ್ರಹಿಸಿದ ಮಾಹಿತಿಯು ಮತ್ತಾವಲ್ಲಿಯೂ ದೊರೆಯಲಾರದು. ಅದು ಇತಿಹಾಸದ ಅಭ್ಯಾಸಿಗಳಿಗೆ ಅತ್ಯಗತ್ಯವಾದುದು.

ಆಲೂರ ವೆಂಕಟರಾವ

## ಮೊದಲನೆಯ ಆವೃತ್ತಿಯ ಪ್ರಸ್ತಾವನೆ

ಶ್ರೀ

# ಪ್ರಬಂಧ ಪರಿಚಯ

"ಮಹಾರಾಷ್ಟ್ರ ಬೇರೆ, ಕರ್ನಾಟಕ ಬೇರೆ ಅಲ್ಲ. ಎರಡರಲ್ಲಿಯೂ ಒಂದೇ ರಕ್ತವು ಆಡುತ್ತದೆ; ಎರಡೂ ದೇಶಗಳ ಭಾಷೆಯೂ ಮುಂಚೆ ಒಂದೇ ಅಂದರೆ ಕನ್ನಡವಿತ್ತು. ಭಾಷೆಯ ವಿಷಯದಲ್ಲಿ ಮಹಾರಾಷ್ಟ್ರವು ತನ್ನ ಮೊದಲ ಭಾಷೆಯನ್ನು ಬಿಟ್ಟು ಮರಾಠಿಯಾಗಿದೆ. *

—ಲೋಕಮಾನ್ಯ ಟಿಳಕ

ವರ್ತಮಾನ ಕಾಲವೆಂಬ ವೃಕ್ಷಕ್ಕೆ ಭೂತಕಾಲವೇ ಬೀಜ; ಭವಿಷತ್ ಕಾಲವೇ ಫಲ. ಭವಿಷ್ಯತ್ಕಾಲದ ರಾಷ್ಟ್ರೀಯ ಫಲವನ್ನು ಪಡೆಯಲಪೇಕ್ಷಿಸುವವರು ಭೂತಕಾಲದ ಬೀಜಸಾಮರ್ಥ್ಯವನ್ನು ಅರಿತುಕೊಳ್ಳುವದು ಅವಶ್ಯವು. ಈ ದೃಷ್ಟಿಯಿಂದ ನೋಡಲು, ರಾಷ್ಟ್ರೀಯ ಕಾರ್ಯಕ್ಕೆ ಇತಿಹಾಸವು ಹೇಗೆ ಸಾಧನವಾಗುವದೆಂಬುವದು ಮನವರಿಕೆಯಾಗುವದು, ಭರತಭೂಮಿಯ ಮಿಕ್ಕ ಜನಾಂಗಗಳು ತಮ್ಮ ತಮ್ಮ ಇತಿಹಾಸವನ್ನು ಹುರುಪಿನಿಂದ ಅಭ್ಯಾಸ ಮಾಡುತ್ತಿರಲು ನಮ್ಮ ಕರ್ನಾಟಕವು ಇನ್ನೂ ಕುಂಭಕರ್ಣ ನಿದ್ರೆಯಲ್ಲಿಯೇ ಮಲಗಿದೆ. ಆದುದರಿಂದ, ಕರ್ನಾಟಕದ "ಮಹಾತ್ಮ್ಯೆ" ವನ್ನು ಹೊಗಳಿ, ಇನ್ನೂ ಎಚ್ಚರಾಗದಿದ್ದ ತರುಣರನ್ನು ಎಚ್ಚರಿಸಬೇಕೆಂದು ಈ ಪ್ರಬಂಧವನ್ನು ಕೈಕೊಂಡಿದ್ದೇವೆ.

ಇದು ಕೇವಲ ಇತಿಹಾಸವಲ್ಲ; ಆದರೆ ಕಟ್ಟುಕಥೆಯೂ ಅಲ್ಲ; ಕರ್ನಾಟಕದ ಇತಿಹಾಸದೊಳಗಿನ ಚಿತ್ತಾಕರ್ಷಕವಾದ ಹಲಕೆಲವು ಸಂಗತಿಗಳನ್ನು ಅನೇಕ ಪುಸ್ತಕಗಳಿಂದ ಆರಿಸಿ, ನಮಗೆ ತೋರಿದ ಕೆಲವು ವಿಧಾನಗಳನ್ನು ಅವುಗಳಲ್ಲಿ ಬೆರಿಸಿ, ಆ ಮಿಶ್ರಣವನ್ನು ಕಾಸಿ ಕರ್ನಾಟಕದ ಅಭಿಮಾನವೆಂಬ ಎರಕದಲ್ಲಿ ಕೈಲಾದಷ್ಟು ಮಟ್ಟಿಗೆ ಹೊಯ್ದು ಈ ಪ್ರಬಂಧವನ್ನು ರಚಿಸಲಾಗಿದೆ. ಆದುದರಿಂದ ನಮ್ಮ ಪೂರ್ವಜರ ಗುಣಾನುವಾದವೂ ಈ ಪ್ರಬಂಧದಲ್ಲಿ ಕಂಡುಬರುವದು. ನಾವು ಹೊಗಳು ಭಟ್ಟ

---

* ಲೋಕಮಾನ್ಯರವರು ತಾ. ೨೩-೧-೧೯೦೭ ನೇ ಇಸ್ವಿಯ ದಿವಸ ಗುರ್ಲಹೊಸೂರಿನಲ್ಲಿ ಮಾಡಿದ ಭಾಷಣದಿಂದ.

ರಂತೆ ನಮ್ಮ ಪೂರ್ವಜರನ್ನು ಹೀಗೆ ಹೊಗಳಿರುವ ಮಾತ್ರದಿಂದ, ಅವರು ಲೋಕವಿಲಕ್ಷಣರೂ ಸರ್ವಗುಣಪರಿಪೂರ್ಣರೂ ದೋಷವಿವರ್ಜಿತರೂ ಆಗಿದ್ದರೆಂದು ನಮ್ಮ ಅಭಿಪ್ರಾಯವಿರುವದಾಗಿ ಯಾರೂ ಊಹಿಸಕೂಡದು. ಆದರೆ ಇಲ್ಲದ ಸಲ್ಲದ ದೋಷಗಳನ್ನು ಕೇಳಿ ಕೇಳಿ ನಮ್ಮ ಕಿವಿಗಳು ಮರಗಟ್ಟಿರುತ್ತವೆ; ಮತಿಯು ಮಸಣಿಸಿದೆ; ಕ್ರಿಯಾಶಕ್ತಿಯು ಕುಗ್ಗಿದೆ. ಮತ್ತು "ನಾವು ಎಂದಿಗೂ ಹೇಡಿಗಳೇ. ಮುಂದೆಯೂ ಹಾಗೆಯೇ ಉಳಿಯುವವರು" ಎಂಬ ರಾಷ್ಟ್ರವಿಘಾತಕ ಭಾವನೆಯು ನಮ್ಮಲ್ಲಿ ಬೇರೂರಿದೆ; ಆದ್ದರಿಂದ ನಾವು ಅಭಿಮಾನಶೂನ್ಯರಾಗಿದ್ದೇವೆ. ಆತ್ಮವಿಶ್ವಾಸವನ್ನು ಕಳೆದುಕೊಂಡಿದ್ದೇವೆ, ಈಗ

> ಅಭಿಮಾನೋ ಧನಂ ಯೇಷಾಂ ಚಿರಂಜೀವಂತು ತೇ ನರಾಃ
> ಅಭಿಮಾನವಿಹೀನಾನಾಂ ಕಿಂ ಧನೇನ ಕಿಮಾಯುಷಾ ॥

ಎಂಬಂತೆ ಅಭಿಮಾನಶೂನ್ಯರಾದ ನಾವು ಇದ್ದೂ ಇಲ್ಲದಂತೆಯೇ ಆಗಿದೆ. ಆದುದರಿಂದ 'ನಾವೂ ಮನುಷ್ಯರು; ನಮ್ಮನ್ನೂ ದೇವರೇ ಹುಟ್ಟಿಸಿರುವನು; ನಮ್ಮಿಂದಲೂ ಹಿಂದಕ್ಕೆ ಮಹಾಕಾರ್ಯಗಳು ನೆರವೇರಿವೆ; ನಮಗೂ ಬುದ್ಧಿಯುಂಟು, ಭಾಷೆಯುಂಟು, ರಾಷ್ಟ್ರವುಂಟು, ವೈಭವವುಂಟು, ಇತಿಹಾಸವುಂಟು; ಜಗತ್ತನ್ನು ವ್ಯಾಪಿಸಿರುವ ಮಹತ್ವದ ತತ್ವವಿಚಾರಗಳು ನಮ್ಮಿಂದಲೇ ಪ್ರಸೃತವಾಗಿವೆ; ನಮ್ಮವರೂ ಗಂಗಾವಾರಿಧಿಯೊಳ್ ಆತ್ಮತುರಂಗಮಂ ಮಿಸಿಸಿರ್ದರು. ನಮ್ಮಲ್ಲಿಯೂ ವಿದ್ವಾಂಸರೂ ವೀರರೂ ಉದಯಿಸಿದರು." ಇವೇ ಮುಂತಾದ ಕಲ್ಪನೆಗಳನ್ನು ಕನ್ನಡಿಗರಲ್ಲಿ ಹುಟ್ಟಿಸಲು (೧) ಈ ಪ್ರಸ್ತಾವನೆಯ ಪ್ರಾರಂಭದ ಅವತರಣಿಕೆಯಲ್ಲಿ ಲೋಕಮಾನ್ಯರವರು ಹೇಳಿದಂತೆ ಹಿಂದಕ್ಕೆ ಈಗಿನ ಮಹಾರಾಷ್ಟ್ರದಲ್ಲಿಯೂ ಕನ್ನಡ ಭಾಷೆಯೇ ಪ್ರಚಲಿತವಾಗಿತ್ತು. (೨) ನಮ್ಮ ಕರ್ನಾಟಕವು ಆಗಿನ ಕಾಲಕ್ಕೆ ತಕ್ಕಂತೆ ಇತಿಹಾಸರಂಗದಲ್ಲಿ ಮುಖ್ಯ ಪಾತ್ರವನ್ನು ಸ್ವೀಕರಿಸಿತ್ತು— ಎಂಬೆರಡು ಸಂಗತಿಗಳನ್ನು ವಾಚಕರ ಲಕ್ಷ್ಯಕ್ಕೆ ತಂದಿಡುವದೇ ಈ ಪ್ರಬಂಧದ ಮೂಲೋದ್ದೇಶವು.

ಕರ್ನಾಟಕದ ಇತಿಹಾಸವನ್ನು ಅಭ್ಯಾಸ ಮಾಡುವವರು ತೀರ ಅಪೂರ್ವ. ಇಂದಿನವರೆಗೆ, ಈ ವಿಷಯಕ್ಕೆ ತರುಣರಲ್ಲಿ ಸಂಪೂರ್ಣ

ಅನಾಸ್ಥೆಯೋ ಉಂಟೆಂದರೂ ಸಲ್ಲುವದು. ಈ ಅನಾವಸ್ಥೆಯನ್ನು ದೂರ ಗೊಳಿಸಿ, ಕರ್ನಾಟಕದ ಇತಿಹಾಸವನ್ನು ಅಭ್ಯಾಸ ಮಾಡುವವರಿಗ ಉಂಟಾ ಗಬಹುದಾದ ತೊಂದರೆಗಳನ್ನು ತಿಳಿಯ ಹೇಳಿ, ಅವರಿಗೆ ಮಾರ್ಗದರ್ಶಿ ಯಾಗುವಂತೆ ಕೆಲವು ಸೂಚನೆಗಳನ್ನು ಮಾಡುವದೇ ಈ ಪ್ರಬಂಧದ ಎರಡ ನೆಯ ಉದ್ದೇಶವು. ಈ ಉದ್ದೇಶಗಳಿಂದಲೇ ಎರಡು ಪೂರಕ ಪ್ರಕರಣ ಗಳನ್ನು ಜೋಡಿಸಿ, ಇತಿಹಾಸ ಸಂಶೋಧನದ ವಿಷಯವಾಗಿ, ಈ ದೇಶದಲ್ಲಿ ಇಲ್ಲಿಯ ವರೆಗೆ ಆಗಿಹೋದ ಪ್ರಯತ್ನಗಳನ್ನು ಸಂಕ್ಷೇಪವಾಗಿ ವರ್ಣಿಸಿ, ಲಿಪಿಗಳ ಮುದ್ರೆಯನ್ನು ತೆಗೆದುಕೊಳ್ಳುವ ರೀತಿಯನ್ನು ಹೇಳಲಾಗಿದೆ.

ಸಾರಾಂಶ, ಈ ಪ್ರಬಂಧವು ಕರ್ನಾಟಕ ಇತಿಹಾಸದೇವಿಯ ಮಂದಿ ರಕ್ಕೆ ಹೋಗುವ ದಾರಿಯನ್ನು ತೋರಿಸುವ ಕೈಕಂಬವು. ಆ ಮಂದಿರ ದೊಳಗೆ ಪ್ರವೇಶಿಸತಕ್ಕ ಮಹಾದ್ವಾರವನ್ನು ತೆರೆಯುವ ಕೆಲಸವು ಮುಂದಿನ ಇತಿಹಾಸ ಸಂಶೋಧಕರದು; ಅದು ನಮ್ಮ ಯೋಗ್ಯತೆಯ ದಲ್ಲ. ಆ ಮಹಾದ್ವಾರವು ತೆಗೆದು, ಇತಿಹಾಸ ಮಂದಿರಕ್ಕೆ ಪ್ರವೇಶ ದೊರೆ ಯುವ ಮೊದಲು "ಇಗೋ, ಇದೇ ಆ ಪವಿತ್ರವಾದ ದೇವಾಲಯವು; ಇದೋ, ಈ ಬಾಗಿಲ ಕಿಂಡಿಯೊಳಗಿಂದ ಆ ದೇವತೆಯ ದರ್ಶನವನ್ನು ಈಗ ತೆಗೆದುಕೊಳ್ಳಿರಿ" ಎಂದು ಬೊಟ್ಟುಮಾಡಿ ತೋರಿಸುವದಷ್ಟೇ ನಮ್ಮ ಕೆಲಸ.

ಈ ಕೆಲಸಕ್ಕೂ ನಾವು ಎಷ್ಟು ಅನರ್ಹರಿದ್ದೇವೆಂಬುದನ್ನು ಪೂರ್ಣ ವಾಗಿ ಅರಿತಿರುವೆವು. ಇದಕ್ಕಾಗಿಯೇ ನಾವು ಇಷ್ಟು ದಿವಸ ಪ್ರಬಂಧ ವನ್ನು ಬರೆಯಲಿಲ್ಲ. ಆದರೆ, ೪ನೆಯ ಮೇ ೧೯೦೫ನೆಯ ಇಸವಿಯ ದಿವಸ ಆನಿಗೊಂದಿಯ ಆಕಸ್ಮಿಕ ದರ್ಶನದಿಂದ ನಮ್ಮಲ್ಲಿ ಮಿಂಚಿದ ಸ್ಫುರಣವು ನಮ್ಮನ್ನು ಅಣ್ಣಿಗೇರಿ, ಲಕ್ಕುಂಡಿ, ಗುಡಿಗೇರಿ, ಲಕ್ಷ್ಮೇಶ್ವರ, ಹಳೆಬೀಡು, ಬೇಲೂರು, ಕಾರ್ಲೆ, ಕಾನ್ಹೇರಿ, ಬಂಕಾಪೂರ, ಬಾದಾಮಿ, ಪಟ್ಟದಕಲ್ಲು, ಐಹೊಳೆ, ವೇರೂಳ ಮುಂತಾದ ಐತಿಹಾಸಿಕ ಕ್ಷೇತ್ರಗಳಿಗೆ ಎಳೆದೊ- ಯ್ದಂತೆಯೇ ತರುಣರನ್ನೂ ಎಳೆದೊಯ್ಯಬಹುದೆಂಬ ಆಶೆಯಿಂದ ನಮ್ಮ ಕೆಲವು ತರುಣಮಿತ್ರರ ಇಚ್ಛೆಯದೊರೆಗೆ, ಅಪೂರ್ಣಾವಸ್ಥೆಯಲ್ಲಿರುವ ಈ ಪ್ರಬಂಧನನ್ನು ಪ್ರಕಾಶನಕ್ಕೆ ಅನನುಕೂಲವಾದ ಈಗಿನ ತುಟ್ಟಿಯ ದಿವಸ ಗಳಲ್ಲಿಯೆ ಪ್ರಕಟಗೊಳಿಸುವ ಸಾಹಸಮಾಡಿದ್ದೇವೆ. ಇದಲ್ಲದೆ ಮುದ್ರ-

ಣಕ್ಕೆ ಪ್ರಾರಂಭಮಾಡದೆ ಬರೆಯುವ ಕೆಲಸವು ಒತ್ತರದಿಂದ ಸಾಗುವದಿಲ್ಲವೆಂದೂ ಹಿಂದಕ್ಕೆ ಬರೆದ ಒಂದು ಪ್ರಬಂಧದಲ್ಲಿಯೇ ಇದರ ರೂಪರೇಷೆಯನ್ನು ತೆಗೆದಿಟ್ಟಿರುವದರಿಂದ, ಬೇಕಾದಾಗ ಬರಬಹುದೆಂದೂ ಬಗೆದು ಮುದ್ರಣಕ್ಕೆ ಪ್ರಾರಂಭಮಾಡಿದೆವು. ಆದರೆ, ಈಗ ಕೆಲವು ವರ್ಷಗಳಿಂದ ದೇಶದಲ್ಲಿ ವ್ಯಾಪಿಸಿರುವ ಸ್ವರಾಜ್ಯ ಚಳವಳಿಯಲ್ಲಿ ಆಕಸ್ಮಿಕವಾಗಿ ಹೆಚ್ಚಿಗೆ ಮನಸ್ಸನ್ನು ತೊಡಕಿಸಬೇಕಾದುದರಿಂದ, ಸಾಕಷ್ಟು ವೇಳೆಯು ದೊರೆಯದೆ, ಪುಸ್ತಕವನ್ನು ಅವಸರದಿಂದ ಬರೆಯಬೇಕಾಯಿತು. ಆದುದರಿಂದ ಮೊದಲೇ ಅಪೂರ್ಣಾವಸ್ಥೆಯುಳ್ಳ ಈ ಪ್ರಬಂಧಕ್ಕೆ ಹೆಚ್ಚಿಗೆ ಕುಂದು ಉಂಟಾಗಿದೆ. ನಮ್ಮ ಸನ್ಮಾನ್ಯ ಮಿತ್ರರೊಬ್ಬರು ಹಂಪೆಯ ಶ್ರೀ ಶಂಕರಾಚಾರ್ಯರ ಮಠವೂ ಕರ್ನಾಟಕದಲ್ಲಿಯೇ ಇರುವದೆಂಬ ಸಂಗತಿಯು ನಮ್ಮ ಸ್ಮೃತಿಪಥದಿಂದ ಹಾರಿಹೋಗಿರುವದನ್ನು ಮೊನ್ನೆ ನಮ್ಮ ಲಕ್ಷ್ಯಕ್ಕೆ ತಂದುಕೊಟ್ಟಿರುತ್ತಾರೆ. ಇದೇ ಬಗೆಯಾಗಿ, ಮತ್ತೂ ಉಳಿದ ನಾನಾ ತರದ ದೋಷಗಳ ದೆಸೆಯಿಂದ ವಾಚಕರು ನಮ್ಮನ್ನು ಸರ್ವಥಾ ಕ್ಷಮಿಸದೆ, ಅವನ್ನು ಬೈಲಿಗೆ ತಂದರೆ, ನಾವು ಅವರಿಗೆ ಅತ್ಯಂತ ಋಣಿಯಾಗಿ ಮುಂದೆ ತಿದ್ದುವ ಪ್ರಸಂಗ ಬಂದರೆ ತಿದ್ದುವೆವು. ಆದರೆ ಇದನ್ನು ಮತ್ತೆ ಮುದ್ರಿಸುವ ಪ್ರಸಂಗವನ್ನೇ ತಾರದೆ, ಕನ್ನಡಿಗರು ಮುಂದು ವರಿದು ಬಂದು ದೋಷವರ್ಜಿತವಾದ ನೂತನ ಗ್ರಂಥಗಳನ್ನು ರಚಿಸಿ, ಇದನ್ನು ಮೂಲೆಗುಂಪಾಗಿ ಮಾಡಬೇಕೆಂದೇ ಅವರಿಗೆ ನಮ್ಮ ಮನಃಪೂರ್ವಕವಾದ ಪ್ರಾರ್ಥನೆ.

ಈ ಪುಸ್ತಕವನ್ನೋದಿ, ಶಾಂತಕವಿಗಳು ಮೊದಲಿಗೆ ಮತ್ತು ಕಡೆಗೆ ಕೊಟ್ಟ ಕವಿತೆಗಳನ್ನು ಮಾಡಿಕೊಟ್ಟು ಆಶೀರ್ವದಿಸಿದ್ದು ಮಹಾಭಾಗ್ಯವೆಂದೇ ಭಾವಿಸುವೆವು. (ಕಡೆಯ ಕವಿತೆ ೬ನೆಯ ಆವೃತ್ತಿಯಲ್ಲಿ ಮುದ್ರಿಸಿಲ್ಲ.)

ಕೊನೆಗೆ, ಯಾವ ಶ್ರೀಪರಮಾತ್ಮನ ಕೃಪೆಯಿಂದ ಈ ಪುಸ್ತಕವು ಪೂರ್ಣವಾಯಿತೋ, ಆ ಶ್ರೀಪರಮಾತ್ಮನಿಗೆ ಅನಂತಾನಂತ ವಂದನೆಗಳನ್ನು ಸಮರ್ಪಿಸಿ ಈ ಪ್ರಸ್ತಾವನೆಯನ್ನು ಮುಗಿಸುವೆವು.

ಧಾರವಾಡ ೧೮೪೪ನೆಯ ಶಕವರ್ಷ<br>ಭಾ. ಶು. ೪ (ಗಣೇಶ ಚತುರ್ಥಿ) } ವೆಂಕಟೇಶ ಭೀಮರಾವ ಆಲೂರ

# ಸಮರ್ಪಣೆ

ಕರ್ನಾಟಕಾಂತರ್ಯಾಮಿಯಾದ
ಭಾರತ ಭೂಮಾತೆಗೆ—

ಆಲೂರ ವೆಂಕಟರಾಯ

# ಈ ಮುದ್ರಣಕ್ಕೆ ಮೊದಲು

ಕರ್ನಾಟಕ ಗತವೈಭವ ಮೊದಲು ಹೊರಟೊಡನೆ ಕನ್ನಡಿಗರಲ್ಲಿ ನವಚೈತನ್ಯವನ್ನು ತುಂಬಿ ಅವರನ್ನು ಎಚ್ಚರಿಸಿತು. ಕರ್ನಾಟಕ ಏಕೀಕರಣ ಚಳವಳಿಯ ಪುರಸ್ಕರ್ತರಾದ ದಿ. ಶ್ರೀ ವೆಂಕಟರಾಯರು ಆ ಚಳವಳಿಗೆ ಉಪೋದ್ಘಾತ ರೂಪವಾಗಿ ಇದನ್ನು ಬರೆದು ಕನ್ನಡಿಗರಿಗೆ ಸ್ವಸ್ವರೂಪ ಜ್ಞಾನವನ್ನು ಮಾಡಿಕೊಟ್ಟರು.

ಇನ್ನೂ ಕನ್ನಡಿಗರು ನಮ್ಮದೇ ಆದ ಒಂದು ಪ್ರತ್ಯೇಕ ರಾಜ್ಯಘಟಕವನ್ನು ಹೇಳಿಕೊಳ್ಳುವುದಕ್ಕೆ ಅಭಿಮಾನಾಸ್ಪದವಾದ 'ಕರ್ನಾಟಕ'ವೆಂಬ ಬಯಸಿದ ಹೆಸರನ್ನು ಪಡೆಯದೆ ಹೋದರೂ— ಬಹುಮಟ್ಟಿಗೂ ಕನ್ನಡ ನುಡಿಯ ಪ್ರದೇಶಗಳು ಒತ್ತಟ್ಟಿಗೆ ಸೇರಿ ನಮ್ಮ ನಾಡುನುಡಿಗಳ ಏಳಿಗೆಗಾಗಿ ನಾವೇ ಆಡಳಿತ ನಡೆಸುವ ಏರ್ಪಾಟವನ್ನು ಪಡೆದಿದ್ದೇವೆ. ಈ ರಾಜ್ಯಫಲವು ಕೈಗೆ ಬರಲು, ಕನ್ನಡಿಗರ ಸತ್ವಬೀಜಕ್ಕೆ ಅಭಿಮಾನದ ಮಳೆಗರೆದ ಈ ಗ್ರಂಥವನ್ನು ಪುನರ್ಮುದ್ರಿಸುತ್ತಿರುವುದಕ್ಕೆ ನಮಗೆ ಸಂತೋಷವೆನಿಸುತ್ತಿದೆ.

೫೦ ವರ್ಷಗಳ ಹಿಂದೆಯೆ ನಾಡಿನಲ್ಲಿ ಕರ್ನಾಟಕತ್ವವನ್ನು ರೂಪುಗೊಳಿಸಲು ಆವಶ್ಯಕವಾದ ಮತ್ತು ತಕ್ಕುದಾದ ರೀತಿಯಲ್ಲಿ ಈ ಗ್ರಂಥವು ಬರೆಯಲ್ಪಟ್ಟಿದ್ದರೂ ಇದರೊಳಗಿನ ಹುರುಳು ಶಾಶ್ವತವಾದ ಬೆಲೆಯುಳ್ಳುದು. ಶ್ರೀ ವೆಂಕಟರಾಯರು ಪ್ರಬಂಧ ಪರಿಚಯದಲ್ಲಿ ಬೇರೊಂದು ಗ್ರಂಥ ಹುಟ್ಟಿ ಇದು ಮೂಲೆಗುಂಪಾಗಲೆಂದು ನುಡಿದಿದ್ದರೂ ತನ್ನ ತಿರುಳಿನಿಂದಿದು ಇಂದಿಗೂ ಹಾಗಾಗಲಿಲ್ಲ; ಮುಂದೂ ಆಗದೆಂದೇ ತೋರುತ್ತದೆ.

ಈ ಆವೃತ್ತಿಗಾಗಿ ಪರಿಷ್ಕೃತ ಜ್ಞಾನಸಾಮಗ್ರಿಯನ್ನು ಅನುಬಂಧದ ಸ್ವರೂಪದಲ್ಲಿ ಒದಗಿಸಿಕೊಟ್ಟ ಡಾ. ರಿತ್ತಿ ಶ್ರೀನಿವಾಸರಾಯರಿಗೆ ನೆನಕೆಗಳು,

—ಪ್ರಕಾಶಕ

# ಕರ್ನಾಟಕ–ಗತವೈಭವ



## ೧ ನೆಯ ಪ್ರಕರಣ

### ಈ ಪ್ರ್ಯುತವಾದ ಕರ್ನಾಟಕದಿಂದೇನು ?

ಕಾರ್ಪಣ್ಯದೋಷೋಪಹತಃ ಸ್ವಭಾವಃ |
ಪೃಚ್ಛಾಮಿ ತ್ವಾಂ ಧರ್ಮಸಮ್ಮೂಢಚೇತಾಃ |
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ |
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ||

— ಗೀತೆ ೨–೭

ಕಕ್ಕುಲತೆಯಿಂ ಕೆಟ್ಟ ಚಿತ್ತದಿ | ಸೊಕ್ಕಿ ಧರ್ಮದ ನೆಲೆಯ ಕಾಣದ |
ಚಿಕ್ಕವನು ನಾ ನಿನ್ನ ಕೇಳುವೆ ಲೇಸದಾವುದನು ||
ನಿಕ್ಕರಿಯೆ ಪೇಳೆನಗೆ ನೀ ಹಿಂ | ದಿಕ್ಕಿಕೋ ಮರೆನವೊಕ್ಕನೆನ್ನನು !
ಮಕ್ಕಳೋಪಾದಿಯಲಿ ರಕ್ಷಿಸಿ ಕಾಯಬೇಕೆಂದ ||

—ನಾಗರಸ

ನಮ್ಮ ಭಾರತಭೂಮಿಯ ಈಗಿನ ಸ್ಥಿತಿಯನ್ನು ಕಂಡು, ತಳಮಳಗೊಂಡು, ಅದರ ಉದ್ಧಾರಾರ್ಥವಾಗಿ ಹಲವು ಪುಣ್ಯಾತ್ಮರು ಹಲವು ಬಗೆಗಳಿಂದ ಪ್ರಯತ್ನ ಪಡುತ್ತಿರುವರಷ್ಟೇ ! ಈ ಬಗೆಯ ಪ್ರಯತ್ನಗಳಲ್ಲಿ, ನಮ್ಮ ದೇಶದ ಬುದ್ಧಿ ಸಾಮರ್ಥ್ಯವನ್ನೂ, ವೈಭವವನ್ನೂ, ಜನರ ನೆನಪಿಗೆ ತಂದುಕೊಟ್ಟು, ಅವರಲ್ಲಿ ತಮ್ಮ ಪೂರ್ವಜರ ವಿಷಯವಾಗಿಯೂ, ಪೂರ್ವ ಸಂಸ್ಕೃತಿಯ ವಿಷಯವಾಗಿಯೂ, ಪೂರ್ವದ ಘನತೆಯ ವಿಷಯವಾಗಿಯೂ ಸಾನಂದಾಶ್ಚರ್ಯವಾದ ಅಭಿಮಾನವನ್ನು ಹುಟ್ಟಿಸುವುದೂ ಒಂದು ಮುಖ್ಯವಾದ ಉಪಾಯವಾಗಿದೆ. ಚಂದ್ರಗುಪ್ತ, ಅಶೋಕ, ಶಿವಾಜಿ ಮುಂತಾದ ಅರಸರ ಮಹಾಕಾರ್ಯಗಳನ್ನೂ ರಾಜ

ನೀತಿಯ ಚಾತುರ್ಯವನ್ನೂ ಕೇಳಿ ಯಾವ ಭಾರತೀಯನು ಪುಲಕಿತನಾಗಲಿಕ್ಕಿಲ್ಲ! ಬುದ್ಧ, ಶಂಕರ, ರಾಮಾನುಜ ಮುಂತಾದ ಮಹಾತ್ಮರ ಪುಣ್ಯ ಚರಿತೆಗಳು ಯಾವ ಪಾಮರನ ಹೃದಯವನ್ನು ಪವಿತ್ರ ಮಾಡಲಿಕ್ಕಿಲ್ಲ! ಸಾರಾಂಶ:— ಭಾರತೀಯರಲ್ಲಿ ತಮ್ಮ ಪೂರ್ವಜರ ವಿಷಯವಾಗಿ ಅಭಿಮಾನವನ್ನು ಹುಟ್ಟಿಸಿ ಮುಂದೆ ವೈಭವವನ್ನು ಪಡೆಯಲು ಉತ್ತೇಜಕವಾಗುವದಕ್ಕೆ ಇತಿಹಾಸಕ್ಕಿಂತ ಬೇರೆ ಸುಲಭ ಸಾಧನವಿಲ್ಲ. ಅಷ್ಟೇ ಅಲ್ಲ, ನಮ್ಮಲ್ಲಿಯ ಆತ್ಮವಿಶ್ವಾಸವೆಲ್ಲವೂ ಅಳಿದು ಹೋಗಿ, ನಾವು ಹೀಗೆ ನೈರಾಶ್ಯವಾದಿಗಳಾಗುವುದಕ್ಕೂ, ದುರ್ಬಲರಂತೆ ಪ್ರತಿಯೊಂದರಲ್ಲಿ ಪರರ ಮೋರೆಯ ಕಡೆಗೆ ನೋಡುವುದಕ್ಕೂ ನಮ್ಮಲ್ಲಿಯ ಚೈತನ್ಯಜ್ಯೋತಿಯು ನಂದಿ ಹೋಗುವುದಕ್ಕೂ ನಮ್ಮ ಇತಿಹಾಸ ಜ್ಞಾನದ ಅಭಾವವೇ— ಅಲ್ಲ— ವಿಪರ್ಯಾಸವೇ ಮೂಲ ಕಾರಣ. ಸಿರಾಜಉದ್ದೌ-ಲನ ಕತ್ತಲೆ ಕೋಣೆಯ ಕಥೆಯು ನಮ್ಮ ಜನರ ವಿಷಯವಾಗಿ ನಮ್ಮವರಲ್ಲಿಯೂ ಪರಕೀಯರಲ್ಲಿಯೂ ಎಂತಹ ತಿರಸ್ಕಾರ ಬುದ್ಧಿಯನ್ನು ಹುಟ್ಟಿಸಿತ್ತು! ಆದರೆ ಅದೆಲ್ಲವೂ ಕೇವಲ ಕಟ್ಟು ಕಥೆಯೆಂದು ತಿಳಿದು ಬಂದಿರುವುದರಿಂದ, ಈಗ ನಮಗೆಷ್ಟು ಸಮಾಧಾನವಾಗಿದೆ! ೧೮೫೭ನೆಯ ಇಸ್ವಿಯ ದಂಗೆಯಲ್ಲಿ ಪ್ರಸಿದ್ಧಿಗೆ ಬಂದ ನಾನಾಸಾಹೇಬನು ಒಬ್ಬ ದೊಡ್ಡ ರಾಕ್ಷಸನೆಂದು ನಮ್ಮ ಕಲ್ಪನೆಯಾಗಿತ್ತಲ್ಲವೆ? ಆದರೆ ಇತ್ತೀಚೆಗೆ ಗೊತ್ತಾಗಿರುವ ಸಂಗತಿಗಳಿಂದ ಆ ನಮ್ಮ ಪೂರ್ವದ ಕಲ್ಪನೆಯಲ್ಲಿ ಬುಡಮಟ್ಟಿಗೆ ಬದಲು ಮಾಡಬೇಕಾಗಿರುವುದಲ್ಲವೆ? ಆದುದರಿಂದ ಕಾಲನ ದವಡೆಯಲ್ಲಿ ಸಿಕ್ಕು ಒದ್ದಾಡುತ್ತಿರುವ ನಮ್ಮೀ ಜನ್ಮಭೂಮಿಯನ್ನು ಉದ್ಧರಿಸಲಿಕ್ಕೆ ಹೆಣಗುತ್ತಿರುವ ಪುಣ್ಯಾತ್ಮರಿಗೆ ಅವರ ಗತವೈಭವವೇ ಗತಿಯು. ನಮ್ಮೀ ದುರವಸ್ಥೆಯಲ್ಲಿ ಅದೊಂದೇ ನಮಗೆ ಸಂತಸದ ವಿಷಯವು. ಈ ಗತವೈಭವದ ಸ್ಮರಣೆಯು ನಮ್ಮನ್ನು ಈಗಿನ ನಿರಾಶಾಯುಕ್ತವಾದ ಸ್ಥಿತಿಯಿಂದ ಒಮ್ಮೆಯೇ ಎತ್ತಿಕೊಂಡು, ಕೆಲಹೊತ್ತಿನವರೆಗಾದರೂ ಉತ್ಸಾಹಯುಕ್ತ ವಾತಾವರಣದೊಳಗೆ ತೂಗಾಡಿಸುತ್ತಿರುವುದೆಂಬುದಕ್ಕೆ ಏನೂ ಸಂದೇಹವಿಲ್ಲ! ನಮ್ಮ ಪೂರ್ವಜರ ಬಗ್ಗೆ ನಮ್ಮಲ್ಲಿ ಯೋಗ್ಯವಾದ ಅಭಿಮಾನವನ್ನು ಹುಟ್ಟಿಸುವದಕ್ಕೂ ಅವರ ವಿಷಯವಾಗಿ ನಮ್ಮಲ್ಲಿ ನಿಷ್ಕಾರಣವಾಗಿ ನೆಲೆಗೊಂಡಿರುವ ತಪ್ಪು

ತಿಳುವಳಿಕೆಗಳನ್ನು ಅಡಗಿಸಲಿಕ್ಕೂ, ನಮ್ಮ ದೇಶದ ನಿಜವಾದ ಇತಿ-
ಹಾಸವನ್ನು ನಮ್ಮ ಜನರೇ ಅಭಿಮಾನಪೂರ್ವಕವಾಗಿ ಬರೆಯುವುದು,
ರಾಷ್ಟ್ರದ ಪ್ರಗತಿಗೆ ಅತ್ಯಂತ ಅವಶ್ಯವಾದ ಸಂಗತಿಯಾಗಿದೆ.

ಆದರೆ ಈ ಕಾರ್ಯವು ಕೈಗೂಡುವುದೆಂತು ! ಹಿಂದುಸ್ಥಾನವು
ವಿಶಾಲವಾದ ದೇಶವಾಗಿದ್ದು, ಇದರಲ್ಲಿ ನಾನಾ ಜನಾಂಗಗಳು, ನಾನಾ
ಧರ್ಮಗಳು, ನಾನಾ ಜಾತಿಗಳು ಸೇರಿರುತ್ತವೆ. ಹಿಂದುಸ್ತಾನದ ಇತಿ-
ಹಾಸವೆಂದರೆ ಇವೆಲ್ಲವುಗಳ, ಒಟ್ಟುಗೂಡಿದ ಇತಿಹಾಸವು. ಆದುದರಿಂದ
ಈ ದೇಶದ ಇತಿಹಾಸವನ್ನು ಬರೆವ ಕೆಲಸವು ಅತ್ಯಂತ ಕಠಿಣವಾಗಿದೆ.
ಆದರೆ ಅವಶ್ಯವಿದ್ದಲ್ಲಿ ರಾಷ್ಟ್ರವನ್ನು ಭಾಷಾತತ್ವದ ಮೇಲೆ ವಿಭಾಗಿಸಿ,
ಆಯಾ ಭಾಷಾ ಪ್ರಾಂತದ ಜನರು ಗುಂಪಾಗಿ ಸೇರಿ, ತಮ್ಮ ತಮ್ಮ
ಉನ್ನತಿಯನ್ನು ಮಾಡಿಕೊಳ್ಳುವುದು ರಾಷ್ಟ್ರೀಯತ್ವಕ್ಕೆ ಪೋಷಕವಾದ
ಉಪಾಯವೆಂದೂ, ರಾಷ್ಟ್ರೋದ್ಧಾರಕ್ಕೆ ಅನುಕೂಲವಾದ ಸಂಗತಿ-
ಯೆಂದೂ, ಬೇರೆ ವಿಧವಾಗಿ ಭೇದಗಳನ್ನು ಕಲ್ಪಿಸುವುದಾಗಲಿ, ಇದ-
ಕ್ಕಿಂತ ಚಿಕ್ಕ ಚಿಕ್ಕ ವಿಭಾಗಗಳನ್ನು ಮಾಡುವುದಾಗಲಿ, ಅನಾವಶ್ಯಕವೂ,
ರಾಷ್ಟ್ರೀಯತ್ವಕ್ಕೆ ವಿಘಾತಕವೂ ಆಗಿರುವುದೆಂದು, ಇತ್ತಿತ್ತ ವಿಚಕ್ಷಣ
ರಾದ ವಿದ್ವಾಂಸರು ಸಿದ್ಧಾಂತಪಡಿಸಿದ್ದಾರೆ. ಹಿಂದಕ್ಕೆ ಬಂಗಾಲವನ್ನು
ಇಬ್ಭಾಗ ಮಾಡಿದಾಗ ನಮ್ಮ ವಂಗ ಬಂಧುಗಳು ಹುಯಿಲ ( ಗದ್ದಲ )
ನ್ನೆಬ್ಬಿಸಿದುದಕ್ಕೂ ಇದೇ ಕಾರಣ. ಆಂಧ್ರರು ( ತೆಲುಗರು ) ತಮಗೆ
ಬೇರೊಂದು ಇಲಾಖೆಯೂ, ವಿಶ್ವವಿದ್ಯಾಲಯವೂ ಬೇಕೆಂದು ಅನೇಕ
ವರ್ಷಗಳಿಂದ ಕೂಗಿಕೊಳ್ಳುತ್ತಿರುವುದರ ಗುಟ್ಟಾದರೂ ಇದೇ ಅಲ್ಲವೇ ?
ಮಹಾರಾಷ್ಟ್ರ ಬಂಧುಗಳು ವಾಙ್ಮಯದ ಅಭಿವೃದ್ಧಿಗಾಗಿಯೂ, ತಮ್ಮ
ರಾಜಕೀಯ ಉನ್ನತಿಗಾಗಿಯೂ ಬೇರೆ ಪ್ರಾಂತಕ್ಕೆ ಸಂಬಂಧಪಟ್ಟವ-
ರಾಗಿದ್ದ ತಮ್ಮ ಭಾಷಾ ಬಂಧುಗಳನ್ನೊಡಗೂಡಿಯೇ ಕೆಲಸ ಮಾಡಲಿಕ್ಕೆ
ಮುಂದುವರಿಯುವುದರ ಇಂಗಿತವೂ ಇದೇ. ಆದುದರಿಂದ ಇದೇ
ತತ್ವವನ್ನನುಸರಿಸಿ, ಬೇರೆ ಬೇರೆ ಭಾಷಾಪ್ರಾಂತಗಳ ಇತಿಹಾಸವು
ಮೊದಲು ಬೇರೆ ಬೇರೆಯಾಗಿ ಬರೆಯಲ್ಪಡಬೇಕು. ಹೀಗೆ ಮಾಡಿದರೆ
ಮಾತ್ರ ಬೇರೆ ಬೇರೆ ಪ್ರಾಂತಗಳೊಳಗಿನ ಜೀವಾಳದ ಎಳೆಯು ಒಂದೇ

ಆಗಿರುವುದರಿಂದ, ಆ ಎಳೆಯಲ್ಲಿ ಆಯಾ ಇತಿಹಾಸಗಳನ್ನು ಪೋಣಿಸಿ ಇಡೀ ಹಿಂದೂ ದೇಶದ ಇತಿಹಾಸವನ್ನು ಬರೆಯುವ ಪ್ರಚಂಡ ಕಾರ್ಯವು ಅತಿಶಯವಾಗಿ ಸುಲಭವಾಗುವುದೆಂದು ನಮ್ಮ ದೃಢಾಭಿಪ್ರಾಯವು. ಏಕೆಂದರೆ, ಹಿಮಾಲಯದಿಂದ ರಾಮೇಶ್ವರದ ವರೆಗೆ, ಆರ್ಯರಲ್ಲಿ, ಆರ್ಯರ ರಕ್ತದಲ್ಲಿ, ಆರ್ಯರ ಸಂಸ್ಕೃತಿಯಲ್ಲಿ, ಒಂದು ವಿಧವಾದ ಸಾಮ್ಯವೂ, ಸೌಹಾರ್ದವೂ ಕಂಡುಬರುತ್ತವೆ! ಪೌರಾಣಿಕವಾದ ಶ್ರೀರಾಮಕೃಷ್ಣಾದ್ಯವತಾರಗಳ ವಿಷಯದಲ್ಲಿ ಆಸೇತು ಹಿಮಾಚಲದ ವರೆಗೆ ಒಂದೇ ಬಗೆಯ ಪೂಜ್ಯಭಾವವು ತೋರಿಬರುತ್ತದಲ್ಲವೇ? ಇದೇ ತರಹದ ಪೂಜ್ಯಭಾವವೂ, ಅಭಿಮಾನವೂ, ಅನುರಾಗವೂ ನಮ್ಮ ಐತಿಹಾಸಿಕ ಪುರುಷರ ವಿಷಯದಲ್ಲಿಯೂ ನಮ್ಮಲ್ಲಿ ಹುಟ್ಟುವುದೇ ರಾಷ್ಟ್ರೀಯತ್ವದ ಪರಿಣತಾವಸ್ಥೆ. ಅಂತಹ ಪರಿಸ್ಥಿತಿಯುಂಟಾಗಬೇಕಾದರೆ, ನಾವು ನಮ್ಮ ಪ್ರಾಂತಗಳಲ್ಲಿ ಮಹಾಕಾರ್ಯಗಳನ್ನೆಸಗಿದ ಮಹಾಪುರುಷರ ವಿಷಯವಾಗಿ ಅಭಿಮಾನವನ್ನು ತಾಳಿ, ಅವರ ಉತ್ಸವಗಳನ್ನು ಎಡೆಬಿಡದೆ ನಡೆಯಿಸಿ, ಅವರನ್ನು ರಾಷ್ಟ್ರೀಯ ಮಹಾಪುರುಷರ ಪಂಕ್ತಿಯಲ್ಲಿ ಕುಳ್ಳಿರಿಸಬೇಕು. ನಮ್ಮ ಸತ್ಪುರುಷರ ಅಭಿಮಾನವು ನಮಗೇ ಇಲ್ಲದ ಬಳಿಕ ಮಿಕ್ಕ ಪ್ರಾಂತದವರಿಗೆ ಅವರ ವಿಷಯವಾಗಿ ಅಭಿಮಾನ ಹುಟ್ಟುವುದು ಹೇಗೆ? ಶ್ರೀರಾಮದಾಸ, ಶ್ರೀ ಶಿವಾಜಿ ಇವರ ಹೆಸರುಗಳನ್ನು ಕೇಳಿದೊಡನೆಯೆ ಮಹಾರಾಷ್ಟ್ರೀಯರ ಹೃದಯದಲ್ಲಿ ಆನಂದವು ಉಕ್ಕೇರುವಂತೆ ಅದು ಆಂಧ್ರದಲ್ಲಿ ಅಥವಾ ಬಂಗಾಲಿಯರಲ್ಲಿ ಈಗ ಉಕ್ಕೇರುವುದೇನು? ಪ್ರತಾಪ ರುದ್ರದೇವ, ನನ್ನಯಭಟ್ಟ ಮುಂತಾದವರ ಹೆಸರುಗಳು ಆಂಧ್ರರಿಗೆ ಈಗ ಕೊಡುವಷ್ಟು ಅಭಿಮಾನವನ್ನೂ, ಉತ್ಸಾಹವನ್ನೂ, ಮರಾಠಿಗರಿಗೆ ಕೊಡುವುವೋ? ಒಟ್ಟಿಗೆ, ರಾಷ್ಟ್ರೀಯತ್ವವು ಪೂರ್ಣವಾಗಿ ನೆಲೆಗೊಳ್ಳುವುದಕ್ಕೆ ಆಯಾ ಪ್ರಾಂತದ ಜನರು ಮೊದಲು ತಮ್ಮ ಮಹಾಪುರುಷರ ವೈಭವವನ್ನು ಸ್ಮರಿಸಿ, ತಮ್ಮ ಮನಸ್ಸನ್ನು ಆನಂದ ಸಾಗರದಲ್ಲಿ ಎಡೆಬಿಡದೆ ಓಲಾಡಿಸಬೇಕು. ಅವರ ಮೂರ್ತಿಗಳನ್ನು ತಮ್ಮ ಕಣ್ಣುಮುಂದಿಟ್ಟುಕೊಂಡು ಧ್ಯಾನಿಸಬೇಕು.

ಮಿಕ್ಕ ಪ್ರಾಂತಗಳೊಳಗಿನ ಪ್ರಯತ್ನಗಳೆಲ್ಲವೂ ಈ ಮಾರ್ಗ-

ದಿಂದಲೇ ನಡೆದಿರುವುದಿಲ್ಲವೆ ? ನಮ್ಮ ಪೂರ್ವಿಕರು ಮೊದಲು ಇಂತಿಂತಹ ಮಹಾ ಕೃತ್ಯಗಳನ್ನು ಮಾಡಿದರು; ತಮ್ಮ ಮೈಯಲ್ಲೆಲ್ಲ ಇಂತಿಂತಹ ಮಹಾ ಮಹಾ ವೀರರ ರಕ್ತವು ಹರಿಯುತ್ತಿದೆ; ತಮ್ಮ ನಾಡು ಇಂತಹ ಪುಣ್ಯಪುರುಷರ ಪಾದಧೂಳಿಯಿಂದ ಪಾವನವಾಗಿದೆ— ಎಂದು ಮುಂತಾಗಿ ಹೇಳಿ ಪ್ರತಿಯೊಂದು ಭಾಷೆಯವರು ತಮ್ಮ ಜನರನ್ನು ರಾಷ್ಟ್ರಕಾರ್ಯಕ್ಕೆ ಹುರಿಗೊಳಿಸುತ್ತಿದ್ದಾರೆ; "ಯಾವ ದೇಶವು ಒಂದು ಕಾಲಕ್ಕೆ ಶ್ರೀರಾಮಚಂದ್ರ, ಚಂದ್ರಗುಪ್ತ, ಅಶೋಕ, ಹರ್ಷ- ವರ್ಧನ, ಪೃಥ್ವೀರಾಜರಂತಹ ಮಹಾ ಧಾರ್ಮಿಕ ರಾಜರಿಗೆ ತವರುಮನೆ ಯಾಯಿತೋ, ಯಾವ ನಮ್ಮ ದೇಶವು ತುಳಸೀದಾಸ, ಕಬೀರದಾಸ ರಂಥ ಭಗವದ್ಭಕ್ತರಿಗೆ ಜನ್ಮ ಕೊಟ್ಟಿತೋ, ಆ ಹಿಂದೀ ರಾಷ್ಟ್ರವು ಎಂದಾದರೂ ಪ್ರಗತಿಯಲ್ಲಿ ಹಿಂದುಳಿದೀತೇ " ಎಂದು ಹಿಂದೀ ಬಂಧುಗಳು ತಮ್ಮ ಮಂದಿಯನ್ನು ಪ್ರೇರೇಪಿಸುತ್ತಾರೆ; "ಪ್ರತಾಪಾದಿತ್ಯ- ನಂಥಹ ಪ್ರತಾಪಿಯು ನಮ್ಮ ರಾಷ್ಟ್ರವನ್ನು ಅಲಂಕರಿಸಲು, ಚೈತನ್ಯ ನಂಥ ಧರ್ಮವೀರನು ನಮ್ಮಲ್ಲಿ ಚೈತನ್ಯವನ್ನು ತುಂಬಿರಲು, ನಾವು ತಲೆ ಬಗ್ಗಿಸಿ ಸುಮ್ಮನೆ ಕುಳಿತುಕೊಳ್ಳಬೇಕೆ ? ಅಂತಹ ವೀರಪುರುಷರು ಮುಂದೆಯೂ ನಮ್ಮಲ್ಲಿ ಮೈದೋರಲಾರರು— " ಎಂದು ಮುಂತಾಗಿ ಹೊಗಳಿ ಬಂಗಾಲಿಗಳು ತಮ್ಮವರ ಬೆನ್ನು ಚಪ್ಪರಿಸುತ್ತಿರುವರು ! "ರಾಜರಾಜನರೇಂದ್ರ, ಪ್ರತಾಪರುದ್ರದೇವ, ಕೃಷ್ಣದೇವರಾಯ ಮುಂತಾದ ರಣವೀರರು ನಮ್ಮ ಪೂರ್ವಜರೇ ಅಲ್ಲವೇ ? ಆಪಸ್ತಂಬ, ಕುಮಾರಿಲ- ಭಟ್ಟ, ಅಪ್ಪಯ್ಯಾದೀಕ್ಷಿತ ಇವರೇ ಮೊದಲಾದ ವಿದ್ವನ್ಮಣಿಗಳು ನಮ್ಮ ದೇಶದಲ್ಲಿ ಹುಟ್ಟಲಿಲ್ಲವೇ ? ಹೀಗಿದ್ದ ಬಳಿಕ ಆಂಧ್ರರಾದ ನಾವು ಅಳುವುದೇತಕ್ಕೆ ! " ಎಂದು ಆಂಧ್ರರು ತಮ್ಮ ಜನರಲ್ಲಿ ಪರಿಪರಿಯಾಗಿ ಆವೇಶ ತುಂಬುತ್ತಿದ್ದಾರೆ ! "ನಮ್ಮದು ಬಹು ಪ್ರಾಚೀನ ಭಾಷೆ; ಚೇರ, ಚೋಳ, ಪಾಂಡ್ಯ, ರಾಜ್ಯಗಳು ರಾಮಾಯಣ ಮಹಾಭಾರತ ಕಾಲ ದಿಂದಲೂ ಖ್ಯಾತಿಗೊಂಡಿವೆ. ರಾಜರಾಜ, ಕುಲೋತ್ತುಂಗ ಮುಂತಾದ ಮಹಾ ವೀರರು ನಮ್ಮ ಅರಸರು, ರಾಮಾನುಜ, ವೇದಾಂತದೇಶಿಕರಂಥ ಧರ್ಮಮಾರ್ತಾಂಡರು ನಮ್ಮ ಮಾರ್ಗದರ್ಶಕರು— ಎಂದ ಮೇಲೆ

ದೇವದೂತರಾದ ಇಂತಹ ಅಂಶಪುರುಷರ ಹೆಸರೆತ್ತಿ ನಾವು ರಾಷ್ಟ್ರೋದ್ಧಾರವನ್ನು ಮಾಡಲಾರೆವೇ!" ಎಂದು ತಮಿಳರು ಆಲಸ್ಯವನ್ನು ತಳ್ಳಿ ತಲೆಯೆತ್ತಲಾರಂಭಿಸಿದ್ದಾರೆ. ಇತ್ತ ನಮ್ಮ ನೆರೆಹೊರೆಯವರಾದ ಮರಾಠರಂತೂ ಶ್ರೀ ರಾಮದಾಸ, ಶ್ರೀ ಶಿವಾಜಿ ಮಹಾರಾಜರ ಭಜನೆಗಳಿಂದಲೂ ಉತ್ಸವಗಳಿಂದಲೂ ತಮ್ಮ ರಾಷ್ಟ್ರವನ್ನೇ ತುಂಬಿ ಬಿಟ್ಟಿದ್ದಾರೆ. "ಜ್ಞಾನೇಶ್ವರ-ರಾಮದಾಸರಂಥ ಸಾಧುಗಳು ನಮ್ಮಲ್ಲಿ ಜನಿಸಿರಲು, ಶಿವಾಜಿ-ಬಾಜೀರಾಯರಂಥ ವೀರಾಗ್ರೇಸರರು ನಮ್ಮಲ್ಲಿ ಉದಯಿಸಿರಲು, ರಾಷ್ಟ್ರಜಾಗರಿಕೆಯಲ್ಲಿ ನಾವೇಕೆ ಹಿಂದುಳಿದೇವು? ನಾವೇನು ಕಡಿಮೆಯವರೇ? ನಮ್ಮಿಂದ ರಾಷ್ಟ್ರೋನ್ನತಿಯಾಗದಂತಿದೆಯೋ?" ಎಂದು ಮರಾಠರು ಮೈಯುಬ್ಬಿಸಿ ಮುಂದುಮುಂದಕ್ಕೆ ಸರಿಯುತ್ತಿದ್ದಾರೆ. ಗುರ್ಜರರೂ ಸುಮ್ಮನೆ ಕುಳಿತಿಲ್ಲ. "ಭಾರತೀಯರಿಗೆಲ್ಲ ಅತ್ಯಂತ ಪೂಜ್ಯನಾದ ಶ್ರೀಕೃಷ್ಣನು ನಮ್ಮ ಭೂಮಿಯಲ್ಲಿಯೇ ವಾಸಿಸಿದ್ದನಲ್ಲವೇ? ಅವನ ದ್ವಾರಕೆಯು ಇಗೋ, ಇದೇ ಅಲ್ಲವೇ? ಆ ಕೃಷ್ಣನ ವಂಶಜರಾದ ನಾವು ಕೈಲಾಗದವರೇ? ವನರಾಜ, ಮೂಲರಾಜ, ಸಿದ್ಧರಾಜ ಅವರು ನಮ್ಮಲ್ಲಿಯೇ ಆಳಲಿಲ್ಲವೇ? ಶ್ರೀವಲ್ಲಭಾಚಾರ್ಯರ ಅಭಿಮಾನವು ನಮಗೆ ಇರಬೇಡವೇ? ಗುರ್ಜರರಾದ ನಾವು ಲುಪ್ತವಾದ ನಮ್ಮ ಗೌರವವನ್ನು ಮರಳಿ ಪಡೆಯಲಾರೆವೇ?" ಎಂದು ಹೇಳಿ ಗುರ್ಜರರು ತಮ್ಮ ರಾಷ್ಟ್ರವನ್ನು ಉನ್ನತಿಯ ಮಾರ್ಗಕ್ಕೆ ಹಚ್ಚಿರುವರು. ಈ ಬಗೆಯಾಗಿ ಪ್ರತಿಯೊಂದು ಭಾಷೆಯವರೂ, ತಮ್ಮ ತಮ್ಮ ಪ್ರಾಂತಗಳ ಇತಿಹಾಸವನ್ನು ಅಭಿಮಾನಪೂರ್ವಕವಾಗಿ ಅಭ್ಯಾಸ ಮಾಡಿ, ತಮ್ಮ ಜನರನ್ನು ಚೇತನಗೊಳಿಸುತ್ತಿರಲು, ನಮ್ಮ ಕರ್ನಾಟಕದವರೋ! ಛೇ ಕರ್ನಾಟಕವೆಲ್ಲಿದೆ? ಕರ್ನಾಟಕವು ಜಗತ್ತಿನ ನಾಟ್ಯರಂಗದಿಂದ ಎಂದೋ ನಾಮಶೇಷವಾಗಿ ಹೋಗಿದೆ! ಇನ್ನು ಎಲ್ಲಿಯ ಕರ್ನಾಟಕ? ನಾಲ್ಕಾರು ಕಡೆಗೆ ಹರಿದು ಹಂಚಿಹೋದ ಕರ್ನಾಟಕವನ್ನು ಹೊಲಿದು ಅಖಂಡವಾಗಿ ಮಾಡುವವರಾರು! ಅಷ್ಟೊಂದು ಅಭಿಮಾನವು ನಮ್ಮಲ್ಲಿ ಎಲ್ಲುಂಟು? ಮಿಕ್ಕ ಕಡೆಯಲ್ಲೂ ನಮ್ಮ ಭಾಷಾಬಂಧುಗಳು ವಾಸಿಸುವರು; ಅವರ ರಕ್ತವೂ ನಮ್ಮ ರಕ್ತವೂ ಒಂದೇ; ನಮ್ಮ ಪೂರ್ವಜರೇ ಅವರ ಪೂರ್ವಜರು;

ನಮ್ಮ ಅರಸರೂ ಅವರ ಅರಸರೂ ಒಂದೇ; ನಮ್ಮ ಕವಿಗಳೇ ಅವರ ಕವಿಗಳು; ಎಂಬ ಸ್ವಾಭಿಮಾನವು ಕೂಡ ಯಾರಲ್ಲಿ ಇನ್ನೂ ಅಂಕುರಿಸಿಲ್ಲವೋ, ಅವರಿಂದ ಯಾವ ಕಾರ್ಯವಾದೀತು ? ಅಂತಹರು ಕೂಪ ಮಂಡೂಕನ್ಯಾಯದಿಂದ ಸಂಕುಚಿತ ವಿಚಾರಗಳುಳ್ಳವರಾದರೆ ಆಶ್ಚರ್ಯವೇನು ? ಆದರೆ ಪ್ರತಿಯೊಂದು ನಾಡಿನವರ ನಾಲಗೆಯ ಮೇಲೆ ತಮ್ಮ ಪೂರ್ವಜರ ನಾಲ್ಕಾರು ಹೆಸರುಗಳಾದರೂ ಅಭಿಮಾನದಿಂದ ನಲಿದಾಡುತ್ತಿರಲು ಕನ್ನಡಿಗರ ನಾಲಗೆಗೆ ಚಟ್ಟನೆ ಒಂದಾದರೂ ಹೆಸರು ಬರದಿರುವುದು ತೀರ ಲಜ್ಜಾಸ್ಪದವಾದ ಸಂಗತಿಯಾಗಿದೆ ! ಹಿಂದುಸ್ಥಾನದಲ್ಲಿಯ ಪ್ರತಿಯೊಂದು ಭಾಷೆಯಾದರೋ ತಮ್ಮ ಪೂರ್ವಜರ ಇತಿಹಾಸವನ್ನು ಉತ್ಸಾಹದಿಂದ ಸಂಶೋಧಿಸುತ್ತಿರಲು, ಕರ್ನಾಟಕವು ಮಾತ್ರ ಇನ್ನೂ ಕುಂಭಕರ್ಣನಿದ್ರೆಯಲ್ಲಿಯೇ ಇದೆ. ಇದೆಂಥ ದುಃಖದ ನೋಟ !

ಆದರೆ ಹೀಗಿರುವುದಕ್ಕೆ ಕಾರಣವೇನಿರಬಹುದು ? ಅದಕ್ಕೆ ನಮ್ಮ ಇತಿಹಾಸಜ್ಞಾನದ ಅಭಾವವೇ ಮೂಲ ಕಾರಣವೆಂದು ನಮ್ಮ ಅಭಿಪ್ರಾಯ. " ನಮ್ಮಲ್ಲಿ ಬಲಾಢ್ಯರಾದ ಅರಸರಿರಲಿಲ್ಲ; ನಮ್ಮಲ್ಲಿ ಘನಪಂಡಿತರಿರಲಿಲ್ಲ; ನಾವು ಎಂದಿಗೂ ಹೇಡಿಗಳೇ, ಎಂದಿಗೂ ದಡ್ಡರೇ, ಅಂದ ಬಳಿಕ ಮುಂದಿನ ಆಶೆಯಾದರೂ ನಮಗೆಲ್ಲಿಯದು ? " ಎಂದು ನಮ್ಮ ಜನರ ಅಭಿಪ್ರಾಯ. ಆದುದರಿಂದಲೇ ಅವರು ಕೇಳುವದೇನಂದರೆ, " ನಮ್ಮ ಕರ್ನಾಟಕದ ವಿಷಯಕ್ಕೆ ಅಭಿಮಾನಪಡತಕ್ಕ ಸಂಗತಿಗಳೇನಿವೆ ? ನಮ್ಮದೇನು ರಾಷ್ಟ್ರವೇ ? ನಮಗೇನು ಇತಿಹಾಸವಿದೆಯೇ ? ನಮ್ಮ ಕರ್ನಾಟಕವು ಎಂದಾದರೂ ವಾಙ್ಮಯವನ್ನು ಕಂಡಿತ್ತೋ ? ಅದಕ್ಕೆ ಅರಸರೇನಾದರೂ ಇದ್ದರೋ ? ನಮಗೆ ವಿಶಿಷ್ಟವಾದ ಸಂಸ್ಕೃತಿಯುಂಟೋ? ಹೀಗಿಲ್ಲದ ಬಳಿಕ, ಅಂಥ ಸತ್ತ ಕರ್ನಾಟಕವನ್ನು ಹೊತ್ತುಕೊಂಡು ಹೋಗುವುದೆಂತು ? ಆ ನಮ್ಮ ಕೊರಳೊಳಗಿನ ಗುದಿಗೆಯನ್ನು ಹರಿದೊಗೆದು ಮಿಕ್ಕ ಜನಾಂಗಗಳಲ್ಲಿ ಬೆರೆತು ಹೋಗುವುದೇ ಸರಿಯಲ್ಲವೇ?" ಇಷ್ಟೇ ಅಲ್ಲ, ಕೆಲವರಿಗಂತೂ ಕರ್ನಾಟಕಸ್ಥರೆಂದು ಹೇಳಿಕೊಳ್ಳುವುದಕ್ಕೂ ಕೂಡ ನಾಚಿಕೆ ಬರುತ್ತಿದೆ. ಆದುದರಿಂದ ಅವರು ನಮ್ಮ ಜನರಿಗೆ ಉಪದೇಶಿಸುವದೇನಂದರೆ— "ಕನ್ನಡಿಗರೇ ! ಇಗೋ, ಇಲ್ಲಿ ನಮ್ಮ

ನೆರೆಹೊರೆಯವರಾದ ಮರಾಠರು, ತೆಲುಗರು, ತಮಿಳರು ವೇಗದಿಂ
ಸುಧಾರಣೆಯ ಮಾರ್ಗವನ್ನು ಆಕ್ರಮಿಸಹತ್ತಿದ್ದಾರೆ. ನಾವು ನಮ್ಮ
ಕರ್ನಾಟಕತ್ವವನ್ನು ಸುಟ್ಟು ಬೂದಿ ಮಾಡಿ, ನೀರಿನಲ್ಲಿ ಕಲಿಸಿಬಿಡೋಣ.
ನೀವು ಇಲ್ಲದ ಸಲ್ಲದ ವಿಚಾರಗಳನ್ನು ತೆಗೆದು ಹೊಸ ಆಟವನ್ನು ಹೂ
ಬೇಡಿರಿ. ಸುಮ್ಮನೆ ಆ ಕರ್ನಾಟಕದ ಹೆಸರಿನಿಂದ ಏಕೆ ತೊಳಲಾಡು
ತ್ತೀರಿ ? ಹೋಗಲಿ ಆ ಕರ್ನಾಟಕವು ! ಏನೋ ಕನ್ನಡ ನುಡಿಯು
ನಮ್ಮನ್ನು ಬಿಡದು. ಅಷ್ಟರಮಟ್ಟಿಗೆ ಬೇಕಾದರೆ 'ಕರ್ನಾಟಕ' ರೆನ್ನಿ
ಕೊಳ್ಳಿರಿ. "— ಈ ಬಗೆಯಾಗಿ ಕರ್ನಾಟಕರು ವಿಷಾದಗೊಂಡು ಒಂದೇ
ಸವನೆ ಒರಲಹತ್ತಿದ್ದಾರೆ. ಹೀಗಾದ ಮೇಲೆ ಮಹಾವಿಭೂತಿಗಳ ನಾಮ
ವಳಿಯು ನಲಿದಾಡುವುದೆಂತು ? ಇವರಲ್ಲಿ ರಾಷ್ಟ್ರೀಯ ವಿಭೂತಿಗ
ಉತ್ಸವಗಳಾಗುವುದೆಂತು ? ಪೂರ್ವಜರ ಅಭಿಮಾನವೇ ಇಲ್ಲದಂತಹರು
ತಮ್ಮ ಜನರಲ್ಲಿ ರಾಷ್ಟ್ರೀಯತ್ವದ ಭಾವನೆಗಳನ್ನು ಬಿತ್ತುವುದೆಂತು ?
ಇಂತಹ ಜನರಲ್ಲಿ ನಿಜವಾದ ರಾಷ್ಟ್ರಾಭಿಮಾನವು ಎಂದಾದರೂ ಮೊಳೆ-
ದೋರುವುದೋ ? ಯಾವ ಕರ್ನಾಟಕಸ್ಥರಿಗೆ ತಮ್ಮ ಪೂರ್ವಜರ ಬಗ್ಗೆ
ಸಕೌತುಕವಾದ ಅಭಿಮಾನವುಂಟಾಗುವುದಿಲ್ಲವೋ, ಯಾರು ತಮ್ಮ
ಜನರ ಮಹಾಕಾರ್ಯಗಳ ಜ್ಞಾನವಿಲ್ಲದೆ ಇನ್ನೂ ಕಗ್ಗತ್ತಲೆಯಲ್ಲಿ ಅಲೆ-
ದಾಡುತ್ತಿರುವರೋ ಅಂಥ ಜನರ ಭಾಷಾವೃಕ್ಷವು ಕೂಡ ಭರದಿಂದ ಬೆಳೆ
ಯದಿದ್ದರೆ ಸೋಜಿಗವೇನು ? ಕನ್ನಡಿಗರೇ, ನಿಮ್ಮ ಈ 'ವಿಷಾದ' ವನ್ನು
ಹೋಗಲಾಡಿಸಿ, ನಿಮ್ಮ ಮೇಲಿನ ನಿರಭಿಮಾನತೆಯ ಮುಸುಕನ್ನು ಹಾರ
ಹೊಡೆಯಲಿಕ್ಕೆ ನೀವು ನಿಮ್ಮ ಇತಿಹಾಸಕ್ಕೇ ಶರಣು ಹೋಗಿರಿ. ನಿಮ್ಮ
ಮಂದದೃಷ್ಟಿಗೆ ಅದೇ ಮೇಲಾದ ಅಂಜನ.

———

## ೨ ನೆಯ ಪ್ರಕರಣ

## ಕರ್ನಾಟಕವು ಮೃತರಾಷ್ಟ್ರವೇ ?

ಕ್ಲೈಬ್ಯಂ ಮಾಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ |
ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ||

—ಗೀತೆ ೨-೩

ಅರಿಭಯಂಕರ ನೀ ನಪುಂಸಕ | ರಿರವನೈದಲು ಬೇಡ, ನಿನಗಿದು |
ದೊರಕಲಾಗದು ಧೀರತನಕಿದು ಹಾನಿಕರವಹುದು ||
ಮರುಳೆ, ಬಡಮನದಿಂದ ಹೆದರದೆ | ಮರುಳತನವನು ಬಿಟ್ಟು ಕದನಕೆ |
ಭರವಸದಲೇಳೆನಲು ಕೃಷ್ಣಗೆ ಪಾರ್ಥನಿಂತೆಂದ ||

—ನಾಗರಸ

ಭರತಖಂಡಾಂತರ್ಗತರಾದ, ಕನ್ನಡಿಗರೇ,

ಕಳೆದ ಪ್ರಕರಣದಲ್ಲಿ, ನಾವು ನಮ್ಮ ಮಿಕ್ಕ ರಾಷ್ಟ್ರಬಂಧುಗಳಲ್ಲಿ ಉಂಟಾಗಿರುವ ಪೂರ್ವಸ್ಥಿತಿಯ ತಿಳುವಳಿಕೆಯನ್ನೂ, ಸದ್ಯಸ್ಥಿತಿಯ ವಿಷಯದಲ್ಲಿ ಅವರು ನಡೆಯಿಸಿರುವ ಪಶ್ಚಾತ್ತಾಪಪೂರ್ವಕವಾದ ಉನ್ನತಿಯ ಕ್ರಮವನ್ನೂ, ನಾವು ಮಾತ್ರ ಎಳ್ಳಷ್ಟೂ ಸದ್ದಿಲ್ಲದೆ ಮಲಗಿರುವ ಶೋಚನೀಯವೂ, ಲಜ್ಜಾಸ್ಪದವೂ ಆದ ಸಂಗತಿಯನ್ನೂ ಅರಿಕೆ ಮಾಡಿಕೊಂಡೆವು. ಆದರೆ ನಿಜವಾಗಿಯೂ ಕನ್ನಡಿಗರಾದ ನಾವು ಹೀಗೆ ವಿಷಾದಗೊಂಡು ಹತಾಶರಾಗಲಿಕ್ಕೆ ಏನಾದರೂ ಕಾರಣವುಂಟೋ? ಎಂಬುದನ್ನು ನಾವೀ ಪ್ರಕರಣದಲ್ಲಿ ಯೋಚಿಸುವ.

ವಾಚಕರೇ, ತಿಪ್ಪೆ ಹೋಗಿ ಉಪ್ಪರಿಗೆಯಾದ ಕಥೆಗಳೂ, ಅರಮನೆ ಹೋಗಿ ಸೆರೆಮನೆಯಾದ ಉದಾಹರಣೆಗಳೂ ನಮ್ಮ ಕಣ್ಣ ಮುಂದೆ ಒಂದೆರಡು ಇರುತ್ತವೆಯೋ ! ಅಹಹ ! 'ಚಕ್ರನೇಮಿಕ್ರಮೇಣ' ಅಂದರೆ ಗಾಲಿಯ ಹಲ್ಲುಗಳಂತೆ ತಿರುಗುತ್ತಿರುವ ಈ ಕಾಲನ ಅದ್ಭುತವಾದ

ಕೃತಿಯನ್ನು ನಿರೀಕ್ಷಿಸಿದ ಹಾಗೆ ಮನಸ್ಸೆಲ್ಲವೂ ಅಗಾಧವಾದ ದುಃಖ ಸಮುದ್ರದಲ್ಲಿ ಮನುಷ್ಯನ ಸ್ವಭಾವಕ್ಕನುಗುಣವಾಗಿಯೇ ಇದೆ. ಆದರೆ, ಕ್ಷಣಿಕವಾದ ಈ ಹೃದಯದೌರ್ಬಲ್ಯವನ್ನೂ ವಿಮೂಢಸ್ಥಿತಿಯನ್ನೂ ನಾವು ಕೊನೆಯ ವರೆಗೂ ಹಾಗೆಯೇ ದೃಢವಾಗಿಟ್ಟುಕೊಂಡು ಹೇಡಿಗಳಂತೆ ಅಳುತ್ತ ಕುಳಿತರೆ ಮಾತ್ರ ಅದು ಅಕ್ಷಮ್ಯವಾದ ತಪ್ಪಾಗುವುದು; ಮತ್ತು ಈ ನಮ್ಮ ತಪ್ಪಿಗಾಗಿ ನಮಗೇ– ಅಷ್ಟೇ ಅಲ್ಲದೆ ನಮ್ಮ ಮಕ್ಕಳುಮರಿಗಳಿಗೂ ಸಹ ನಮ್ಮ ಹೆಸರಿನಿಂದ ಕಲ್ಲೊಡೆಯುತ್ತ ಕುಳ್ಳಿರುವ ಪ್ರಸಂಗ ಬಾರದೇ ಇರದು! ವೈಭವ ಶಿಖರವನ್ನಡರಿದ ಯಾವ ಜನಾಂಗಕ್ಕೂ ಒಮ್ಮೆಲ್ಲೊಮ್ಮೆ ಇಂಥ ದುರವಸ್ಥೆ ಬಂದೇ ತೀರಬೇಕಾಗಿ ಸೃಷ್ಟಿಯ ನಿಯಮವಿರುವುದೆಂದು ಪ್ರಾಚೀನ ಇತಿಹಾಸವು ಈ ವಿಷಯದಲ್ಲಿ ನಮ್ಮನ್ನು ಸಂತಯಿಸಲಿಕ್ಕೆ ಕಾಯ್ದುಕೊಂಡು ನಿಂತಿದೆ. ನಾವು ಜಾಣರಾದರೆ ಆ ಪ್ರಾಚೀನ ಇತಿಹಾಸದ ಅನುಭವದ ಮಾತನ್ನು ಕೇಳಿ, ನಮ್ಮ ಅಳ್ಳೆದೆಯನ್ನು ಕಲ್ಲೆದೆಯಾಗಿ ಮಾಡಲು ಪ್ರಯತ್ನಿಸಬೇಕು. ರಾಷ್ಟ್ರಕ್ಕೆ ಬಿಕ್ಕಟ್ಟಿನ ಸ್ಥಿತಿ ಒದಗಿದಾಗ, ಆ ರಾಷ್ಟ್ರೀಯರು ಕೇವಲ ಕೌಟುಂಬಿಕ–ಅತಏವ ಸಂಕುಚಿತವಾದ ತಮ್ಮ ವಿಚಾರಗಳನ್ನು ವಿಶಾಲಗೊಳಿಸಿ, ಮನೆಮಾರುಗಳನ್ನು ಕಸಕ್ಕಿಂತ ಕಡೆಮಾಡಿ, ಹೆಂಡಿರುಮಕ್ಕಳನ್ನು ದೂರೀಕರಿಸಿ ಕ್ಷಣಹೊತ್ತು ಧೀರರಾಗಲಿಕ್ಕೆ ಬೇಕು. ಹೃದಯದೌರ್ಬಲ್ಯವು ಯಾರಿಗೆ ಉಚಿತವು? ಮೃತರಾಷ್ಟ್ರಕ್ಕೆ! ಯಾವ ರಾಷ್ಟ್ರದೊಳಗಿನ ನಾಡಿಗಳ ಚಲನೆಯೆಲ್ಲವೂ ನಿಂತುಹೋಗಿ ಜೀವಕಳೆ ಇರುವುದಿಲ್ಲವೋ ಯಾವ ದೇಶದ ಇತಿಹಾಸದಲ್ಲಿ ವೈಭವದ, ಪರಾಕ್ರಮದ, ಬುದ್ಧಿವಂತಿಕೆಯ ಸಂಗತಿಗಳು ಎಂದಿಗೂ ಶೂನ್ಯವಾಗಿರುವವೋ, ಯಾವ ನಾಡು ನಾಮಮಾತ್ರಕ್ಕೆ ಮನುಷ್ಯರಿಂದ ತುಂಬಿರುವುದೋ, ಅಂಥ ನಾಡಿನವರು ಹೀಗೆ ಅಪ್ಪುಗೈ ಹಾಕಿಕೊಂಡು ಕುಳಿತರೆ ಒಂದು ವೇಳೆ ಸರಿದೋರಬಹುದು. ಏಕೆಂದರೆ ದೇಶದಲ್ಲಿ ಎಂದಿಗೂ ಜೀವಂತತನದ ಕುರುಹುಗಳೇ ಇಲ್ಲದ ಮೇಲೆ ಆ ದೇಶದವರಿಂದ ಮುಂದೆ ಎಂದಾದರೂ ಮಹಾಕಾರ್ಯಗಳಾಗುವವೆಂದರೆ ಒಂದು ವೇಳೆ ಸಂದೇಹವುಂಟಾಗಬಹುದು. ಆದರೆ ಯಾವ ರಾಷ್ಟ್ರವು ಇತಿಹಾಸರಂಗದೊಳಗೆ ಬಹು

ಗೌರವದಿಂದ ಎಡೆಬಿಡದೆ ಸಾವಿರಾರು ವರ್ಷಗಳ ತನಕ ಮೆರೆಯಿತೋ, ಯಾವುದರ ಹೆಸರು ಸುವರ್ಣಾಕ್ಷರಗಳಿಂದ ಬರೆಯಲ್ಪಡಲಿಕ್ಕೆ ಯೋಗ್ಯವೋ ಅಂಥ ರಾಷ್ಟ್ರವೂ ಕಾಲನಿಂದ ಗ್ರಸ್ತವಾಗಿ ನಿದ್ರಿತವಾಗಿದ್ದರೂ, ಅದು ಇಂದಿಲ್ಲದಿದ್ದರೆ ನಾಳೆಯಾದರೂ ತನ್ನ ಕಳೆದುಕೊಂಡ ವೈಭವವನ್ನು ಸಂಪಾದಿಸಿಯೇ ತೀರುವುದೆಂಬುದು ನಿರ್ವಿವಾದ ಸಂಗತಿಯು. ಸಾರಾಂಶ, ಒಮ್ಮೆ ಜೀವಂತವಾಗಿದ್ದ ರಾಷ್ಟ್ರವು ಎಂದೂ ಮೃತವಾಗದು. ಅದು ನಿದ್ದೆ ಹೋಗಿಬರಬಹುದು; ಗಾಬರಿಗೊಂಡು ಕಕ್ಕಾವಿಕ್ಕಿಯಾದ ನಮ್ಮ ಕಣ್ಣಿಗೆ ಅದು ಮೃತವಾದಂತೆ ತೋರಬಹುದು. ಆದರೆ ಸೂಕ್ಷ್ಮವಾಗಿಯೂ, ಕೂಲಂಕಷವಾಗಿಯೂ ವಿಚಾರಿಸಿದರೆ, ನಮ್ಮ ಭ್ರಮೆಯು ಬಯಲಾಗಿ, ಅದರಲ್ಲಿ ವೈಭವದ ಬೀಜಗಳು ಇನ್ನೂ ಅಚ್ಚಳಿಯದೆ ಇರುವವಾಗಿ ನಿದರ್ಶನಕ್ಕೆ ಬಾರದಿರದು.

ಇದು ಸಾಮಾನ್ಯ ವಿಚಾರವಾಯಿತು. ನಮ್ಮ ಜನ್ಮಭೂಮಿಯಾದ ಕನ್ನಡನಾಡಿನ ಸದ್ಯದ ಅವಸ್ಥೆ ಏನು? ಅದು ಮೃತರಾಷ್ಟ್ರವೋ, ಜೀವಂತ ರಾಷ್ಟ್ರವೋ ಎಂಬುದನ್ನು ನಾವಿನ್ನು ತಿಳಿಯಲು ಮುಂದುವರಿಯುವ. ಕನ್ನಡಿಗರೇ ! ನಾವು ನಿಮ್ಮ ಕೈಯಲ್ಲಿ ಕಡ್ಡೀ ಕೊಟ್ಟು ಸಾರಿ ದೂರಿ ಹೇಳುವುದೇನಂದರೆ, ನಮ್ಮ ಕರ್ನಾಟಕವು ಮೃತರಾಷ್ಟ್ರವಲ್ಲ; ಅದು ಜೀವಂತ ರಾಷ್ಟ್ರವು. ಅಷ್ಟೇಕೆ, ಅದೊಂದು ಪ್ರತಿಭಾಸಂಪನ್ನವಾದ ರಾಷ್ಟ್ರವು. ೧೦೦೦-೧೫೦೦ ವರ್ಷಗಳ ವರೆಗೆ ಅವ್ಯಾಹತವಾಗಿ ಹಿಂದೂ ದೇಶದ ಇತಿಹಾಸದಲ್ಲಿ ವೈಭವದಿಂದ ಮೆರೆದ ರಾಷ್ಟ್ರವೆಂದರೆ ಕರ್ನಾಟಕ ವೊಂದೇ ! ಉತ್ತರ ಹಿಂದುಸ್ತಾನದಂಥ ಬಲವಾದ ರಾಷ್ಟ್ರದ ಇತಿಹಾಸ ಕೂಡ ಹರ್ಷವರ್ಧನನ ಕಾಲದಿಂದ ಲುಪ್ತವಾಗಿಹೋಯಿತು. ಆದರೆ ದಕ್ಷಿಣದಲ್ಲಿ ನಮ್ಮ ಕರ್ನಾಟಕವು ಮಾತ್ರ ಪೂರ್ವದಿಂದ ನಡೆದು ಬಂದ ತನ್ನ ವೈಭವವನ್ನು ಸ್ವಲ್ಪಾದರೂ ಕುಂದಿಸದೆ, ತಿರುಗಿ ಹಬ್ಬುವಂತೆ ಮಾಡಿ, ಮುಂದೆ ಸಾವಿರಾರು ವರ್ಷಗಳ ವರೆಗೆ ತನ್ನ ಘನತೆಯನ್ನು ಅತ್ಯಂತ ದಕ್ಷತೆಯಿಂದ ಕಾಪಾಡಿಕೊಂಡಿದೆ. ಈ ಕರ್ನಾಟಕದಲ್ಲಿಯೇ ಜಗತ್ತನ್ನೆಲ್ಲ ಆಶ್ಚರ್ಯಗೊಳಿಸುವಂಥ, ಅನ್ಯಾದೃಶ್ಯವಾದ ಕಟ್ಟಡಗಳು ಹುಟ್ಟಿವೆ. ಈ ಕರ್ನಾಟಕದಲ್ಲಿಯೇ ಇತರ ವಾಙ್ಮಯಗಳನ್ನು ಮೀರಿ

ಸುವ ಗ್ರಂಥಗಳು ನಿರ್ಮಾಣವಾಗಿವೆ. ಈ ನಮ್ಮ ಕರ್ನಾಟಕದ ಸುಧಾರಣೆಯು ವಿಶಿಷ್ಟಬಗೆಯದಾಗಿರುವುದರಿಂದಲೇ ಗಾಯನಶಾಸ್ತ್ರದಲ್ಲಿ 'ಕರ್ನಾಟಕ' ವೆಂಬುದೊಂದು ಹೊಸ ಪದ್ಧತಿಯೇ ರೂಢವಾಗಿದೆ. ಸಾರಾಂಶ, ನಮ್ಮ ಅರಸರು ದೊಡ್ಡವರಿದ್ದರು; ನಮ್ಮ ರಾಜ್ಯವು ವಿಸ್ತಾರವಾಗಿ ಹಬ್ಬಿತ್ತು; ನಮ್ಮ ವೈಭವವು ಅತಿಶಯವಾದ ಘನತೆಗೇರಿತ್ತು; ಆ ಕಾಲಕ್ಕೆ ಹಿಂದುಸ್ತಾನದಲ್ಲಿ ಕರ್ನಾಟಕವನ್ನು ಹಿಂದೆ ಹಾಕುವ ರಾಷ್ಟ್ರವು ಯಾವುದೂ ಇರಲಿಲ್ಲ. ಕರ್ನಾಟಕದೊಳಗಿರುವಷ್ಟು ದೊಡ್ಡ ಪಟ್ಟಣಗಳು ಹಿಂದೂ ದೇಶದಲ್ಲಿ ಇರಲಿಲ್ಲ. ಕರ್ನಾಟಕದಲ್ಲಿರುವಷ್ಟು ವಿದ್ವಾಂಸರರು ಬೇರೆ ಕಡೆಯಲ್ಲಿರಲಿಲ್ಲ. ಕರ್ನಾಟಕದಷ್ಟು ಸಂಪನ್ನವಾದ ವಾಣ್ಯಿಯವೂ ಮಿಕ್ಕ ಕಡೆಯಲ್ಲಿರಲಿಲ್ಲ. ಕರ್ನಾಟಕದಲ್ಲಿರುವಂಥ ಕಟ್ಟಡಗಳು ಹಿಂದೂ ದೇಶದ ಕಣ್ಣು ಮುಂದಿರಲಿಲ್ಲ. ಹೀಗಿದ್ದು, ನಾವು ಅದಕ್ಕೆ ಮೃತವೆಂದು ಕರೆವುದೆಂತು ?

ಕನ್ನಡಿಗರೇ ! ನಿಮ್ಮ ಸುತ್ತುಮುತ್ತಲೂ ದೃಷ್ಟಿಯನ್ನು ಚೆಲ್ಲಿದರೆ ಅಲ್ಲಲ್ಲಿ ನಿಮ್ಮ ಪ್ರಾಚೀನ ಕರ್ನಾಟಕದ ಸಂಪನ್ನತೆಯ ದೇದೀಪ್ಯಮಾನವಾದ ಹೆಗ್ಗುರುತುಗಳು ಕಣ್ಣಿಗೆ ಕಟ್ಟದಿರಲಾರವು; ಆ ನಾಡಿನಲ್ಲಿ ಹುಟ್ಟಿ ಬೆಳೆದು ದಿಗಂತ ಕೀರ್ತಿಯನ್ನು ಪಡೆದ ರಾಜಕಾರ್ಯಧುರಂಧರರ, ಮೇಧಾವಿಗಳ ಮತ್ತು ರಾಜಗುರುಗಳ ಜೀವವಚರಿತ್ರೆಯನ್ನೋದಿದರೆ, ನಿಮ್ಮ ಜೀವನದ ಒಗಟೆಯು ಸಹಜವಾಗಿ ಒಡೆಯದೆ ನಿಲ್ಲದು; ಆ ನಾಡಿನ ಪ್ರಾಚೀನ ಸಂಪತ್ತಿಗೂ, ಕಲಾಕೌಶಲ್ಯಕ್ಕೂ ಸಾಕ್ಷಿಯಾಗಿ ನಿಂತಿರುವ ಗುಡಿಗೋಪುರಗಳನ್ನು ನೋಡಿದರೆ, ಇಂತಹ ಅಮಾನುಷ ಕಾರ್ಯಗಳನ್ನು ಸುಲಭವಾಗಿ ನೆರವೇರಿಸಿದ ರಾಷ್ಟ್ರದ ಅಗ್ಗಳಿಕೆಯು ಸಹಜವಾಗಿ ಗೊತ್ತಾಗುವದು. ಇಂಥ ರಾಷ್ಟ್ರವು ಮೃತವಾಗಿರುವುದೆಂದು ಕಲ್ಪನೆ ಮಾಡುವುದಾದರೂ ಹೇಗೆ ! ಕನ್ನಡಿಗರೇ ! ಕರ್ನಾಟಕವು ಮೃತರಾಷ್ಟ್ರವಲ್ಲ. ಅದು ಸ್ವಭಾವಚೈತನ್ಯಪೂರ್ಣವಾದ ರಾಷ್ಟ್ರವು. ಕಾಲಾನುಸಾರವಾಗಿ ಅದು ಮೇಲು ಕೀಳು ಸ್ಥಿತಿಗೆ ಈಡಾಗಿರಬಹುದು. ಆದರೆ ಅದರಲ್ಲಿರುವ ಚೈತನ್ಯಶಕ್ತಿಯು ಮಾತ್ರ ಯಾವ ಕೃತ್ರಿಮೋಪಾಯಗಳಿಂದಲೂ ಕುಂದಲಾರದು. ಈಗ ಅದು ತನ್ನ ಆಲಸ್ಯದ ಮೂಲಕ,

ತನ್ನ ಜನರ ಹೇಡಿತನದ ಮೂಲಕ, ತನ್ನ ಕಡುತರವಾದ ದೈವದುರ್ವಿ-
ಲಾಸದ ಮೂಲಕ, ಸಾಲದುದಕ್ಕೆ ಸುತ್ತಲಿನ ಬಿಕ್ಕಟ್ಟಾದ ಪರಿಸ್ಥಿತಿಯ
ಮೂಲಕ, ನಿಲಕ್ಷಣವಾದ ನಿದ್ರೆಗೀಡಾಗಿರುವುದೇನೋ ಸರಿ ! ಆದರೆ
ಇಂಥ ಸಂದುಕಟ್ಟಿನಲ್ಲಿ, ತಾನು ಸತ್ತಿರದೆ ಜೀವಂತವಾಗಿರುವುದೆಂಬ ತಿಳಿ
ವನ್ನು ಮಾತ್ರ ನಾವು ಆ ರಾಷ್ಟ್ರದ ಮನಸ್ಸಿನಲ್ಲಿ ಚೆನ್ನಾಗಿ ಬಿಂಬಿಸಿದರೆ
ಸಾಕು. ಅದೇ, ಅದನ್ನು ಅಡಬಡಿಸಿ ಎಚ್ಚರಗೊಳ್ಳುವಂತೆ ಮಾಡುವುದು;
ಅಲ್ಲದೆ ತನ್ನ ಸಾಂಪ್ರತದ ಹೀನಸ್ಥಿತಿಯ ಬಗ್ಗೆ ಪರಾಕಾಷ್ಠೆಯ ಉದ್ವೇಗ
ವನ್ನೂ ಉಂಟುಮಾಡುವುದು. ಸಾರಾಂಶ :— ರಾಷ್ಟ್ರಕ್ಕೂ ಮನುಷ್ಯ
ನಂತೆ ಆತ್ಮವಿರುವ ಕಾರಣ, ವೇದಾಂತಶಾಸ್ತ್ರವನ್ನೋದಿ ಆತ್ಮನ ಅಮೃ-
ತತ್ವವನ್ನೂ ಅವ್ಯಯತ್ವವನ್ನೂ ಅವಿಕಾರತ್ವವನ್ನೂ ತಿಳಿದುಕೊಂಡಿರುವ
ಮನುಷ್ಯನು ಹೇಗೆ ದುಃಖಿಸದೆ, ಎದೆಗುಂದದೆ, ಧೀರನಾಗಿಯೂ ವೀರ
ನಾಗಿಯೂ ಇರುವನೋ ಹಾಗೆಯೇ ತನ್ನ ಜೀವದ್ದೆಶೆಯನ್ನು ಅರಿತು-
ಕೊಂಡ ರಾಷ್ಟ್ರವು ಎಂತಹ ಕಷ್ಟಪರಂಪರೆಗಳಿಗೂ ಅಂಜದೆ ಅಳುಕದೆ
ಇರುವುದು. ಆದರೆ ಈಗ ನಮ್ಮ ಸ್ಥಿತಿಯು ಹಾಗೆಲ್ಲಿದೆ ? ಕನ್ನಡಿಗರಾದ
ನಾವು ಈ ನಿತ್ಯ ತತ್ವವನ್ನು ಎಂದರೆ 'ಕರ್ನಾಟಕತ್ವ'ವನ್ನು ಮರೆತು ಈಗಿ
ರುವ ನಮ್ಮ ಕ್ಷಣಿಕವಾದ ಅವಸ್ಥೆಯೇ ಕೊನೆಯ ವರೆಗೂ ಇರುವುದೆಂಬ
ಭ್ರಾಮಕ ಭಾವನೆಯಿಂದ ಕೈಕಾಲು ಕಳೆದುಕೊಂಡು ಕುಳಿತಿರುವೆವಲ್ಲಾ !
ಅದೇ ನಾವು ನಮ್ಮ ಗತವೈಭವದ ಇತಿಹಾಸವನ್ನು, ನಮ್ಮ ಪ್ರಾಚೀನ
ಸಂಸ್ಕೃತಿಯ ಹೃದಯಂಗಮವಾದ ಮೇಲ್ಮೆಯನ್ನು ಮನಸ್ಸಿನಲ್ಲಿ ನಡು
ವಂತೆ ಅರಿತವರಾಗಿದ್ದರೆ, ನಮ್ಮ ಕರ್ನಾಟಕವು ಭಾರತೀಯ ಇತಿಹಾಸದ
ನಾಟ್ಯರಂಗದೊಳಗೆ ಕೈಕೊಂಡ ಪಾತ್ರದ ಬಲ್ಮೆಯು ನಮ್ಮ ಮಸುಕಾದ
ಮನಸ್ಸಿನಲ್ಲಿ ಮೂಡಿದ್ದರೆ, ಈಗಿನಂತೆ ನಾವು ಜೋಲುಬಿದ್ದ ಮತ್ತು
ಬಾಡಿದ ಮೋರೆಯವರಾಗಿ ಎಂದಿಗೂ ಕುಳಿತುಕೊಳ್ಳುತ್ತಿರಲಿಲ್ಲ ! ಒಳ್ಳೆ
ಯದು ! ಆದದ್ದಾಯಿತು ! ಈಗಲಾದರೂ ಕಣ್ದೆರೆದು, ನಾವು ನಮ್ಮ
'ಕರ್ನಾಟಕತ್ವ'ವನ್ನು ಅರಿತು ನಮ್ಮ ಮುಂದಣ ಮಾರ್ಗವನ್ನು ತಿದ್ದಿ
ಕೊಂಡರೆ, ಜಗತ್ತಿನಲ್ಲಿ ನಗೆಗೀಡಾಗದೆ, ನಮ್ಮ ಮಾನವನ್ನು ನಾವು ಕಾಯ್ದು
ಕೊಂಡಂತಾಗುವುದು. ಇದೀಗ ನಮ್ಮೆಲ್ಲರ ಶ್ರೇಷ್ಠವಾದ ಕರ್ತವ್ಯವು.

ಹಾಗಾದರೆ ಆ 'ಕರ್ನಾಟಕತ್ವ'ವನ್ನು ಅರಿತುಕೊಳ್ಳುವುದೆಂತು! ಅದೇನು ಕಣ್ಣಿಗೆ ಕಾಣುವುದೊ! ಕಿವಿಗೆ ಕೇಳುವುದೋ! ಕೈಗೆ ಸ್ಪರ್ಶಿಸುವುದೋ! ಮೂಗಿಗೆ ಮೂಸುವುದೋ! ಇಲ್ಲ. ಇಲ್ಲ. ಹಾಗಿದ್ದರೆ ಈ ಕಾರ್ಯವು ಎಷ್ಟೊಂದು ಸುಲಭಸಾಧ್ಯವಾಗಬಹುದಾಗಿತ್ತು! ಆವೋ! ಈ ತರಹದ ಗೊಂದಲಕ್ಕೆ ಅವಕಾಶವೇ ಇರುತ್ತಿರಲಿಲ್ಲ; ಹಾಗಿರುವುದಿಲ್ಲವೆಂದೇ ಪ್ರತಿಯೊಬ್ಬನು ಅದನ್ನು ಜ್ಞಾನದೃಷ್ಟಿಯಿಂದಲೇ ಕಂಡುಹಿಡಿದು, ಅದರ ಅಸ್ತಿತ್ವವನ್ನು ಹೃನ್ಮಂದಿರದಲ್ಲಿ ಚಿಂತಿಸಬೇಕಾಗಿದೆ! ಆದರೆ ಆಹಾ! ಈ ದೃಷ್ಟಿಯಿಲ್ಲದಿರುವುದರಿಂದಲೇ ನಾವು ಕಣ್ಣಿದ್ದು ಕುರುಡರೂ, ಕಿವಿಯಿದ್ದು ಕಿವುಡರೂ, ಆಗಿದ್ದೇವೆ! ನಮ್ಮ ಸುತ್ತಲೂ ಎಲ್ಲೆಲ್ಲಿಯೂ ಇತಿಹಾಸದ ರಾಶಿಯೇ ಒಟ್ಟಿದ್ದೂ, ನಮಗೆ ಇತಿಹಾಸವೇ ಇಲ್ಲವೆಂದು ಸುಮ್ಮನೆ ಅರಚಿಕೊಳ್ಳುತ್ತಿದ್ದೇವೆ! ಇದೋ! ಇಲ್ಲಿ ನಮ್ಮೆದಿರಿಗೆ ಮೈಗೊಂಡು ನಿಂತಿರುವ ಈ ಕೋಟೆ ಕೊತ್ತಳಗಳು ನಮ್ಮ ಗತವೈಭವದ ಹೆಗ್ಗುರುತುಗಳಲ್ಲವೇ? ಅದೋ! ಅಲ್ಲಿ ಕಾಣುತ್ತಿರುವ ಸುಂದರವಾದ ಭವ್ಯ ದೇವಾಲಯಗಳು ನಮ್ಮ ಇತಿಹಾಸದ ಪವಿತ್ರ ರಕ್ಷಾಭಾಂಡಾರಗಳಲ್ಲವೇ! ಜಗತ್ತಿನಲ್ಲೆಲ್ಲ ಹೆಸರುಪಡೆದಿರುವ ದ್ವೈತ, ಅದ್ವೈತ, ವಿಶಿಷ್ಟಾದ್ವೈತವೆಂಬೀ ಮತಗಳು ಕರ್ನಾಟಕಸ್ಥರ ಹೆಸರನ್ನು ಎಂದಾದರೂ ಮರೆಯಿಸುವವೇ! ಕೋಣನ ಮುಂದೆ ಕಿನ್ನರಿಯನ್ನು ಬಾರಿಸಿದಂತೆ ಇವೆಲ್ಲವೂ ನಮ್ಮ ಮನಸ್ಸಿನಲ್ಲಿ ಕಿಂಚಿತ್ತಾದರೂ ಸ್ಫೂರ್ತಿಯನ್ನುಂಟು ಮಾಡುವುದಿಲ್ಲವಲ್ಲ! ಕರ್ನಾಟಕವು ನಮ್ಮ ಹುಟ್ಟುನಾಡು; ಅದನ್ನಾಳಿದ ಅರಸರು ನಮ್ಮವರು; ಸಂಕಟಕಾಲದಲ್ಲಿ ಅದರ ಜೋಕೆಗಾಗಿ ಕಾದಿ ನೀರಿನಂತೆ ತಮ್ಮ ಮೈನೆತ್ತರನ್ನು ಬಸಿದಂಥ ಕಾದಾಳುಗಳು ನಮ್ಮ ವೀರಬಂಧುಗಳು; ಅನೇಕ ಶತಮಾನಗಳು ಸಂದುಹೋದರೂ ದಿಕ್ಕುದಿಕ್ಕುಗಳಲ್ಲಿ ತಮ್ಮ ಕೈಗಾರಿಕೆಯ ಸೊಕ್ಕಿನಿಂದ ಮೊಗವೆತ್ತಿಕೊಂಡು ನಿಂತಿರುವ ಗುಡಿ-ಗೋಪುರಗಳು ನಮ್ಮ ಪುರಾತನ ಶಿಲ್ಪಶಾಸ್ತ್ರದ ಮಾದರಿಗಳು— ಎಂಬ ಅಭಿಮಾನವು ನಮ್ಮ ಮನೋಭೂಮಿಕೆಯಲ್ಲಿ ಎಲ್ಲಿಯವರೆಗೆ ಅಂಕುರಿಸುವುದಿಲ್ಲವೋ, ಅಲ್ಲಿಯ ವರೆಗೆ ಅವೆಲ್ಲ ನಮ್ಮನ್ನು ಕಣ್ಣೆತ್ತಿ ನೋಡಲಾರವು! ನಮ್ಮನ್ನು ಸಮೀಪಿಸಲಾರವು! ನಮಗೆ

ಬೋಧಿಸಲಾರವು ! ನಮ್ಮನ್ನು ಪ್ರೇರಿಸಲಾರವು ! ಎಂದ ಮೇಲೆ, ಸವಿ-ಸವಿಯೂಟಗಳನ್ನುಂಡು ವೀಳ್ಯವನ್ನು ಮೆಲ್ಲುತ್ತಲೂ, ಚಕ್ಕಂದವಾಡುತ್ತಲೂ ಕೇವಲ ತಾಮಸವೃತ್ತಿಯಿಂದ ಕಾಲ ಕಳೆಯುತ್ತಿರುವ ನಮ್ಮಂಥ ವಿಚಾರಶೂನ್ಯರಾದ ಕನ್ನಡಿಗರಲ್ಲಿ ಅವುಗಳ ನೋಟದಿಂದ ಉಚ್ಚ ಭಾವನೆಗಳು ಉಕ್ಕಿ ಬರುವ ಮಾತಂತೂ ದೂರವೇ ಸರಿ ! ಕನ್ನಡಿಯಲ್ಲಿ ನಮ್ಮ ಮುಖವು ಕಾಣಿಸಬೇಕಾದರೆ ಅದು ಸ್ವಚ್ಛವಾಗಿರಬೇಕು. ಹಾಗೆಯೇ ಇಂಥ ಉದಾತ್ತ ಕಲ್ಪನೆಗಳು ನಮ್ಮಲ್ಲಿ ಮೂಡಬೇಕಾದರೆ, ನಮ್ಮ ಮನಸ್ಸು ಶುದ್ಧವೂ ಸಾತ್ವಿಕಾಹಂಕಾರದಿಂದೊಡಗೂಡಿದ್ದೂ ಇರಬೇಕು. ಯಾವ ಮನುಷ್ಯನಲ್ಲಿ ಸಾತ್ವಿಕಾಹಂಕಾರದ ಕಿರಣಗಳು ಕಾಣಬರುವದಿಲ್ಲವೋ ಅವನ ಬಾಳು ಬಾಳಲ್ಲ. ಅದು ಭೂಭಾರವು. ' ನಾನು ಕನ್ನಡಿಗನು ' 'ಕರ್ನಾಟಕವು ನನ್ನದು ' ಎಂಬ ಸದ್ವಿಚಾರತರಂಗಗಳಿಂದ ಯಾವನ ಹೃದಯವು ಅತ್ಯಾನಂದದಿಂದ . ಧೀಂಕಿಡುವುದಿಲ್ಲವೋ, ಕನ್ನಡ ತಾಯಿಗೆ ಈಗ ಬಂದೊದಗಿರುವ ವಿಷಮಸ್ಥಿತಿಯಲ್ಲಿ ಯಾವಾತನ ಹೃದಯವು ತಲ್ಲಣಿಸುವುದಿಲ್ಲವೋ, ತಳಮಳಿಸುವುದಿಲ್ಲವೋ, ರೋಮ-ರಂಧ್ರಗಳಲ್ಲಿ ಕೂಡ ' ಕರ್ನಾಟಕ ' ವೆಂದು ಸೊಲ್ಲು ಹೊರಡುವದಿಲ್ಲವೋ, ಅದು ಹೃದಯವಲ್ಲ. ಕಲ್ಲಿನ ಬಂಡೆ ! ದೇಹವಲ್ಲ; ಮೋಟುಮರ! ಇಂಥ ಚೇತನವಿಲ್ಲದಿರುವ ಜನರಿಗೆ ಕಣ್ಣೀರಿಡುತ್ತಿರುವ ಆ ಕನ್ನಡ ತಾಯಿಯ ಗೋಳಿನಿಂದೇನು ! ಕಳಚಿ ಬೀಳುತ್ತಿರುವ ಆ ಗುಡಿ-ಗೋಪುರಗಳಿಂದೇನು! ಬಾಯಿಯಿಲ್ಲದ ಉಚ್ಚ ಧ್ವನಿಯಿಂದ ಕೂಗುತ್ತಿರುವ ಆ ವಾಙ್ಮಯ-ಗಳಿಂದೇನು ! ಕಾಡು-ಬೀಡುಗಳಲ್ಲಿ ಕೇಳುವವರಿಲ್ಲದೆ ಸುಮ್ಮನೆ ಗಂಟಲು ಹರಿದುಕೊಂಡು ಕೂಗಿ ಹೊಗಳುಭಟ್ಟರಂತೆ ತಮ್ಮ ವೀರರನ್ನೂ, ವೀರ ಸತಿಯರನ್ನೂ ಹೊಗಳುತ್ತಿರುವ ಆ ವೀರಗಲ್ಲು, ಮಹಾಸತಿ ಕಲ್ಲುಗಳಿಂ-ದೇನು ! ಆದುದರಿಂದ, ಎಲೈ ಕನ್ನಡಿಗರೇ ! ನೀವು ಕರ್ನಾಟಕಾಭಿಮಾನ ದೇವತೆಯನ್ನು ಪ್ರಸನ್ನೀಕರಿಸಿಕೊಂಡು, ಅವಳ ಅಮರತ್ವವನ್ನು ಜ್ಞಾನ ದೃಷ್ಟಿಯಿಂದ ಕಂಡುಹಿಡಿದು, ಅವಳ ಇತಿಹಾಸವನ್ನು ಆದ್ಯಂತವಾಗಿ ಪರಿಶೀಲಿಸಿ, ಕನ್ನಡಿಗರೆಂಬ ನಿಮ್ಮ ಹೆಸರನ್ನು ಸಾರ್ಥಕಪಡಿಸಿಕೊಳ್ಳಿರಿ.

———

## ೩ ನೆಯ ಪ್ರಕರಣ

## ಕರ್ನಾಟಕ-ವಿಸ್ತಾರ

ಕಾವೇರಿಯಿಂದಮಾಗೋ ।
ದಾವರಿವರಮಿರ್ದ ನಾಡದಾ ಕನ್ನಡದೊಳ್ ॥
ಭಾವಿಸಿದ ಜನಪದಂ ವಸು ।
ಧಾವಳಯವಿಲೀನವಿಷದವಿಷಯವಿಶೇಷಂ ॥

— ನೃಪತುಂಗ

ವಾಚಕರೆ! ಹಿಂದಿನ ಪ್ರಕರಣದಲ್ಲಿ ನಾವು ನಿಮಗೆ ಕರ್ನಾಟಕದ ಇತಿಹಾಸವನ್ನು ಅಭ್ಯಾಸಿಸಲಿಕ್ಕೆ ಹೇಳಿರುವೆವಷ್ಟೇ! ಆದರೆ ಕರ್ನಾಟಕವೆಂದರೇನು! ಅದರ ವ್ಯಾಪ್ತಿಯೆಷ್ಟು!– ಎಂಬುದೇ ಮೊದಲು ಮನಸ್ಸಿನಲ್ಲಿರದಿದ್ದರೆ, ಅದರ ಇತಿಹಾಸವನ್ನು ಅಭ್ಯಸಿಸುವ ಬಗೆ ಹೇಗೆ! ಕರ್ನಾಟಕವೆಂದರೆ, ಮುಂಬಯಿ ಇಲಾಖೆಯಲ್ಲಿರುವ ಧಾರವಾಡ, ಬೆಳಗಾವಿ, ವಿಜಾಪುರ, ಕಾರವಾರ ಈ ನಾಲ್ಕು ಜಿಲ್ಹೆಗಳು; ಮದ್ರಾಸ ಇಲಾಖೆಗೆ ಸೇರಿರುವ ಬಳ್ಳಾರಿ, ಅನಂತಪುರ, ಮಂಗಳೂರು ಈ ಜಿಲ್ಹೆಗಳು; ಹೈದರಾಬಾದ ಸಂಸ್ಥಾನಕ್ಕೆ ಹೊಂದಿದ ರಾಯಚೂರು, ಕಲಬುರ್ಗಿ, ಬೀದರ ಮೊದಲಾದವುಗಳು; ಇಡೀ ಮೈಸೂರು ಸಂಸ್ಥಾನ, ಸಾಂಗಲಿ, ಮಿರಜ, ಜಮಖಂಡಿ, ಕೊಲ್ಹಾಪೂರ, ಕುರಂದವಾಡ, ಮುಧೋಳ, ರಾಮದುರ್ಗ ಸಂಸ್ಥಾನಗಳೊಳಗಿನ ಕೆಲವು ಭಾಗಗಳು; ಕೊಡಗು ಪ್ರಾಂತ-ಇವಿಷ್ಟೇ ಎಂದು ನಮ್ಮ ಕಲ್ಪನೆ. ಈ ತಪ್ಪು ತಿಳುವಳಿಕೆಯನ್ನು ನೀವು ನಿಮ್ಮ ತಲೆಯೊಳಗಿಂದ ಮೊದಲು ಕಿತ್ತಿಹಾಕಿರಿ! ಹಿಂಧಿನ ಕರ್ನಾಟಕವು ಕರಗುತ್ತ ಕರಗುತ್ತ ಹೋಗಿ, ಈಗ ಅದರ ಕಾಲು ಪಾಲು ಮಾತ್ರ ಉಳಿದುಕೊಂಡಿದೆ. ಅದರ ಕೆಲವು ಭಾಗವು ಮಹಾರಾಷ್ಟ್ರಕ್ಕೂ ಕೆಲವು ಭಾಗವು ತೆಲುಗು ಸೀಮೆಗೂ, ಕೆಲವು ಭಾಗವು ಅರವು ಮುಂತಾದ ಭಾಷೆಗಳನ್ನಾಡುವ ಸೀಮೆಗೂ, ಸೇರಿಹೋಗಿದೆ. ಆದ್ದುದರಿಂದ ನಾವು ಈ ಪ್ರಕರಣ

ದಲ್ಲಿ ಹಿಂದಕ್ಕೆ ಕನ್ನಡ ಭಾಷೆಯ ವಿಸ್ತಾರವು ಎಲ್ಲಿಯವರೆಗಿತ್ತೆಂಬುದನ್ನು ಹೇಳುವವರಿದ್ದೇವೆ.

ಹಿಂದಕ್ಕೆ 'ಕರ್ನಾಟಕ' ಮತ್ತು ಕನ್ನಡ ಭಾಷೆಯ ಪ್ರದೇಶ ಇವೆರಡೂ ಸಮಾನಾರ್ಥಕ ಶಬ್ದಗಳಾಗಿರಲಿಲ್ಲ. ಕನ್ನಡ ಭಾಷೆಯನ್ನಾಡುವ ಪ್ರದೇಶಗಳಲ್ಲಿ 'ಕರ್ನಾಟಕ, ಮಹಾರಾಷ್ಟ್ರ, ಲಾಟ, ಕುಂತಳ, ಕೊಂಕಣ' ಇವೇ ಮುಂತಾದ ಭಾಗಗಳಿದ್ದವು. ಆದರೆ ಮುಂದೆ ಬರಬರುತ್ತ 'ಕರ್ನಾಟಕ' ವೆಂಬ ಭಾಗವೇ ಹೆಚ್ಚು ಪ್ರಬಲವಾದುದರಿಂದ ಅದೇ ಹೆಸರು ಕನ್ನಡ ದೇಶಕ್ಕೆಲ್ಲ ರೂಢವಾಯಿತು. ಮತ್ತು ಇತಿಹಾಸ ದೃಷ್ಟಿಯಿಂದ ನೋಡಿದರೆ, ಕನ್ನಡ ದೇಶಕ್ಕೆ 'ಕರ್ನಾಟಕ'ವೆಂಬ ಹೆಸರೇ ಒಪ್ಪುತ್ತದೆಂದು ಕಂಡುಬರುವುದು. ಏಕೆಂದರೆ, ಕನ್ನಡ ಭಾಷೆಗೆ 'ಕರ್ನಾಟಕ' ಅಥವಾ 'ಕರ್ಣಾಟಕ' ವೆಂಬ ಹೆಸರು ಬಹು ಪುರಾತನ ಕಾಲದಿಂದಲೂ ನಡೆದುಬಂದಿದೆ. ಮಹಾಭಾರತದಲ್ಲಿಯೂ ಕೂಡ 'ಕರ್ನಾಟಕ'ದ ಉಲ್ಲೇಖವು ಬಂದಿದೆ. ಕನ್ನಡಿಗರು ತಮ್ಮ ವೈಭವದ ಕಾಲದಲ್ಲಿ, ತಮ್ಮನ್ನು 'ಕರ್ನಾಟಕ' ರೆಂತಲೇ ಹೇಳಿಕೊಳ್ಳುತ್ತಿದ್ದರು. ಚಾಲುಕ್ಯರ ದಂಡಿಗೆ 'ಕರ್ನಾಟಕಬಲ' ವೆಂಬ ಹೆಸರಿರುವುದಾಗಿ ಶಿಲಾಲಿಪಿಯಿಂದ ತಿಳಿದುಬರುತ್ತಿದೆ. ವಿಜಯನಗರದ ಸಾಮ್ರಾಜ್ಯ ಸ್ಥಾಪಕರಾದ ವಿದ್ಯಾರಣ್ಯರಿಗೆ 'ಕರ್ನಾಟಕ ಸಿಂಹಾಸನ ಸ್ಥಾಪನಾಚಾರ್ಯ' ರೆಂಬ ಬಿರುದಿತ್ತು. ಮೈಸೂರು ಸಂಸ್ಥಾನದ ಮಹಾರಾಜರಿಗೆ 'ಕರ್ನಾಟಕ'ದ ಅರಸರೆಂದೆನ್ನುವರಲ್ಲದೆ, ಮೈಸೂರ ಮಹಾರಾಜರೆಂದೆನ್ನುವುದಿಲ್ಲವೆಂಬುದನ್ನು ಮೈಸೂರಿನವರು ಮರೆಯಕೂಡದು. ಇವೆಲ್ಲ ಸಂಗತಿಗಳನ್ನು ಮನಸ್ಸಿನಲ್ಲಿ ತಂದುಕೊಂಡರೆ, ಭಾಷಾ ದೃಷ್ಟಿಯಿಂದಲೂ ರಾಜ್ಯವಿಸ್ತಾರದ ದೃಷ್ಟಿಯಿಂದಲೂ ಸಾರ್ಥಕವಾದ ಈ 'ಕರ್ನಾಟಕ' ಅಥವಾ 'ಕರ್ಣಾಟಕ' ವೆಂಬ ಹೆಸರನ್ನೇ ಕನ್ನಡಿಗರೆಲ್ಲರೂ ಅಭಿಮಾನಪೂರ್ವಕವಾಗಿ ಎತ್ತಿಕೊಂಡಿರುವುದೇನೂ ಆಶ್ಚರ್ಯವಲ್ಲ.

ಇರಲಿ; ಇನ್ನು ಕನ್ನಡ ಭಾಷೆಯು ಹಿಂದೆ ಎಲ್ಲಿಯವರೆಗೆ ಹಬ್ಬಿತ್ತೆಂಬುದನ್ನು ವಿಚಾರ ಮಾಡುವ. ೯ನೆಯ ಶತಮಾನದಲ್ಲಿ ಅದು ಉತ್ತರದಲ್ಲಿ ಗೋದಾವರಿಯಿಂದ ದಕ್ಷಿಣಕ್ಕೆ ಕಾವೇರಿಯ ವರೆಗೆ ಹಬ್ಬಿತ್ತೆಂಬುದಕ್ಕೆ ನೃಪತುಂಗನ ಕವಿರಾಜಮಾರ್ಗದಲ್ಲಂತೂ ಬಲವಾದ

ಪ್ರಮಾಣವಿದೆ ( ಶಿರೋಲೇಖದ ಪದ್ಯವನ್ನು ನೋಡಿರಿ. ) ಇದೇ ವಿಧಾನ ವನ್ನು ೧೬ನೆಯ ಶತಮಾನದಲ್ಲಿಯ ನಂಜುಂಡನೆಂಬ ಕವಿಯು ತನ್ನ ಪರದಾರಸೋದರ ರಾಮನಾಥ ಚರಿತವೆಂಬ ಗ್ರಂಥದ ಎರಡನೆಯ ಸಂಧಿ ಯಲ್ಲಿ " ಕಾವೇರಿಯಿಂದ ಗೋದಾವರಿವರೆಗಮಿರ್ದಾ ವಸುಧಾತಳ-ವಳಯಂ । ಭಾವಿಸೆ ಕರ್ನಾಟಕಜನಪದವದನಾವನೊಲಿದು ಬಣ್ಣಿ-ಸುವನು ॥ " ಎಂಬುದಾಗಿ ಬಲಪಡಿಸುವನು. ಸಾರಾಂಶ— ಕರ್ನಾಟಕದ ವ್ಯಾಪ್ತಿಯು ಆಗಿನ ಕಾಲಕ್ಕೆ ಕಾವೇರಿಯಿಂದ ಗೋದಾವರಿಯ ವರೆಗೆ ಇತ್ತೆಂಬುದು ಸ್ಪಷ್ಟವಾಗುತ್ತದೆ. ಆದರೆ ಈ ಪದ್ಯಗಳನ್ನು ಅನೇಕರು ಓದಿದ್ದರೂ, ಕನ್ನಡ ನಾಡಿನ ಚತುಸ್ಸೀಮೆಯನ್ನು ಇದು ವರೆಗೂ ಯಾರೂ ಗೊತ್ತುಮಾಡಿರುವುದಿಲ್ಲ. ವಿಜಯನಗರದ ಸಾಮ್ರಾಜ್ಯದ ಕಾಲಕ್ಕೆ ಕರ್ನಾಟಕದ ಸೀಮೆಯು ದಕ್ಷಿಣಕ್ಕೆ ಮುಳುಬಾಯಿಯ (ಮುಳಬಾಗಿಲ) ವರೆಗೆ ಹರಡಿತ್ತೆಂಬುದು ಬುಕ್ಕರಾಯನ ಸೊಸೆಯಾದ ಗಂಗಾದೇವಿಯು ರಚಿಸಿದ ಕಾವ್ಯದೊಳಗಿನ ಕೆಳಗಿನ ಈ ಶ್ಲೋಕದಿಂದ ಗೊತ್ತಾಗುವದು.

> ಅಥ ಲಂಘಿತಕರ್ನಾಟಃ ಪಂಚಷ್ಯೇರೇವ ವಾಸರೈಃ|
> ಪ್ರಾಪತ್ ಕಂಪಮಹೀಪಾಲಃ ಕಂಟಕಾನನಪತ್ತನಮ್ |

ವೀರ ಕಂಪರಾಯ ಚರಿತ, ೪,೪೭

ಸಾರಾಂಶ— ಐದು ದಿವಸದ ದಾರಿಯನ್ನು ನಡೆದ ಬಳಿಕ ಕಂಪ ಮಹೀಪಾಲನು ಕರ್ನಾಟಕವನ್ನು ದಾಟಿ ಕಂಟಕಾನನ ( ಮುಳಬಾಗಿಲ ) ಪಟ್ಟಣವನ್ನು ತಲ್ಪಿದನು. ಆದುದರಿಂದ ಹಿಂದಕ್ಕೂ ಕೂಡ ಕನ್ನಡನಾಡಿನ ಗಡಿಯು ಕಾವೇರಿಯ ನದಿಯ ವರೆಗೆ ಹಬ್ಬಿರಬಹುದೆಂಬುದಕ್ಕೆ ಸಂದೇಹ ವಿಲ್ಲ. ಈಗ ಕೂಡ ಅಲ್ಲಿಯ ವರೆಗೆ ಕನ್ನಡ ನುಡಿಯು ಪ್ರಚಾರದಲ್ಲಿರು ವುದರಿಂದ, ಕನ್ನಡ ನಾಡಿನ ದಕ್ಷಿಣ ಗಡಿಯು ನಿಷ್ಕರ್ಷೆಯಾದಂತಾಯಿತು. ಇನ್ನು ಪೂರ್ವಕ್ಕೆ ಕಾವೇರಿ ನದಿಯ ನಡುವಿನಿಂದ ಉತ್ತರಕ್ಕೆ ಸುಮಾರು ಗೋದಾವರೀ ನದಿಯ ಮುಖದ ವರೆಗೆ ಗೆರೆಯನ್ನೆಳೆದರೆ ಅದು ಕನ್ನಡ ನಾಡಿನ ಪೂರ್ವ ಸೀಮೆಯಾಗಬಹುದು. ಇದಲ್ಲದೆ, ' ಮಾಮೂಲನಾರ್ ' ಎಂಬ ತಮಿಳು ಕವಿಯು ಬರೆದ ' ಕುರುಂತೋಕಾಯಿ ' ಎಂಬುದೊಂದು

ತಮಿಳು ಪುಸ್ತಕದಲ್ಲಿ ತಮಿಳು ಭಾಷೆಯ ಸೀಮೆಯನ್ನು ವರ್ಣಿಸುವುದರ ಮೇಲಿಂದ ಕನ್ನಡ ಭಾಷೆಯ ಆಗ್ನೇಯ ಗಡಿಯು ಪುಲಿಕೋಟ್ (ಪಳವೇರ್ಕಾಡು) ಎಂಬ ಪಟ್ಟಣದ ವರೆಗೆ ಇತ್ತೆಂದು ಊಹಿಸಲಿಕ್ಕೆ ಆಸ್ಪದವಾಗಿದೆ. ಪಶ್ಚಿಮ ದಿಕ್ಕಿನಲ್ಲಿ ಅರಬೀ ಸಮುದ್ರವೇ ಕೊನೆಯ ಸೀಮೆಯಾಗಿತ್ತೆಂಬುದು ಕೊಂಕಣದಲ್ಲಿ ದೊರೆಯುವ ಶಿಲಾಲಿಪಿಗಳಿಂದ ಗೊತ್ತಾಗುತ್ತದೆ. ಇನ್ನು ವಾಯವ್ಯ ಮತ್ತು ಉತ್ತರದ ಗಡಿಗಳನ್ನು ನಿಶ್ಚಯಿಸುವುದು ಮಾತ್ರ ಬಹು ಕಠಿಣವಾದ ಕೆಲಸವಾಗಿದೆ. ಏಕೆಂದರೆ, ಅತ್ತಕಡೆಯಿಂದ ಮರಾಠರ ದಾಳಿಯು ನಮ್ಮ ನಾಡಿನ ಮೇಲೆ ಬಲವಾಗಿ ಬಿದ್ದು, ಅದನ್ನು ಬಲು ಕೆಳಕ್ಕೆ ಒತ್ತಿದೆ. ಹೀಗೆ ನಿಜವಾದ ಕರ್ನಾಟಕವೆಲ್ಲವೂ ಮಹಾರಾಷ್ಟ್ರಮಯವಾಗಿರುವದರಿಂದ, ಉತ್ತರಕ್ಕೆ ಗೋದಾವರಿಯ ವರೆಗೆ ನಮ್ಮ ಕನ್ನಡ ನಾಡು ಹಬ್ಬಿತ್ತೆಂದು ಹೇಳಿದರೆ, ನಮ್ಮ ಕನ್ನಡಿಗರು ಅದು ಸುಳ್ಳೆಂದೇ ಭಾವಿಸುವರು. ಈಗಿನ ಮಹಾರಾಷ್ಟ್ರದ ಪೂರ್ವಕ್ಕೆ ತೆಲಗು ದೇಶದಲ್ಲಿ ಗೋದಾವರಿಯ ತೀರದ ವರೆಗೆ ಕನ್ನಡ ನಾಡು ಹಿಂದಕ್ಕೆ ಹಬ್ಬಿದ್ದರೂ ಹಬ್ಬಿರಬಹುದು; ಮಹಾರಾಷ್ಟ್ರದಲ್ಲಿ ಮಾತ್ರ ಕನ್ನಡದ ಪ್ರವೇಶವಿರಲಿಲ್ಲವೆಂದು ಅನೇಕರು ಇನ್ನೂ ನಂಬುತ್ತಾರೆ. ಆದರೆ ಈ ವಿಷಯವನ್ನು ಚೆನ್ನಾಗಿ ಅಭ್ಯಾಸ ಮಾಡಿದ ನಮ್ಮ ಪರಮ ಸ್ನೇಹಿತರಾದ ನಾರಾಯಣ ಶ್ರೀನಿವಾಸ ರಾಜಪುರೋಹಿತ ಇವರು, 'ಜ್ಞಾನೇಶ್ವರಿ' ಯಲ್ಲಿ ಕನ್ನಡ ಶಬ್ದಗಳು ತುಂಬಿರುತ್ತವೆಂದೂ ಗೋವೆಯಲ್ಲಿಯ ಲೆಕ್ಕಪತ್ರಗಳು ಮೊನ್ನೆ ಮೊನ್ನಿನ ವರೆಗೆ ಕನ್ನಡದಲ್ಲಿಯೇ ಇದ್ದುವೆಂದೂ, ಪಂಢರಪುರದ ಶ್ರೀವಿಠ್ಠಲನು ಮುಖ್ಯವಾಗಿ ಕನ್ನಡಿಗರ ದೇವತೆಯೇ ಎಂದೂ ಪಂಢರಪುರದ ಸುತ್ತಲಿನ ಪ್ರದೇಶವು ಕನ್ನಡವೇ ಎಂದೂ, ಈಗ ೨೭ ವರ್ಷಗಳ ಕೆಳಗೆಯೇ ಮರಾಠೀ ಭಾಷೆಯಲ್ಲಿ ಪ್ರಕಟವಾಗುತ್ತಿರುವ ಪ್ರಸಿದ್ಧ 'ಕೇಸರೀ' ಪತ್ರದಲ್ಲಿ "ಮಹಾರಾಷ್ಟ್ರ ವ ಕರ್ನಾಟಕ" ಎಂಬ ಲೇಖನಮಾಲೆಯಲ್ಲಿ ಸಪ್ರಮಾಣವಾಗಿ ಸಾಧಿಸಿರುವರು. ಆದರೆ ಇದೇ ವಿಷಯವನ್ನು ವ್ಯಾಸಂಗ ಮಾಡುತ್ತಿರುವಾಗ, ನಮಗೆ ಗೊತ್ತಾದ ಕೆಲವು ಮಹತ್ವದ ಹೆಚ್ಚಿನ ಸಂಗತಿಗಳನ್ನು ಇಲ್ಲಿ ನಾವು ಹೇಳುವೆವು. ಇತಿಹಾಸ ಸಂಶೋಧಕರು ಆ ಮಾರ್ಗದಿಂದ

ಮುಂದೆ ಸಾಗಿ, ಹೆಚ್ಚಿನ ಶೋಧಗಳನ್ನು ಮಾಡಿ, ಈಗಿನ ಮಹಾರಾಷ್ಟ್ರ ಭಾಷೆಯ ನಾಡಿನಲ್ಲಿ, ಕನ್ನಡಿಗರ ರಾಜವಿಸ್ತಾರವಿದ್ದುದಲ್ಲದೆ, ಕನ್ನಡ ಭಾಷಾ ವಿಸ್ತಾರವು ಕೂಡ ಇತ್ತೆಂಬ ನಮ್ಮ ವಿಧಾನವನ್ನು ಹೆಚ್ಚಿಗೆ ಬಲಪಡಿಸಬೇಕೆಂದು ನಮ್ಮ ಪ್ರಾರ್ಥನೆ. ನಮಗೆ ಗೊತ್ತಾದ ಸಂಗತಿಗಳು ಯಾವುವೆಂದರೆ— (೧) ಮಹಾರಾಷ್ಟ್ರ ಭಾಷೆಯಲ್ಲಿ ಊರಿನ ಹೆಸರುಗಳು ಬಹುತರವಾಗಿ ಕನ್ನಡದ ಹೆಸರುಗಳೇ ಇರುತ್ತವೆಂಬುದನ್ನು ಕೇಳಿ, ಕನ್ನಡಿಗರಿಗೆ ಆನಂದವೂ ಆಶ್ಚರ್ಯವೂ ಆಗದಿರದು. 'ಕೆಂದೂರು' ಎಂಬ ಶುದ್ಧ ಕನ್ನಡ ಹೆಸರಿನ ಊರು ಪುಣೆಯ ಹತ್ತರ ಇರುತ್ತದೆ. ಇದಲ್ಲದೆ, ಠಾಣಾ, ಕುಲಾಬಾ, ರತ್ನಾಗಿರಿ ಮುಂತಾದ ಮರಾಠೀ ಜಿಲ್ಹೆಗಳಲ್ಲಿಯೂ, ಕನ್ನಡ ಹೆಸರಿನ ಗ್ರಾಮಗಳು ತುಂಬಿರುತ್ತವೆ. ಉದಾಹರಣೆಗಾಗಿ— ಪೊಯನಾಡು, ಶಿರೋಳ, ಕಲ್ಲಮಠ, ದೇವರಕೊಪ್ಪ, ಅಕ್ಕಲಕೊಪ್ಪ, ಉಳವಿ, ಅತ್ತಿಗೇರೆ, ಮೊಸಳೆ, ನೇರೂರು, ಪಾಳೆ, ದೇವೂರು, ಡೋಣೆ, ನಿರ್ಗುಡೆ, ಕಣಕವಲ್ಲಿ, ಬ್ರಹ್ಮನಾಳ, ಗಾಣಗಾಪುರ, ಕುರಡೀವಾಡಿ, ಕಳಸ ಇವೇ ಮುಂತಾದ ಗ್ರಾಮಗಳು ಮಹಾರಾಷ್ಟ್ರದಲ್ಲಿ ಕಂಡುಬರುತ್ತವೆ. ಮಹಾರಾಷ್ಟ್ರದಲ್ಲಿಯ ಸುಮಾರು ಅರ್ಧಕ್ಕಿಂತ ಹೆಚ್ಚು ಊರ ಹೆಸರುಗಳು ಕನ್ನಡವಿರುತ್ತವೆಂದು ಮಹಾರಾಷ್ಟ್ರದ ಪ್ರಸಿದ್ಧ ಇತಿಹಾಸ ಸಂಶೋಧಕರಾದ ಶ್ರೀ ರಾಜವಾಡೆಯವರು ಮೊನ್ನೆ ಮೊನ್ನೆ ಒಪ್ಪಿಕೊಂಡಿದ್ದಾರೆ. (೨) ಅಣ್ಣಂಭಟ್ಟ ಕೃಷ್ಣಂಭಟ್ಟ ಮುಂತಾದ ಅಲ್ಲಿ ರೂಢವಿರುವ ಹೆಸರುಗಳೊಳಗಿನ ಮಕಾರವು ಕನ್ನಡ ಪ್ರತ್ಯಯವಾಗಿದೆ. (೩) ಸಾತಾರಾ ಮುಂತಾದ ಸ್ಥಳಗಳಲ್ಲಿಯ ಜೈನರು ಬುನಾದಿಯಿಂದಲೂ ಕನ್ನಡ ಭಾಷೆಯನ್ನು ಆಡುತ್ತಾರೆ. (೪) ಕರ್ನಾಟಕದಲ್ಲಿಯ ಹಲವು ಮನೆತನದ ಕುಲದೇವತೆಗಳು ಮಹಾರಾಷ್ಟ್ರದಲ್ಲಿವೆ. ಧೌಮನರಸಿಂಹ, ನೀರಾನರಸಿಂಹ, ಕೋಹಳೆನರಸಿಂಹ, ತುಳಜಾಭವಾನಿ ಇವೆ ಅವು. (೫) ಕರ್ನಾಟಕದಲ್ಲಿಯ ಗುಡಿಗಳೊಳಗಿನ ಆಚಾರ-ಪದ್ಧತಿಗಳೇ ಮಹಾರಾಷ್ಟ್ರದಲ್ಲಿಯೂ ಕಂಡುಬರುತ್ತವೆ. ನಮ್ಮ ಮಿತ್ರರಾದ ಶ್ರೀ ರಾಜ-ಪುರೋಹಿತರು ದೇವರಗುಡ್ಡದಲ್ಲಿಯ ಗುಡಿಗೂ, ಜೇಜೂರಿನಲ್ಲಿರುವ ಗುಡಿಗೂ ಇರುವ ಸಾಮ್ಯವನ್ನು ಸಿದ್ಧಪಡಿಸಿರುವರು. ಅವರಂತೆಯೇ

ಜಿಪಳೂಣದ ಹತ್ತಿರಿರುವ ಪರಶುರಾಮು ರೇಣುಕಾ ಗುಡಿಯು ಸವದತ್ತಿಯ ಎಲ್ಲಮ್ಮನ ಗುಡಿಗೆ ಸಾಮ್ಯವಾಗಿರುತ್ತದೆ. (೬) ಮುಂಬಯಿಯ ಸುತ್ತ-ಮುತ್ತಲಿನ ದೇಶವನ್ನು ಆಳುತ್ತಿದ್ದ ಶಿಲಾಹಾರ ಅರಸರು ಕನ್ನಡಿಗರಾಗಿದ್ದಾರೆಂದು ಮುಂಬಯಿ ಗ್ಯಾಝಿಟಿಯರ (Bombay Gazeteer) ದಲ್ಲಿ ಉಲ್ಲೇಖವಿದೆ. (೭) ಕೊಲ್ಹಾಪುರದ ಅರಸುಮನೆತನದ ಲಗ್ನಗಳಲ್ಲಿ 'ಬಿಸಿಲೂಟ' ಎಂಬುವ ಪದ್ಧತಿಯು ಉಂಟಂತೆ. (೮) ಹಿಂದೂ ದೇಶದ ಬ್ರಾಹ್ಮಣರಲ್ಲಿ ಪಂಚದ್ರಾವಿಡರೆಂತಲೂ ಪಂಚಗೌಡರೆಂತಲೂ ವರ್ಗಗಳು ಉಂಟು. ಮಹಾರಾಷ್ಟ್ರದೊಳಗಿನ ಕೊಂಕಣಸ್ಥ ಮತ್ತು ದೇಶಸ್ಥ ಬ್ರಾಹ್ಮಣರು ಪಂಚದ್ರಾವಿಡರಲ್ಲಿ ಸೇರುತ್ತಾರೆ. ಇದಕ್ಕೆ ಕಾರಣವೇನಿರಬಹುದು? (೯) ಸಾವಂತವಾಡಿಯಿಂದ ಕೊಂಕಣಕ್ಕೆ ಹೋಗುವ ಮಾರ್ಗಕ್ಕೆ 'ದೊಡಾಮಾರ್ಗ' (ದೊಡ್ಡ ಮಾರ್ಗ) ಎಂದು ಈಗಲೂ ಕರೆಯುತ್ತಾರೆ. (೧೦) ಕೊಂಕಣದಲ್ಲಿಯ ಮಹಾರಾಷ್ಟ್ರ ಭಾಷೆಯಲ್ಲಿ 'ಮಣಿ' 'ನಿಜ್ಜಣಿ' ಮುಂತಾದ ಕನ್ನಡ ಹೆಸರುಗಳಿರುತ್ತವೆ. (೧೧) ಜಕಣಾಚಾರ್ಯರು ಕಟ್ಟಿದ ಕಟ್ಟಡಗಳು ಮಹಾರಾಷ್ಟ್ರದಲ್ಲಿಯೂ ಇವೆ. ಅವುಗಳಿಗೆ ಅವರು 'ಹೇಮಾಡಪಂತೀ' ಗುಡಿಗಳೆಂದು ಹೇಳುತ್ತಾರೆ. (೧೨) ಇನ್ನೂ ಮಹತ್ವವುಳ್ಳ ಸಂಗತಿಯೇನಂದರೆ, ಮಧ್ಯ ಮಹಾರಾಷ್ಟ್ರದಲ್ಲಿ ಕನ್ನಡ ಶಿಲಾಶಾಸನಗಳೂ, ವೀರಗಲ್ಲುಗಳೂ ದೊರೆತಿವೆ. ಸಾತಾರಾ ಜಿಲ್ಲೆಯ ಮಸವಡ ಎಂಬ ಗ್ರಾಮದಲ್ಲಿ ಒಂದು ಕನ್ನಡ ಶಿಲಾಶಾಸನವು ದೊರೆತಿದೆ. ಇದಲ್ಲದೆ, ಈ ವಿಷಯವನ್ನು ಕುರಿತು ನಾವು ವ್ಯಾಸಂಗ ಮಾಡುವಾಗ, ಕುಲಾಬಾ ಜಿಲ್ಲೆಯ 'ಚೌಲ' ಎಂಬ ಗ್ರಾಮದಲ್ಲಿ ಕನ್ನಡ ಶಿಲಾಲಿಪಿಯೊಂದು ಸಿಂಕ್ಲೇಯರ ಸಾಹೇಬರಿಗೆ (W. S. Sinclair) ೧೮೭೪ನೆಯ ಫೆಬ್ರುವರಿಯಲ್ಲಿ ದೊರೆತಂತೆ ಇಂಡಿಯನ್ ಎಂಟಿಕ್ವೇರಿ (Iidian Antiquary) ಯ ೭ನೆಯ ಸಂಪುಟದ ೨೩೪ನೆಯ ಪುಟದಲ್ಲಿ ಉಲ್ಲೇಖವಿರುವುದಾಗಿ ನಾವು ಓದಿರುವೆವು. ವಾಚಕರ ಅವಲೋಕನಾರ್ಥವಾಗಿ ಅದರ ಕೆಲವು ಭಾಗವನ್ನು ಇಲ್ಲಿ ಕೊಡುತ್ತೇವೆ. "Between the temples and cenotaph the toddydrawers, whetting their knives at the time of my visit upon a loose slab, bearing a Kanarese

inscription-a thing of itselt (philologically speaking very remarkable in so thoroughly Maratha country, a in north Konkan. A little money and a good deal of diplomacy enable me to place it in the collection of the Bombay Branch of the Royal Asiatic Society, where it has remained unheeded, from that day to this, upon a landing place, where scholars passed it every week" " ಸಾರಾಂಶ— ನಾನು ಅಲ್ಲಿಗೆ ಹೋದಾಗ, ಅಲ್ಲಿರುವ ಗುಡಿ ಮತ್ತು ಸಮಾಧಿಗಳ ನಡುವೆ ಹೆಂಡ ತೆಗೆಯುವವರು ಒಂದು ಕಲ್ಲಿಗೆ ತಮ್ಮ ಚೂರಿಗಳನ್ನು ಮಸೆಯುತ್ತಾ ಕುಳಿತುಕೊಂಡುದನ್ನು ಕಂಡೆನು. ನೋಡುವಷ್ಟರಲ್ಲಿ ಆ ಕಲ್ಲು ಕನ್ನಡ ಶಿಲಾಲೇಖವಾಗಿತ್ತು. ಉತ್ತರ ಕೊಂಕಣದಂತ ನಡುಮಹಾರಾಷ್ಟ್ರದಲ್ಲಿ, ಈ ತರಹದ ಕನ್ನಡ ಶಿಲಾಲೇಖವು ದೊರೆತುದು ಭಾಷಾಶಾಸ್ತ್ರದ ದೃಷ್ಟಿಯಿಂದ ನಿಜವಾಗಿ ಮಹತ್ವದ ಸಂಗತಿಯಲ್ಲವೇ! ಸ್ವಲ್ಪ ಹಣವನ್ನೂ ಬಹಳ ಯುಕ್ತಿಯನ್ನೂ ವಿನಿಯೋಗಿಸಿ ನಾನು ಈ ಶಿಲಾಲೇಖವನ್ನು ಸಂಪಾದಿಸಿ ಅದನ್ನು ರಾಯಲ್ ಏಶಿಯಾಟಿಕ್ ಸೊಸಯಿಟಿಯ ಮುಂಬಯಿ ಶಾಖೆಯಲ್ಲಿರುವ, ವಸ್ತುಸಂಗ್ರಹಗಳಲ್ಲಿ ಇಟ್ಟೆ. ಅಂದಿನಿಂದ ಇಂದಿನ ವರೆಗೆ ಅದು ಪಂಡಿತರು ಪ್ರತಿವಾರ ಹಾಯ್ದು ಹೋಗುವ ದಾರಿಯ ಹತ್ತಿರವೇ ಹೊರಳಾಡುತ್ತ ಬಿದ್ದಿದೆ! " ಕನ್ನಡಿಗರೇ, ಇಂಥ ಮಹತ್ವದ ಶಿಲಾಲಿಪಿಯು ಬೆಳಕಿಗೆ ಬಂದು ಮೂರು ತಲೆಗಳಾಗಿ ಹೋದರೂ, ಅದು ಕನ್ನಡಿಗರಿಗೆ ಮಾತ್ರ ಕಾಣದಿರುವುದು ಏತರ ಹೆಗ್ಗುರುತು? ಈ ಶಿಲಾಲೇಖವನ್ನು ನೋಡಬೇಕೆಂಬ ಅಪೇಕ್ಷೆಯಿಂದ ನಾವು ಮುಂಬಯಿಯಲ್ಲಿ ನಾಲ್ಕು ದಿವಸಗಳ ವರೆಗೆ ಅದನ್ನು ಹುಡುಕಿದರೂ ಅದು ನಮಗೆ ದೊರೆಯದೇ ಹೋಯಿತು. ಆ ಸಂಸ್ಥೆಯ ಪಟ್ಟಿ (Catelogue) ಯಲ್ಲಿಯೂ ಅದರ ಹೆಸರು ಸೇರಿದಂತೆ ತೋರಲಿಲ್ಲ. ಸಂಶೋಧಕರು ಈ ವಿಷಯದಲ್ಲಿ ಹೆಚ್ಚು ಶ್ರಮವಹಿಸಬೇಕೆಂದು ನಮ್ಮ ಪ್ರಾರ್ಥನೆ.

(೧೩) ೧೯೧೫ ನೆಯ ಇಸ್ವಿಯ ಮೇ ತಿಂಗಳಿನಲ್ಲಿ ನಾವು ಈ ವಿಷಯವನ್ನೇ ತಲೆಯಲ್ಲಿ ತುಂಬಿಕೊಂಡು, ಕನ್ನಡಿಗರಿಗೆ ಅತ್ಯಂತ ಅಭಿ-

ಮಾನಾಸ್ಪದವಾದ ವೇರೂಳಿನ ಮೇಣಬಸ್ತಿಗಳನ್ನೂ, ಮೇಣಗುಡಿಗಳನ್ನೂ ನೋಡಲಿಕ್ಕೆ ಹೋಗಿದ್ದೆವು. ಆ ಕಾಲಕ್ಕೆ ಅಲ್ಲೇನಾದರೂ ಕನ್ನಡ ಶಿಲಾಲಿಪಿಯು ದೊರೆಯುತ್ತದೇನು ಎಂದು ಹುಡುಕುತ್ತಿರಲು, ನಮಗೆ ೩ನೆಯ ನಂಬರಿನ ಮೇಣಬಸ್ತಿಯ ಕಂಬದ ಮೇಲೆ ಕನ್ನಡ ಅಕ್ಷರದ ಶಿಲಾಲಿಪಿಯೊಂದು ಕಣ್ಣಿಗೆ ಬಿದ್ದಿತು. ಆಗ ನಮಗಾದ ಆನಂದವನ್ನು ಬಣ್ಣಿಸಲಳವಲ್ಲ. ವೇಳೂರ ಗ್ರಾಮವಿದ್ದ ತಾಲೂಕಿಗೆ ' ಕನ್ನಡ ' ವೆಂಬ ಹೆಸರು. ಸಾರಾಂಶ— ಇಂಥ ಶಿಲಾಲಿಪಿಗಳ ಶೋಧದಿಂದ ನಮ್ಮ ಕನ್ನಡ ಭಾಷೆಯು ಎಲ್ಲಿಯ ವರೆಗೆ ತನ್ನ ಕಾಲು ಚಾಚಿತ್ತೆಂಬುದು ವಾಚಕರ ಗಮನಕ್ಕೆ ಬಾರದಿರದು. ಆದರೆ ಆ ಕಾರ್ಯವು ಕನ್ನಡಿಗರಿಗಲ್ಲದೆ ಮತ್ತಾರಿಗೆ ಸಾಧ್ಯವು ?

(೧೪) ಸಾತಾರೆಯ ಹತ್ತರ ಯವತೇಶ್ವರದಲ್ಲಿ ಜಕಣಾಚಾರ್ಯರು ಕಟ್ಟಿದುದೊಂದು ಗುಡಿಯುಂಟು. ಆ ಗುಡಿಯ ಹತ್ತರ ಶಿಲಾಲೇಖವನ್ನು ಹುಡುಕುವಷ್ಟರಲ್ಲಿ ಸಮೀಪದ ಹೊಲದಲ್ಲೊಂದು ' ವೀರಗಲ್ಲು ' ದೊರೆಯಿತು. ಮರಾಠರಿಗೆ ಈ ವೀರಗಲ್ಲುಗಳ ಕಲ್ಪನೆಯಿಲ್ಲ.

ಈ ಬಗೆಯಾಗಿ ನಮಗೆ ಗೊತ್ತಾದ ಸಂಗತಿಗಳನ್ನು ವಾಚಕರ ಅವಗಾಹನೆಗಾಗಿ ಇಲ್ಲಿ ಕೊಟ್ಟಿರುವೆವು. ಇವುಗಳಿಂದ ಯಾವ ನಿಶ್ಚಿತವಾದ ಸಿದ್ಧಾಂತವನ್ನೂ ತೆಗೆಯಲು ನಾವು ಈಗ ಧೈರ್ಯಗೊಳ್ಳುವುದಿಲ್ಲ. ಆಗಿನ ಕಾಲದ ಭಾಷಾವಿಸ್ತಾರವನ್ನಷ್ಟೇ ವರ್ಣಿಸುವುದು ಈಗಿನ ನಮ್ಮ ಉದ್ದೇಶವಿರುವುದರಿಂದ ಇಷ್ಟೊಂದು ವಿಸ್ತಾರವಾದ ಪ್ರದೇಶದಲ್ಲಿ ನಮ್ಮ ಕನ್ನಡ ಭಾಷೆಯು ತನ್ನ ವರ್ಚಸ್ಸನ್ನು ಹರಡಿತ್ತೆಂಬುದನ್ನು ಮೇಲೆ ಹೇಳಿದ್ದೇವೆ. ಇದರಿಂದ, ಕಠೋರವಾಗಿರುವ ಕನ್ನಡಿಗರ ಮನಸ್ಸಿನಲ್ಲಿ ಕನ್ನಡ ಭಾಷೆಯಲ್ಲಿಯ ಪೂಜ್ಯ ಬುದ್ಧಿಯೂ ಅಭಿಮಾನವೂ ಹೆಚ್ಚು ಘನವಾದರೆ, ನಮ್ಮ ಕಾರ್ಯವು ಕೈಗೂಡಿದಂತಾಯಿತು.

ಕನ್ನಡಿಗರೇ ! ಈಗಿನ ಭಾಷಾವಿಸ್ತಾರಕ್ಕೂ, ಹಿಂದಿನ ಭಾಷಾವಿಸ್ತಾರಕ್ಕೂ ಹೋಲಿಸಿ ನೋಡಿರಿ. ಸದ್ಯಕ್ಕೆ ಕನ್ನಡ ಭಾಷೆಯು ಉತ್ತರದಲ್ಲಿ ಸಾಂಗಲಿಯ ವರೆಗೆ ಮಾತ್ರ ಹಾಗೂ ಹೀಗೂ, ಆಧುನಿಕ ಶಿಕ್ಷಣದ ಗಾಳಿಯು ಸೋಂಕದಿರುವಂಥ ಹಲಕೆಲವು ಜನರ ಬಾಯಿಯಲ್ಲಿ ಆಡುತ್ತಿರಬಹುದು. ಅದೂ ಕ್ರಮೇಣ ಮರಾಠೀ ಭಾಷೆಯ ಉರುಬಿಗೆ ಸಿಲುಕಿ,

ಮೈಮುಚ್ಚಿಕೊಳ್ಳುತ್ತಲಿದೆ. ವಾಚಕರೇ, ನಮ್ಮ ದುರ್ದೈವದಿಂ
ದಲೋ, ನಮ್ಮ ಮಾತೃಭಾಷೆಯ ದುರ್ದೈವದಿಂದಲೋ, ಒಂ
ಕಾಲಕ್ಕೆ ಕನ್ನಡ ನಾಡಿಗೆಲ್ಲ ದಿಗ್ದಂತಿಗಳಾಗಿ ಬಾಳಿದ ಪೊನ್ನ
ಮುಂತಾದವರು ಹುಟ್ಟಿದ ಊರುಗಳೇ ಪರಭಾಷೆಯಿಂದ ವ್ಯಾಪಿಸಲ್ಪಟ್ಟಿ
ತ್ತವೆ. ಕನ್ನಡ ತಾಯ್ನುಡಿಯ ಕೊರಳಿಗೆ ಕೈಹಾಕಿ ದಬ್ಬುತ್ತಿರುವ
ನೋಟವು ಯಾವ ಕನ್ನಡಿಗನ ಹೃದಯವನ್ನು ಕರಗಿಸದೆ ಇರದು
ಕನ್ನಡ ನಾಡೆಲ್ಲವೂ ಮಹಾರಾಷ್ಟ್ರಮಯವಾಗುತ್ತಿರುವುದು ಎಂಥ ಔದಾ
ನ್ಯದ ಲಕ್ಷಣವು! ಪೂರ್ವಕ್ಕಿರುವ ಬಳ್ಳಾರಿಯಂಥ ಶುದ್ಧ ಕನ್ನಡ ಜಿಲ್ಲೆ
ಕೂಡ ಕನ್ನಡಿಗರ ನಿರಭಿಮಾನತೆಯ ಮೂಲಕ ತೆಲುಗಿನವರ ಇ
ನಲ್ಲಿ ಸಿಕ್ಕಿಕೊಂಡು ಬಾಯ್ಬಿಡುತ್ತಿರುವ ನೋಟವು ಕನ್ನಡಿಗರ ಶೋ
ಭಾರವನ್ನು ಇಮ್ಮಡಿಗೊಳಿಸದೆ ಇರದು. ಈ ಬಗೆಯಾಗಿ ನಮ್ಮ ಕಣ್ಣೆ
ರಿಗೇನೇ ನಮ್ಮ ಭಾಷೆಯನ್ನು ಪರಭಾಷೆಗಳು ಕೆಳಗೆ ದೂಡುತ್ತಿರ
'ಕರ್ನಾಟಕ ವಿದ್ಯಾವರ್ಧಕ ಸಂಘ' 'ಕರ್ನಾಟಕ ಸಾಹಿತ್ಯ ಪರಿಷತ್
ಮುಂತಾದ ಸಂಸ್ಥೆಗಳು ಇನ್ನೂ ಕಣ್ಣುಮುಚ್ಚಿಯೇ ಕುಳಿತಿರುವುದನ್ನ
ಕೇಳಿ ಯಾವ ಕನ್ನಡಿಗನ ಮನಸ್ಸು ವ್ಯಸನಕ್ರಾಂತವಾಗಲಿಕ್ಕಿಲ್ಲ! ಕೊಡ
ನೀಲಗಿರಿ ಪ್ರಾಂತಗಳ ಜನರು ಕನ್ನಡಿಗರೇ ಇರುವರೆಂಬ ಜ್ಞಾನವೂ ನಮ
ಇರಬಾರದೋ? ಧಿಕ್ಕಾರವಿರಲಿ ನಮ್ಮ ಔದಾರ್ಯಕ್ಕೆ!

ಕನ್ನಡಿಗರೇ! ಉಜ್ವಲವಾದ ನಿಮ್ಮ ಭಾಷೆಯು ಒಂದಾನೊಂದ
ಕಾಲಕ್ಕೆ ಉತ್ತರದಲ್ಲಿ ಬಹು ದೂರದ ವರೆಗೆ ಮನೆಮಾಡಿಕೊಂಡಿತ್ತೆಂ
ಸಂಗತಿಯು ನಿಮ್ಮ ಹೃದಯವನ್ನು ಸ್ಫೂರ್ತಿಗೊಳಿಸಲಿ.

———

## ೪ ನೆಯ ಪ್ರಕರಣ

## ಕರ್ನಾಟಕ ವಿಭೂತಿಗಳು

ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।
ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥

—ಗೀತೆ, ೧೦-೪೦

ಎಲೆ ಪರಂತಪ ದಿವ್ಯವೆನಿಸುವ ।
ಹಲವು ಬಗೆಯ ವಿಭೂತಿವಿಭವಕೆ ।
ಸಲೆ ಮೊದಲು ಕಡೆಯಿಲ್ಲವೆನ್ನಯ ಯೋಗಮಾಯೆಗಳ ॥
ಚೆಲುವೆನಿಸುವ ವಿಭೂತಿವಿಸ್ತರ ।
ಜಲಧಿಯೊಳು ನಾಂ ನಿನಗೆ ಪೇಳ್ದೆನು ।
ಕೆಲವ, ಮಿಕ್ಕ ವಿಭೂತಿವಿಭವಕೆ ಲೆಕ್ಕವಿಲ್ಲೆಂದ ॥

—ನಾಗರಸ

ನಾವು ಹಿಂದಿನ ಪ್ರಕರಣದಲ್ಲಿ ವರ್ಣಿಸಿದ ಕರ್ನಾಟಕದ ವ್ಯಾಪ್ತಿಯನ್ನು ಓದಿ, “ ಅಹುದು; ನಿಮ್ಮ ಕರ್ನಾಟಕವು ಅಲ್ಲಿಂದ ಇಲ್ಲಿಯವರೆಗೆ ಹಬ್ಬಿರಬಹುದು, ಹಾಗಿದ್ದ ಮಾತ್ರಕ್ಕೆ ನೀವು ಅದರ ವಿಷಯವಾಗಿ ಅಭಿಮಾನಪಡುವುದು ಸರಿಯಾದೀತೋ ? ಬರಿಯ ವಿಸ್ತಾರವನ್ನಷ್ಟೇ ತೆಗೆದುಕೊಂಡರೆ, ಆಫ್ರಿಕೆಯೊಳಗಿನ ‘ ಸಹರಾಬೈಲು ’ ವಿಸ್ತಾರದಲ್ಲೇನು ಕಡಿಮೆಯಾಗಿರುವುದು ? ನಿಮ್ಮ ಕರ್ನಾಟಕವೂ ಹಾಗೇ ಇದ್ದರೆ ಅದರಲ್ಲಿ ಯಾರಿಗೆ ತಾನೇ ಅಭಿಮಾನವುಂಟಾಗಬೇಕು ? ನಮ್ಮಲ್ಲಿ ದೊಡ್ಡ ದೊಡ್ಡ ಅರಸರಾಗಿ ಹೋದರು. ಕವಿಪುಂಗವರಾಗಿ ಹೋದರು, ಧರ್ಮಸ್ಥಾಪಕರಾಗಿ ಹೋದರು ಎಂದು ಸಾಮಾನ್ಯವಾಗಿ ಹೇಳಿದ ಮಾತ್ರಕ್ಕೆ ತೀರಿತೆ ? ಅವರು ಯಾರು ? ಅವರು ಮಾಡಿದ ಮಹಾ ಕಾರ್ಯಗಳು ಯಾವುವು ? ಎಂಬ ಜ್ಞಾನವು ನಮಗೆ ಬೇಡವೋ ?

ಹಾಗೆ ಜ್ಞಾನವಿಲ್ಲದಿದ್ದರೆ ಅದು ಒಣ ಅಭಿಮಾನವಾಗುವುದು" ಎಂದು ಹಲವರು ಆಕ್ಷೇಪಿಸಬಹುದು. ಆದುದರಿಂದ ಹಾಗೆ ಅಭಿಮಾನಪಡ ಲಿಕ್ಕೆ ಯೋಗ್ಯವಾದ ಸಂಗತಿಗಳಾವುವೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ವಿವರಿಸುವೆವು.

ವಾಚಕರೇ! ತನ್ನ ಜನಾಂಗವು ರಾಮಾಯಣ ಮಹಾಭಾರತ ಕಾಲದಿಂದಲೂ ಮೊನ್ನೆ ಮೊನ್ನಿನ ವರೆಗೆ ಹೆಸರುವಾಸಿಯಾಗಿತ್ತೆಂದು ಹೇಳಿದರೆ ಯಾವನಿಗೆ ತಾನೇ ಆನಂದವಾಗಲಿಕ್ಕಿಲ್ಲ! ನಿಮ್ಮ ಕರ್ನಾ- ಟಕವು ಅದೇ ಪ್ರಕಾರದ ರಾಷ್ಟ್ರವೆಂದು ತಿಳಿಯಿರಿ, ನಿಮ್ಮ ಕರ್ನಾ- ಟಕವು ಶ್ರೀರಾಮಚಂದ್ರನ ಪಾದಧೂಳಿಯಿಂದ ಪಾವನವಾಗಿದೆ. ಶ್ರೀರಾಮಚಂದ್ರನು ಸುಗ್ರೀವನೊಡನೆ ಸಖ್ಯ ಬೆಳೆಸಿದ ಆ ಕಿಷ್ಕಿಂಧೆಯು (ಆನೆಗೊಂದಿ) ಇದೇ ಕರ್ನಾಟಕದಲ್ಲಿಯೇ ಉಂಟು. ಮಹಾಭಾರತ ಕಾಲದಲ್ಲಿ, ಚಂದ್ರಹಾಸನು ಈ ಕುಂತಲ ದೇಶದಲ್ಲಿಯೇ ರಾಜ್ಯವಾಳಿ ದನು. ಪೌರಾಣಿಕ ಕಾಲವನ್ನು ಬಿಟ್ಟು, ಐತಿಹಾಸಿಕ ಕಾಲಕ್ಕೆ ಇಳಿ ದರೂ, ಆಂಧ್ರಭೃತ್ಯ, ಕದಂಬ ಮುಂತಾದ ಬಲಾಢ್ಯ ರಾಜವಂಶ ಗಳು ಕ್ರಿಸ್ತಶಕದ ಆರಂಭಕ್ಕೆ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ವೈಭವದಿಂದ ಆಳಿರುತ್ತವೆ. ಆರನೆಯ ಶತಮಾನದಿಂದ ಹದಿನಾರನೆಯ ಶತಮಾನದ ಕೊನೆಯ ಭಾಗದ ವರೆಗಂತೂ ನಿಮ್ಮ ಈ ಕರ್ನಾಟಕವು, ದಕ್ಷಿಣ ಹಿಂದುಸ್ತಾನಕ್ಕೆಲ್ಲ ಸಾರ್ವಭೌಮ ಚಕ್ರವೆನಿಸಿ, ಅತ್ಯಂತ ಗೌರವ ದಿಂದ ಮೆರೆದಿರುತ್ತದೆ. ನಿಮ್ಮ ಅರಸರು ಚೇರ, ಚೋಳ, ಪಾಂಡ್ಯ, ಗುರ್ಜರ, ಮಾಳವ ಮುಂತಾದ ಪರರಾಜರನ್ನು ಸದೆಬಡಿದು, ಅವರ ರಾಜ್ಯಗಳನ್ನು ಪಾದಾಕ್ರಾಂತವನ್ನಾಗಿ ಮಾಡಿಕೊಂಡು ಮತ್ತು ಮೌರ್ಯ, ಕಲಚುರ್ಯ ಮುಂತಾದ ಚಿಕ್ಕ ಚಿಕ್ಕ ಕನ್ನಡ ರಾಜ್ಯಗಳನ್ನು ತಮ್ಮಲ್ಲಿ ವಿಲೀನಮಾಡಿಕೊಂಡು ಸಾರ್ವಭೌಮರಾಗಿ ಆಳಿದ್ದರೆಂದು ಹೇಳಿದರೆ, ಅದು ನಿಮಗೆ ಕನಸಾಗಿ ತೋರುವುದಿಲ್ಲವೇ? ಇದು ಕನ- ಸಲ್ಲ ನನಸು. ನಿಮ್ಮ ಪೂರ್ವಜರು ಒಂದಾನೊಂದು ಕಾಲಕ್ಕೆ, ಉತ್ತರ ದಲ್ಲಿ ಬಂಗಾಲ ಆಸಾಮಗಳ ವರೆಗೂ ದಕ್ಷಿಣದಲ್ಲಿ ಸಿಂಹಲದ್ವೀಪದ ವರೆಗೂ ತಮ್ಮ ರಾಜ್ಯವನ್ನು ಹಬ್ಬಿಸಿದ್ದರು. ಇಷ್ಟೇ ಅಲ್ಲ, ಕರ್ನಾಟಕ ವಂಶ

ವೃಕ್ಷದ ಅಗಿಗಳು ಗುಜರಾಥ ನೇಪಾಳದಲ್ಲಿಯೂ ನಾಟಿದ್ದುವು. ಬಾದಾ-ಮಿಯ ಚಾಲುಕ್ಯ ಅರಸನಾದ ನಿಮ್ಮ ಸತ್ಯಾಶ್ರಯ ಶ್ರೀ ಪುಲಿಕೇಶಿಯು (೭ನೆಯ ಶತಕ) ಉತ್ತರ ಹಿಂದುಸ್ತಾನಕ್ಕೆಲ್ಲ ಸಾರ್ವಭೌಮ ಚಕ್ರವರ್ತಿಯಾಗಿದ್ದ ಹರ್ಷವರ್ಧನನನ್ನು ಸೋಲಿಸಿ 'ಪರಮೇಶ್ವರ' ನೆಂಬ ಘನವಾದ ಬಿರುದನ್ನು ಪಡೆದಿರುವನು. ಮಳಖೇಡದ ರಾಷ್ಟ್ರಕೂಟ ಅರಸನಾದ ೩ನೆಯ ಗೋವಿಂದನು (೯ನೆಯ ಶತಕ) ತನ್ನ ವಿರುದ್ಧವಾಗಿ ಬಂಡಾಯವನ್ನು ಹೂಡಿದ ಹನ್ನೆರಡು ಜನ ಅರಸರನ್ನು ಬಗ್ಗುಬಡಿದು, ಗುರ್ಜರ, ಮಾಳವ, ಮಧ್ಯಪ್ರಾಂತ ಇವೇ ಮೊದಲಾದ ನಾಡುಗಳನ್ನು ಗೆದ್ದು, ಪೂರ್ವಚಾಲುಕ್ಯರ ಅರಸನನ್ನು ಹಣ್ಣಿಗೆ ತಂದು, ಅವನಿಗೆ ತನ್ನ ಕೋಟೆ ಕೊತ್ತಳಗಳನ್ನು ಕಟ್ಟಲು ಹಚ್ಚಿದ ಸಂಗತಿಯೇನು ಸಾಧಾರಣವಾಯಿತೇ? ಕರ್ನಾಟಕರು ಪ್ರತಿದಿನವೂ ಸ್ಮರಿಸಬೇಕಾಗಿರುವ ಆ ರಾಷ್ಟ್ರಕೂಟರ ಅಮೋಘವರ್ಷನು ಅಥವಾ ನೃಪತುಂಗನು ( ೯ನೆಯ ಶತಕ ) ಯಾವ ದೇಶಕ್ಕೆ ಭೂಷಣವೆನಿಸಲಾರನು ? ೬೦ ವರ್ಷಗಳ ವರೆಗೆ ಎಡೆಬಿಡದೆ ಆಳಿದ ಈ ನೃಪತುಂಗನೇ ಅಲ್ಲವೇ ಕನ್ನಡಿಗರ 'ಕವಿರಾಜಮಾರ್ಗ' ವೆಂಬ ಅಲಂಕಾರ ಗ್ರಂಥವನ್ನು ಬರೆದವನು ? ಪ್ರತಿಯೊಬ್ಬ ಆರ್ಯಪುತ್ರನಿಗೂ ಗೊತ್ತಿರುವ ಆ ಪ್ರಸಿದ್ಧ ಭೋಜರಾಜನ ಕಕ್ಕನಾದ ಶೂರ-ಧೀರ ಮುಂಜನನ್ನು ಸೆರೆಹಿಡಿದು ತಂದವನು, ನಮ್ಮ ಕರ್ನಾಟಕದ ತೈಲಪನೇ (೧೦ನೆಯ ಶತಕ) ಮೇಲ್ಗಡೆಗೆ ಗುರ್ಜರ, ಮಾಳವ ಮುಂತಾದ ಅರಸರನ್ನು ಗೆದ್ದು, ವಿಂಧ್ಯಪರ್ವತದ ವರೆಗೆ ರಾಜ್ಯವನ್ನು ಪಾದಾಕ್ರಾಂತವಾಗಿ ಮಾಡಿಕೊಂಡು ಬಂಗಾಲದ ಮೇಲೆ ದಾಳಿ ಮಾಡಿ ಈಶಾನ್ಯ ದಿಕ್ಕಿನಲ್ಲಿ ಆಸಾಮುದಲ್ಲಿಯೂ, ಕೆಳಗಡೆಗೆ ಕೇರಳ-ಚೋಳ-ಪಾಂಡ್ಯ ಮುಂತಾದ ಅರಸರನ್ನು ಮುರಿಬಡೆದು, ಸಮುದ್ರದ ವರೆಗೆ ರಾಜ್ಯವನ್ನು ಹಬ್ಬಿಸಿ ದಕ್ಷಿಣದಲ್ಲಿ ಸಿಂಹಲದ್ವೀಪದಲ್ಲಿಯೂ ಕರ್ನಾಟಕದ ವಿಜಯಪತಾಕೆಯನ್ನೂರಿದ ಆ ರಣಧೀರನೂ ರಾಜ್ಯತಂತ್ರ ಪ್ರವೀಣನೂ ವಿದ್ಯಾಪಕ್ಷಪಾತಿಯೂ ಆದ ಮಹಾಬಲಾಢ್ಯ ವಿಕ್ರಮಾದಿತ್ಯನೆಂಬ ( ೧೧ನೆಯ ಶತಕ ) ಶಕಪುರುಷನ ಅರಿವು ಕೂಡ ಕನ್ನಡಿಗರಿಗೆ ಈಗ ಇರದಿದ್ದರೂ, ಅವನ ಹೆಸರನ್ನು ಕರ್ನಾಟಕ ಇತಿಹಾಸವು ಆಚಂದ್ರಾರ್ಕವಾಗಿ ಮರೆಯ

ಲಾರದು. ಗಂಗ, ಕದಂಬ, ಶಿಲಾಹಾರ, ಯಾದವ ಮುಂತಾದ ಅ
ಸರು ಇವನಿಗೆ ದಾಸಾನುದಾಸರಾಗಿದ್ದರು. ಬಿಲ್ಹಣ, ವಿಜ್ಞಾನೇಶ್ವ
ಮುಂತಾದ ಕವಿವರರು ಏಕಛತ್ರಾಧಿಪತಿಯಾದ ಈತನ ಆಸ್ಥಾನವನ್ನ
ಲಂಕರಿಸಿದ್ದರು. ಕರ್ನಾಟಕಸ್ಥರೇ ! ಪುಲಿಕೇಶಿ, ನೃಪತುಂಗ, ಗೋವಿಂ
ತೈಲಪ, ವಿಕ್ರಮಾದಿತ್ಯರಂಥ ಮಹಾಮಹಿಮರಾದ ರಾಜರು ನಿಮ
ಪಾಲಿಗೆ ಬಂದಿದ್ದುದು ಘನವಾದ ಪುಣ್ಯವೆಂದು ಭಾವಿಸಿರಿ. ಅಷ್ಟೇಕೆ
ನಿಮ್ಮ ಹರಿಹರ ಬುಕ್ಕರಾಯರೇನು (೧೪ನೆಯ ಶತಕ) ಕಡಿಮೆ
ಪ್ರತಾಪಿಗಳೋ ? ಉತ್ತರ ಹಿಂದುಸ್ತಾನವೆಲ್ಲವೂ ತಮ್ಮ ಗಂಟಲ
ಇಳಿಯಿತೆಂಬ ಗರ್ವದಿಂದ ದಕ್ಷಿಣ ಹಿಂದುಸ್ತಾನವನ್ನು ಕೂಡ ನುಂ
ನೀರು ಕುಡಿಯಬೇಕೆಂದು ಮುಸಲ್ಮಾನರು ಹವಣಿಸಿದ ಸಮಯದ
ಆರ್ಯಧರ್ಮವನ್ನೂ, ಆರ್ಯಸಂಸ್ಕೃತಿಯನ್ನೂ, ಆರ್ಯ ವೈಭವವನ್ನ
ಅವರ ಬಾಯಿಯೊಳಗಿಂದ ಬದುಕಿಸಿದ ಬಂಟರು ಇವರೇ ಅಲ್ಲವೇ? ಹಿ
ಹೋದ ಕದಂಬ, ಹೊಯ್ಸಳ, ಗಂಗ ಇವರೇ ಮೊದಲಾದ ಅರಸರ
ರನ್ನೂ ಒಟ್ಟುಗೂಡಿಸಿ ಹಿಂದಮಾತೆಯ ಮರ್ಯಾದೆಯನ್ನು ಕಾಯ್ದವ
ರಾರು ? ಅಷ್ಟದಿಗ್ಗಜಗಳೆಂದು ಕರೆಯಲ್ಪಡುವ ವಿಖ್ಯಾತರಾದ ಪಂಡಿ
ಜನರಿಗೆ ಆಶ್ರಯಕೊಟ್ಟ ಆ ವೈಭವಶಾಲಿಯಾದ ವಿಜಯನಗರ
ಕೃಷ್ಣರಾಯನು, ನಮ್ಮ ಅರಸನೆಂಬುದು ಕರ್ನಾಟಸ್ಥರಿಗೆ ಗೊತ್ತಾಗ
ಬಾರದೇ ? ಸಾರಾಂಶ— ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ
ಹೊಯ್ಸಳ, ಯಾದವ, ವಿಜಯನಗರ ಮುಂತಾದ ಅರಸರು ಭಿನ್ನ
ಭಿನ್ನ ಕಾಲಕ್ಕೆ ಬೇರೆ ಬೇರೆ ಹೆಸರುಗಳನ್ನು ಧರಿಸಿಕೊಂಡಿದ್ದರೂ ಅವ
ಲ್ಲರೂ ಶುದ್ಧ ಕನ್ನಡಿಗರೇ ! ಅವರೂ ನಮ್ಮಂತೆಯೇ ಕನ್ನಡ ನುಡಿ
ಯನ್ನೇ ಆಡುತ್ತಿದ್ದರು ! ಈ ಕರ್ನಾಟಕವೇ ಅವರ ಜನ್ಮಭೂಮಿ
ಪೂರ್ವದ ಚಾಲುಕ್ಯರ ರಾಜಧಾನಿಯಾದ ಬಾದಾಮಿಯೂ, ರಾಷ್ಟ್ರ
ಕೂಟರ ರಾಜಧಾನಿಯಾದ ಮಳಖೇಡವೂ, ಕೊನೆಯ ಚಾಲುಕ್ಯ
ವಂಶದ ರಾಜಧಾನಿಯಾದ ಕಲ್ಯಾಣವೂ, ವಿಜಯನಗರದ ಅರಸರ ರಾಜ
ಧಾನಿಯಾದ ವಿಜಯನಗರವೂ ಇವೆಲ್ಲ ಕೇವಲ ಕರ್ನಾಟಕದ ಪಟ್ಟಣ
ಗಳೇ. ಆ ನಿಮ್ಮ ಅರಸರೆಲ್ಲರೂ ಈ 'ಕಾಡುಕಗ್ಗಾದ ಕನ್ನಡ ಭಾಷೆ'

ಯನ್ನಾಡುವದು ಅಪಮಾನಕರವೆಂದು ತಿಳಿಯಲಿಲ್ಲ! ಹೀಗೆ ನಿಮ್ಮಲ್ಲಿ ಶೂರರೂ ವೀರರೂ ಆದ ಅರಸರ ಪರಂಪರೆಯು ಬಲು ಪುರಾತನದಿಂದ ಅವಿಚ್ಛಿನ್ನವಾಗಿ ನಡೆದು ಬಂದಿರಲು, ನೀವು ಹತವೀರ್ಯರಾಗಲು ಕಾರಣ ವೇನು ?

ಇನ್ನು ನಮ್ಮಲ್ಲಿಯ ಬುದ್ಧಿಶಾಲಿಗಳ ನಾಮಾವಳಿಯನ್ನು ಹೇಳೋಣವೇ ? ಅದಕ್ಕಂತೂ ನೆಲೆಯೇ ಇಲ್ಲ. ಇಂದಿಗೆ ಜಗತ್ತಿನಲ್ಲಿ ಅತ್ಯಂತ ಪ್ರಮುಖವೆಂದು ಪರಿಗಣಿಸಲ್ಪಟ್ಟಿರುವ, ಅದ್ವೈತ-ವಿಶಿಷ್ಟಾದ್ವೈತ-ದ್ವೈತಗಳೆಂಬ ಮೂರು ಮತಗಳ ಸ್ಥಾಪನಾಚಾರ್ಯರಿಗೆ ಈ ನಮ್ಮ ಪವಿತ್ರ ಭೂಮಿಯೇ ಕಾರ್ಯಕ್ಷೇತ್ರವಾಗಿತ್ತು. ಶಂಕರಾಚಾರ್ಯರ ಶೃಂಗೇರಿ, ಕೂಡಲಿ, ಹಂಪೆ, ಸಂಕೇಶ್ವರ, ಶಿವಗಂಗಾ ಮುಂತಾದ ಮಠಗಳು ಈ ಕರ್ನಾಟಕದಲ್ಲಿಯೇ ಇರುತ್ತವೆ. ಚೋಳರಾಜನ ಅನಿವಾರ್ಯವಾದ ಹಿಂಸೆಯನ್ನು ತಪ್ಪಿಸಿಕೊಳ್ಳುವದಕ್ಕಾಗಿ, ಶ್ರೀರಾಮಾನುಜಾಚಾರ್ಯರು ಕನ್ನಡ ಅರಸನಾದ ವಿಷ್ಣುವರ್ಧನನನ್ನು ಆಶ್ರಯಿಸಿ ತಮ್ಮ ಮತಪ್ರಸಾರಣೆಯನ್ನು ಮಾಡಿದರು. ಮಧ್ವಾಚಾರ್ಯರಿಗೆ ನಿಮ್ಮ ಕರ್ನಾಟಕವೇ ತವರು ಮನೆ. ವೀರಶೈವ ಮತೋದ್ಧಾರಕನಾದ ಬಸವೇಶ್ವರನಂತೂ ಶುದ್ಧ ಕನ್ನಡಿಗನೇ. ಜೈನಮತದ ಪ್ರಖ್ಯಾತ ಗುರುಗಳಾದ ಪೂಜ್ಯಪಾದ, ಜಿನಸೇನ, ಗುಣಭದ್ರ, ಮುಂತಾದವರು ಈ ನಮ್ಮ ಕನ್ನಡ ನಾಡಿನಲ್ಲಿಯೇ ಬಾಳಿ ಬದುಕಿದರು. ಚಾಲುಕ್ಯ ವಿಕ್ರಮಾದಿತ್ಯನ ಓಲಗದಲ್ಲಿ 'ವಿದ್ಯಾಪತಿ' ಯಾಗಿದ್ದ ಬಿಲ್ಹಣನೂ, ಧರ್ಮಶಾಸ್ತ್ರಕಾರನಾದ ವಿಜ್ಞಾನೇ-ಶ್ವರನೂ, ಪ್ರಸಿದ್ಧ ವೇದಾಂತಿಯಾದ ಸಾಯಣನೂ, ಪ್ರಖ್ಯಾತ ಜ್ಯೋತಿಷಿಯಾದ ಭಾಸ್ಕರಾಚಾರ್ಯನೂ, ಇವರೆಲ್ಲರಿಗೂ ಮುಕುಟಮಣಿಯಂತಿರುವ 'ಕರ್ನಾಟಕ ಸಿಂಹಾಸನಸ್ಥಾಪನಾಚಾರ್ಯ' ರೆಂಬ ಬಿರುದುಳ್ಳ ಜಗದ್ವಿಖ್ಯಾತರಾದ ಶ್ರೀ ವಿದ್ಯಾರಣ್ಯರೂ, ಇವರೆಲ್ಲರೂ ಕನ್ನಡ ತಾಯಿಯ ಮುದ್ದುಮಕ್ಕಳೇ ಅಲ್ಲವೇ ? ಕಳೆದ ಅನೇಕ ಶತಮಾನಗಳಿಂದ ಕರ್ನಾಟಕ ವಾಙ್ಮಯವೆಂಬ ಗಗನಮಂಡಲದೊಳಗೆ ದಿವ್ಯ ನಕ್ಷತ್ರಗಳಂತೆ ಬೆಳಗುತ್ತಿರುವ ಆದಿಪಂಪ, ಪೊನ್ನ, ರನ್ನ, ಜನ್ನ ಮೊದಲಾದ ವಾಙ್ಮಯ ಪ್ರಭುಗಳು ಕೇವಲ ಕನ್ನಡಿಗರೇ ! ಪರಮ ಭಗವದ್ಭಕ್ತರಾದ ಪುರಂದರ

ದಾಸ, ಕನಕದಾಸ ಮುಂತಾದ ದಾಸಶ್ರೇಷ್ಠರಿಗೆ, ಅಲ್ಲಮಪ್ರಭು, ಬ
ಮುಂತಾದ ಶರಣಶ್ರೇಷ್ಠರಿಗೆ ಶಿವಶರಣರ ಈ ನಮ್ಮ ಬಡ ಕರ್ನಾಟಕ
ಜನ್ಮಭೂಮಿ. ಇಷ್ಟೇ ಅಲ್ಲ ಕನ್ನಡಿಗರೇ! ನಮ್ಮ ಭಾಗ್ಯವ
ಎಷ್ಟೆಂದು ಹೇಳಬೇಕು! ನಿಮ್ಮ ಅರಸರೂ ಸ್ವಂತ ಕವಿಗಳಾಗಿದ್ದ
ಗಂಗ ಅರಸರಲ್ಲಿ ಮಾಧವ, ದುರ್ವಿನೀತ ಮುಂತಾದ ಅನೇಕ ರಾಜ
ಅಶ್ವಶಾಸ್ತ್ರ, ಕಿರಾತಾರ್ಜುನಟೀಕೆ, ದತ್ತಕಸೂತ್ರ ಮುಂತಾದ ಮ
ತ್ವದ ಪುಸ್ತಕಗಳನ್ನು ಬರೆದಿರುವರು. ರಾಷ್ಟ್ರಕೂಟರ ಪ್ರಖ್ಯಾತ ಅ
ನಾದ ನೃಪತುಂಗನು 'ಕವಿರಾಜಮಾರ್ಗ' ವೆಂಬ ಪ್ರಸಿದ್ಧವಾದ ಅಲಂಕಾ
ಶಾಸ್ತ್ರದ ಗ್ರಂಥವನ್ನು ಬರೆದಿರುವನು. ಚಾಲುಕ್ಯವಂಶದ ಅರಸನಾ
ಸೋಮೇಶ್ವರನೆಂಬವನು "ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂ
ಮಣಿ" ಎಂಬ ರಾಜಕೀಯ ಗ್ರಂಥವನ್ನು ಬರೆದನು. ಇಂಥ ರಾ
ಕವಿಗಳೂ ವರಕವಿಗಳೂ ನಿಮ್ಮಲ್ಲಿ ಹುಟ್ಟಿರಲು ನೀವು ನಿಮ್ಮ ಕರ್ನಾ
ಟಕಕ್ಕೆ ಹೆಸರಿಡುವದೇಕೆ?

ಕರ್ನಾಟಕದ ಸ್ತ್ರೀಯರೆಂದರೆ ಕಡಿಮೆ ಪ್ರಸಿದ್ಧರೆ? ನಮ್ಮ
ಕರ್ನಾಟಕದ ಸ್ತ್ರೀಯರ ಹೆಸರುಗಳೂ ಕರ್ನಾಟಕದ ಇತಿಹಾಸದ
ಸುವರ್ಣಾಕ್ಷರಗಳಿಂದ ಬರೆದಿಡುವಷ್ಟು ಉಜ್ವಲವಾಗಿವೆ. ಸುಪ್ರಸಿ
ಪುಲಿಕೇಶಿ ಮಹಾರಾಜನ ಹಿರಿಯ ಸೊಸೆಯಾದ 'ಜಯಮಹಾದೇವಿ'ಯ
ಅಬಲೆಯಾದರೂ ರಾಜ್ಯಭಾರವನ್ನು ಬಹು ಚಾತುರ್ಯದಿಂದ ತೂಗಿ
ಕೊಂಡು ಹೋಗಲಿಲ್ಲವೆ? ಪಶ್ಚಿಮ ಚಾಲುಕ್ಯರ ೨ನೆಯ ಸೋಮೇ
ಶ್ವರನ 'ಪಿರಿಯರಸಿ'ಯಾದ 'ಮೈಲಳಾದೇವಿ' ಯು ಆಗಿನ ಕಾಲಕ್ಕೆ
ಮುಂಬಯಿ ಪ್ರಾಂತದಷ್ಟು ದೊಡ್ಡದಾದ ಬನವಾಸಿ ಪ್ರಾಂತವನ್ನಾ
ರುವುದು ಕರ್ನಾಟಕ ಸ್ತ್ರೀ ಸಮಾಜಕ್ಕೆ ಎಷ್ಟು ಗೌರವಾಸ್ಪದವಾ
ಸಂಗತಿ! ಪಶ್ಚಿಮ ಚಾಲುಕ್ಯರ ೩ನೆಯ ಜಯಸಿಂಹನ ತಂಗಿಯರಾ
'ಅಕ್ಕಾದೇವಿಯರ್ ಕಿಸುನಾಡ ಪಟ್ಟಮಂ ಸುಖಸಂಕಥಾವಿನೋದದಿ
ಆಳುತ್ತಿರೆ' ಆಗಿನ ಕಾಲಕ್ಕೆ ಗೋಕಾವಿಯಲ್ಲಿದ್ದ ಬಂಡಾಯವನ್ನು
ಮುರಿದೊತ್ತಿ, 'ರಣಭೈರವಿ' ಎಂಬ ತಮ್ಮ ಅಭಿಧಾನವನ್ನು ಸಾರ್ಥಕ
ಗೊಳಿಸಿದ ಸಂಗತಿಯನ್ನು ಕೇಳಿದೊಡನೆ ಯಾವ ಕನ್ನಡಿಗನ ಮುಂ

ಆ ವೀರಾಂಗನೆಯ ಚಿತ್ರವು ಬಂದು ನಿಲ್ಲದೆ ಇದ್ದೀತು ! ಅಕ್ಕಮಹಾದೇವಿ, ಕಂತಿ, ನೀಲಮ್ಮ, ಹೊನ್ನಮ್ಮ, ಗಿರಿಯಮ್ಮ ಇವರು ರಚಿಸಿದ 'ಪ್ರಸಾದ ಸಂಪಾದನೆ', 'ಹದಿಬದೆಯ ಧರ್ಮ', 'ಚಂದ್ರಹಾಸ ಚರಿತ್ರೆ' ಇವೇ ಮೊದಲಾದ ಗ್ರಂಥರತ್ನಗಳು, ಕನ್ನಡಿತಿಯರಿಗೆ ಅಮರಣವೂ ಆದರ್ಶವಾಗದೆ ಇರವು. ಕೆಲವು ವರ್ಷಗಳ ಹಿಂದೆ ಕರ್ನಾಟಕದ ಕಣ್ಣಿಗೆ ಬಿದ್ದಿರುವ 'ವೀರಕಂಪರಾಯ ಚರಿತ' ವೆಂಬ ಅತ್ಯಂತ ಸರಸವಾದ ಸಂಸ್ಕೃತ ಕಾವ್ಯದ ಕರ್ತ್ರಿಯೂ, ಶುದ್ಧ ಕರ್ನಾಟಕ ರಾಜಪುತ್ರಿಯೇ. ಅವಳ ಹೆಸರು 'ಗಂಗಾದೇವಿ.' ಇವಳು ವಿಜಯನಗರದ ಪ್ರಖ್ಯಾತ ಅರಸನಾದ ಬುಕ್ಕರಾಯನ ಸಾಕ್ಷಾತ್ ಸೊಸೆ. ಸಾರಾಂಶ— ಕನ್ನಡಿಗರಾದ ಕರ್ನಾಟಕ ವರಕವಿಗಳನ್ನು ನಿತ್ಯದಲ್ಲಿ ಸ್ಮರಿಸಿ, ಅವರ ಅಡಿಯಲ್ಲಿ ಕುಳಿತು, ಈಗಿನ ಕವಿಗಳು ಕವಿತೆಯ ಸ್ಫೂರ್ತಿಯನ್ನು ಪಡೆಯಬೇಕು!

ಬಹುಮಾತಿನಿಂದೇನು ! ಪುಲಿಕೇಶಿ, ಗೋವಿಂದ, ನೃಪತುಂಗ, ತೈಲಪ, ವಿಕ್ರಮ ಇವರೇ ನಮ್ಮ ಶಿವಾಜೀ ಬಾಜೀರಾಯ ಮುಂತಾದವರು. ವಿದ್ಯಾರಣ್ಯರೇ ನಮ್ಮ ರಾಮದಾಸರು. ಪಂಪ, ರನ್ನ, ಲಕ್ಷ್ಮೀಶ, ಷಡಕ್ಷರಿಗಳೇ ನಮ್ಮ ಮೋರೋಪಂತ, ಮುಕ್ತೇಶ್ವರರು. ಕೃಷ್ಣದೇವರಾಯನೇ ನಮ್ಮ ಅಕಬರನು. ಹೊನ್ನಮ್ಮ ಗಿರಿಯಮ್ಮ ಇವರೇ ಮುಕ್ತಾಬಾಯಿ ಮೀರಾಬಾಯಿಯವರು. ವಿಜಯಮಹಾದೇವಿ, ಮೈರಳದೇವಿಯರೇ ನಮ್ಮ ತಾರಾಬಾಯಿ ಅಹಲ್ಯಾಬಾಯಿಯವರು. ಅಕ್ಕಾದೇವಿ, ಕಿತ್ತೂರಿನ ಚನ್ನಮ್ಮ ಇವರೇ ನಮ್ಮ ಝಾಂಸಿ ಲಕ್ಷ್ಮೀಬಾಯಿಯವರು. ವಾಚಕರೇ, ಈ ವಿಧವಾಗಿ ನಮ್ಮ ಪ್ರಾಚೀನ ಇತಿಹಾಸವು ಮಹಾಪುರುಷರಿಂದಲೂ, ಮಹಾಸತಿಯರಿಂದಲೂ ತುಂಬಿಕೊಂಡಿದ್ದು, ಕನ್ನಡಿಗರಾದ ನಮಗೆ ಮಾತ್ರ ಅದು ಕಾದಂಬರಿಯಂತೆ ಕಾಣುತ್ತಿರುವುದು ಎಂತಹ ದೈವದುರ್ವಿಲಾಸ ! ಈ ನಿಮ್ಮ ವಿಭೂತಿಗಳ ನಾಮಾವಳಿಯನ್ನು ಕೇಳಿ ಕನ್ನಡಿಗರೇ ! ಇನ್ನಾದರೂ ಕಣ್ದೆರೆಯಿರಿ !

ನಮ್ಮ ಕರ್ನಾಟಕದ ಅರಸರು ಈ ದೇಶದಲ್ಲಿ ಮಾತ್ರವೇ ಪ್ರಖ್ಯಾತರೆಂತಲ್ಲ. ಅವರು ಇರಾಣ ಮುಂತಾದ ಪರದೇಶದ ಚಕ್ರವರ್ತಿಗಳ ಕಡೆಗೆ ಕೂಡ ತಮ್ಮ ರಾಯಭಾರಿಗಳನ್ನು ಕಳುಹುತ್ತಿದ್ದರೆಂದು ಹೇಳಿದರೆ

ಕನ್ನಡಿಗರಿಗೆ ಅದು ಕನಸಿನಂತೆ ಭಾಸವಾಗಬಹುದು. ಆದರೆ ಕನ್ನಡಿಗರೇ ! ಅದು ಕನಸಲ್ಲ. ಈ ಪುಲಿಕೇಸಿಯೇ ತನ್ನ ರಾಯಭಾರಿಗಳನ್ನು ಇರಾಣದ ಅರಸರ ಕಡೆಗೆ ಕಳುಹಿಸಿದ್ದನು. ಮರಳಿ ಇರಾಣದ ಅರಸನು ತನ್ನ ರಾಯಭಾರಿಗಳನ್ನು ನಮ್ಮ ಬಾದಾಮಿಯ ಪುಲಿಕೇಸಿಯ ಒಡ್ಡೋಲಗಕ್ಕೆ ಕಳುಹಿಸಿದ್ದನು. ಇದರ ಪ್ರತ್ಯಕ್ಷ ಚಿತ್ರವು ಉತ್ತರದಲ್ಲಿರುವ ಅಂಜತೆಯ ಗವಿಯೊಳಗೆ ಈಗಲೂ ಸ್ಪಷ್ಟವಾಗಿ ಕಂಗೊಳಿಸುತ್ತಿದೆ. ಕನ್ನಡಿಗರು ಆ ತಮ್ಮ ಸಾರ್ವಭೌಮನ ಚಿತ್ರವನ್ನು ಒಮ್ಮೆಯಾದರೂ ಕಣ್ಣಾರೆ ಕಂಡು ಧನ್ಯರಾಗಬಾರದೇ ? ಸುಮಾರು ೧೩೦೦ ವರ್ಷಗಳ ಹಿಂದಿನ ಈ ಚಿತ್ರವು ಕರ್ನಾಟಕರಿಗೆ ದೊರೆತಿದ್ದುದು ಅವರ ಮಹತ್ಪುಣ್ಯವಲ್ಲವೇ !

ಕನ್ನಡಿಗರೇ ! ನಿಮ್ಮ ಜನರು ಮಾಡಿದ ಅತ್ಯದ್ಭುತ ಕಾರ್ಯಗಳ ಕಡೆಗೆ ಇನ್ನು ನಿಮ್ಮನ್ನು ಒಯ್ಯುತ್ತೇವೆ. ಹಿಂದುಸ್ತಾನದೊಳಗಿನ-ಅಲ್ಲ-ಜಗತ್ತಿನೊಳಗಿನ ಸೋಜಿಗವಾದ, ಮತ್ತು ಅದ್ಭುತವಾದ, ಕಲ್ಲಿನೊಳಗೆ ಕೊರೆದ ಅಖಂಡ ದೇವಾಲಯವೆಂದರೆ, ವೇಳೂರಿನ ಕೈಲಾಸ ದೇವಾಲಯವು. ಈ ದೇವಾಲಯವನ್ನು ಕನ್ನಡಿಗನಾದ ಕೃಷ್ಣನೆಂದೊಬ್ಬ ರಾಷ್ಟ್ರಕೂಟದ ಅರಸನು ಕಟ್ಟಿಸಿದನೆಂದರೆ, ಅಹುದೋ, ಅಲ್ಲವೋ, ಎಂದು ನಿಮ್ಮ ಮನಸ್ಸು ಸಂಶಯಗ್ರಸ್ತವಾಗಬಹುದಲ್ಲವೇ ! ಬಾದಾಮಿಯ ಮೇಣಬಸ್ತಿಗಳೂ, ಕಾರ್ಲೆಯ ಅತ್ಯಂತ ಮನೋಹರವಾದ ಚೈತ್ಯಾಲಯವೂ, ಅಜಂತೆಯೊಳಗಿನ ನಿಶಾಂತ ಸುಂದರವಾದ ಚಿತ್ರಗಳೂ, ಇವೆಲ್ಲವೂ ನಿಮ್ಮ ಕನ್ನಡನಾಡಿನ ಕಲ್ಲುಕುಟಿಗರ ಕೈಗಾರಿಕೆಗಳೇ! ಕರ್ನಾಟಕದೊಳಗಿನ ಶ್ರವಣಬೆಳಗುಳದ ಗೊಮ್ಮಟೇಶ್ವರನ ಭವ್ಯವೂ, ರಮಣೀಯವೂ ಆದ ಮೂರ್ತಿಯು ಸಾವಿರಾರು ಮೈಲುಗಳ ಮೇಲಿರುವ ಜಪಾನ ಮತ್ತು ಚೀನದೇಶಗಳ ಜನರನ್ನು ಸಹ ಸೂಜಿಗಲ್ಲಿನಂತೆ ಎಳೆಯಹತ್ತಿರುವುದಿಲ್ಲವೇ ! ಲಂಡನ್ನಿನಷ್ಟು ವಿಸ್ತೀರ್ಣವಾದ ಪಟ್ಟಣವು ಲೋಕದಲ್ಲಿ ಇದ್ದಿಲ್ಲವೆಂತಲೇ ನಿಮ್ಮ ತಿಳುವಳಿಕೆಯಲ್ಲವೇ! ಆದರೆ ಈಗ ಹಾಳಾಗಿರುವ ವಿಜಯನಗರದೊಳಗೆ ಹಿಂದಕ್ಕೆ ೫೦-೬೦ ಲಕ್ಷ ಜನರು ವಾಸಿಸುತ್ತಿದ್ದರೆಂದು ವಿದ್ವಾಂಸರು ತರ್ಕ ಕಟ್ಟುತ್ತಾರೆ.

ನೋಡಿದ ಕಡೆಯಲ್ಲೆಲ್ಲ ವಿಶಾಲವಾದ ರಾಜಬೀದಿಗಳಿಂದಲೂ, ಉನ್ನತವಾದ ಗೋಪುರಗಳಿಂದಲೂ, ಸುಂದರವಾದ ಗುಡಿಗಳಿಂದಲೂ, ಭವ್ಯವಾದ ಕೋಟೆ ಕೊತ್ತಳಗಳಿಂದಲೂ, ಜೀರ್ಣವಾದ ರಮ್ಯೋದ್ಯಾನಗಳಿಂದಲೂ ತುಂಬಿಕೊಂಡಿದ್ದು, ಈಗ ಕುರುಹಿಗೆ ಮಾತ್ರ ಉಳಿದಿರುವ ಆ ಕರ್ನಾಟಕ ರಾಜಧಾನಿಯನ್ನು ನೋಡಿ ಕಣ್ಣೀರು ಸುರಿಸದ ಪಾಪಿ ಯಾರು?

ಕನ್ನಡಿಗರೇ ! ನಿಮ್ಮ ಭಾಗವನ್ನು ಎಷ್ಟೆಂದು ವರ್ಣಿಸಬೇಕು ! ಜಗದೊಳಗೆಲ್ಲ ಸೌಂದರ್ಯಾತಿಶಯದಿಂದ ಮೆರೆಯುತ್ತಿರುವ ಬೇಲೂರಿನ ಚೆನ್ನಕೇಶವನ ದೇವಾಲಯವನ್ನೂ, ಒಂದೇಸಮನಾಗಿ ೮೬ ವರುಷಗಳ ವರೆಗೆ ಕಟ್ಟಿದರೂ ಪೂರ್ಣವಾಗದೆ ಇರುವ ಅತ್ಯಂತ ಸುಂದರವಾದ ಹೊಯ್ಸಳೇಶ್ವರನ ಗುಡಿಯನ್ನೂ, ನಿಮ್ಮ ಕನ್ನಡಿಗರ ಅಲ್ಲಿಯ ಅತಿ ಕುಶಲವಾದ ಕುಸುರು ಕೆಲಸವನ್ನೂ ಕಂಡು ಆ ಕಾಲದ ವೈಭವವನ್ನೂ ಬುದ್ಧಿವಂತಿಕೆಯನ್ನೂ ನೆನಿಸಿ, ಉಸುರ್ಗರೆಯದ ಮನುಷ್ಯನಾವನು ! ಈ ಗುಡಿಗಳು ಸೌಂದರ್ಯದ ಕಳಸಗಳೆಂದರೂ ಸಲ್ಲುವುದು.

ಕನ್ನಡಿಗರೇ ! ನಮ್ಮ ಇತಿಹಾಸದಲ್ಲಿ ಮತ್ತೊಂದು ವಿಶೇಷವುಂಟು. ಯಾವುದೆಂದರೆ, ಅನೇಕ ಭಾಷಾಪ್ರಾಂತಗಳಲ್ಲಾಗಿರುವಂತೆ ನಮ್ಮ ಭಾಷೆಯಲ್ಲಿ ಅದಲು-ಬದಲುಗಳಾಗಲಿಲ್ಲ. ಹಿಂದಕ್ಕೆ ನಮ್ಮ ಅರಸರೂ ವಿದ್ವಾಂಸರೂ ಆಡುತ್ತಿದ್ದ ಭಾಷೆಯನ್ನೇ ನಾವೀಗ ಆಡುತ್ತೇವೆ. ಕನ್ನಡ-ತಮಿಳುಗಳ ಹೊರ್ತು ಇತರ ಜನಾಂಗಗಳೆಲ್ಲವೂ ಬಹುಮಟ್ಟಿಗೆ ಬದಲಾಯಿಸಿ ಹೋಗಿವೆ. ಉತ್ತರ ಹಿಂದುಸ್ತಾನದ ಅಶೋಕ, ಚಂದ್ರಗುಪ್ತ ಇವರು ಆಡುತ್ತಿದ್ದ ಭಾಷೆಯೇ ಬೇರೆ. ಮರಾಠರಿಗೂ ಬಂಗಾಲರಿಗೂ ತಮ್ಮ ದೇಶಗಳ ಪ್ರಾಚೀನ ರಾಜರು ಮರಾಠಿ, ಬಂಗಾಲಿ ಭಾಷೆಯನ್ನೇ ಆಡುತ್ತಿದ್ದರೆಂದು ಹೇಳಲಿಕ್ಕೆ ಬರಲಾರದು. ಆದರೆ ಕನ್ನಡಿಗರು ಮಾತ್ರ ನಮ್ಮ ಹಿಂದಿನ ಅರಸರೆಲ್ಲರೂ ಈ ಕನ್ನಡ ಭಾಷೆಯನ್ನೇ ಆಡುತ್ತಿದ್ದರೆಂದು ಎದೆ ತಟ್ಟಿ ಹೇಳಬಹುದು. ಈ ತೆರದ ಅಭಿಮಾನವು ಮತ್ತಾರಿಗೆ ಶಕ್ಯವು ?

ಇನ್ನು ಕರ್ನಾಟಕದೊಳಗೆ ಒಂದು ಕಾಲಕ್ಕೆ ಮೆರೆದು, ಕರ್ನಾಟಕಕ್ಕೆ ತಿಲಕಪ್ರಾಯವಾಗಿರುವ ಪಟ್ಟಣಗಳ ವಿಷಯವನ್ನು ಹೇಳಿ ಈ ಪ್ರಕರಣವನ್ನು ಮುಗಿಸುವೆವು. ಇವುಗಳ ಪ್ರಾಚೀನ ವೈಭವವನ್ನು ಲಕ್ಷ್ಯಕ್ಕೆ ತಂದು

ಕೊಂಡರೆ ಇವಕ್ಕೆ ಐತಿಹಾಸಿಕ 'ಕ್ಷೇತ್ರ' ಗಳೆಂದು ಹೇಳುವುದು ಯು
ವಾಗುವುದು. ಧಾರ್ಮಿಕ ದೃಷ್ಟಿಯಿಂದ ಕ್ಷೇತ್ರ-ತೀರ್ಥಗಳಿಗೆ ಎ
ಪ್ರಾಶಸ್ತ್ಯವೋ, ಇತಿಹಾಸ ದೃಷ್ಟಿಯಿಂದ ಇವಕ್ಕೆ ಅಷ್ಟೇ ಪ್ರಾಶಸ್ತ್ಯ
ಆದುದರಿಂದ ಕನ್ನಡಿಗರೇ, ನಿಮ್ಮ ಐತಿಹಾಸಿಕ ಕ್ಷೇತ್ರಗಳಾದ ಬಾದಾ
ಪಟ್ಟದಕಲ್ಲು, ಐಹೊಳೆ, ಮಳಖೇಡ, ಕಲ್ಯಾಣ, ಅಜಂತಾ, ವೇರು
ಹಳೇಬೀಡು (ದ್ವಾರಸಮುದ್ರ), ಲಕ್ಕುಂಡಿ, ಹಂಪೆ ಇವೇ ಮುಂತಾ
ದರ್ಶನೀಯವಾದ ಸ್ಥಳಗಳನ್ನು ನೋಡಿ ನಿಮ್ಮ ಕಣ್ಣುಗಳ ಪಾರಣೆಯನ್ನು
ತೀರಿಸಿಕೊಳ್ಳಿರಿ; ಮತ್ತು ಕೃತಜ್ಞರಾಗಿರಿ.

———

೫ ನೆಯ ಪ್ರಕರಣ

## ಸಾಧನ ಸಾಮುಗ್ರಿ

ವಾಚಕರೇ, ಹಿಂದಿನ ಪ್ರಕರಣದಲ್ಲಿ, ಕರ್ನಾಟಕದೊಳಗೆ ಬಾಳಿದ ಬಲಾಢ್ಯರಾದ ಅರಸರನ್ನೂ ಧರ್ಮಸ್ಥಾಪಕರಾದ ಆಚಾರ್ಯರನ್ನೂ, ತೇಜೋ ವಿಶಿಷ್ಟರಾದ ತತ್ವಜ್ಞಾನಿಗಳನ್ನೂ, ಪ್ರತಿಭಾಸಂಪನ್ನರಾದ ವರ ಕವಿಗಳನ್ನೂ, ಕವಯಿತ್ರಿಯರನ್ನೂ, ವೀರ್ಯವತಿಯರಾದ ವೀರಾಂಗ ನೆಯರನ್ನೂ, ನಾವು ಕಟ್ಟಿದ ಕಟ್ಟಡಗಳನ್ನೂ ಒಂದರಹಿಂದೊಂದು ನಿಮ್ಮ ಅವಲೋಕನಕ್ಕೆ ತಂದುಕೊಟ್ಟೆವು. ಈ ನಾಮಾವಳಿಯು ನಿಮ್ಮ ನೆನಪಿನಲ್ಲಿರಬೇಕಾದರೆ ಅವರು ಯಾವಾಗ ಹುಟ್ಟಿದರು, ಯಾವಾಗ ಪ್ರಬಲಸ್ಥಿತಿಗೆ ಬಂದರು— ಇವೇ ಮುಂತಾದ ಸಂಗತಿಗಳ ಜ್ಞಾನವಿರುವುದು ಅವಶ್ಯವಿದೆ. ನಾವು ಹಿಂದೆ ಹೇಳಿದ ಸಂಗತಿಗಳಿಂದ ನಮ್ಮ ಕನ್ನಡಿಗರಲ್ಲಿ ಕರ್ನಾಟಕದ ಬಗ್ಗೆ ಸಕೌತುಕವಾದ ಅಭಿಮಾನವೂ, ಕರ್ನಾಟಕ ಇತಿಹಾಸದ ಬಗ್ಗೆ ಜಿಜ್ಞಾಸೆಯೂ ಹುಟ್ಟಿರಬಹುದೆಂದು ಕಲ್ಪನೆ ಮಾಡಿದರೂ ಆ ಜಿಜ್ಞಾಸೆಯನ್ನು ತಣಿಸುವಂಥ ಇತಿಹಾಸ ವೆಲ್ಲಿದೆ ? ಆ ತೆರನಾದ ಕನ್ನಡಿಗರ ಆದ್ಯಂತವಾದ ಇತಿಹಾಸವು ಹೊಸ ತಾಗಿ ಇನ್ನು ನಿರ್ಮಾಣವಾಗಬೇಕಾಗಿದೆ. ಕರ್ನಾಟಕದ ನಿಜವಾದ ಸ್ಥಿತಿಯನ್ನರಿತು, ಅಂತಹದೊಂದು ಇತಿಹಾಸವನ್ನು ಬರೆವುದೂ, ಅದು ಕರ್ನಾಟಕದ ಏಳ್ಗೆಗೆ ಹೇಗೆ ಸಾಧನವಾಗುತ್ತದೆಂಬುದನ್ನು ಅರಿತು ಕೊಳ್ಳುವುದೂ, ಇವೇ ಈಗ ಕನ್ನಡಿಗರ ಪ್ರಥಮ ಕರ್ತವ್ಯಗಳು. ಸದ್ಯಕ್ಕೆ 'ಕರ್ನಾಟಕ' ವೆಂಬ ಶಬ್ದವು ನಮ್ಮ ಕಿವಿಗೆ ಬಿದ್ದ ಕೂಡಲೆ ಅದರ ಬಗ್ಗೆ ನಮ್ಮ ಮನಸ್ಸಿನಲ್ಲಿ ಮಸುಮಸುಕಾದ ವಿಚಾರಗಳು ಮಾತ್ರ ತಲೆದೋರುತ್ತವೆ. ನಾವು ' ಕರ್ನಾಟಕರು ' ಏಕೆ ? ' ಕರ್ನಾಟಕ ' ರೆಂದೆನಿಸಿಕೊಳ್ಳುವುದರಲ್ಲಿ ನಾವೇಕೆ ಹೆಮ್ಮೆ ಪಡಬೇಕು ? ಇವೇ ಮುಂತಾದ ಪ್ರಶ್ನೆಗಳಿಗೆ ನಮ್ಮ ಹತ್ತರ ಸರಿಯಾದ ಉತ್ತರವಿರುವು-

ದಿಲ್ಲ. ಆದುದರಿಂದ, ನಮ್ಮ ಮನದಲ್ಲಿ ಈಗ ಮುಖಹಾಳಾಗಿ ಗೊಂಡಿರುವ ಕಲ್ಪನೆಗಳು ಥಾಳವಾಗಿ ಮೂಡಿ, ಕರ್ನಾಟಕದ ಪ್ರ ಮಾನವಾದ ಚಿತ್ರವು ನಮ್ಮ ಕಣ್ಣಿನ ಮುಂದೆ ಎದ್ದು ಕಾಣಬೇಕಾ ನಾವು ನಮ್ಮ ನಾಡಿನ ಇತಿಹಾಸವನ್ನು ಅಭಿಮಾನಪೂರ್ವಕವಾಗಿ ಯೊಂದು ಸಂಗತಿಯೂ ಗೊತ್ತಾಗುವಂತೆ ಅಭ್ಯಾಸ ಮಾಡಬೇ ಕರ್ನಾಟಕದ ನಿಜವಾದ ಮಹಾತ್ಮ್ಯವನ್ನು ತಿಳಿಯಲಿಕ್ಕೆ ಅದರ ವಾದ ಇತಿಹಾಸವೇ ದಾರಿಯು.

ಆದರೆ, ಕನ್ನಡಿಗರ ದುರದೃಷ್ಟವಶದಿಂದ, ಆ ಇತಿಹಾಸವ ಹೊರಗೆಡಹುವದಕ್ಕೆ ಬೇಕಾಗುವ ಸಾಧನಗಳು ಈಗ ಸಾಕಾದ ದೊರೆಯುವದಿಲ್ಲ. ಒಂದು ವೇಳೆ ಎಲ್ಲಿಯೋ ಒಂದೆರಡು ದೊ ತರೂ ಅವು ಹರಕು ಮುರುಕುಗಳು. ಈ ತಪ್ಪು ಯಾರದು ಮೊದಲೇ ಕರ್ನಾಟಕದ ವೈಭವವು ನಷ್ಟ ಹೊಂದಿ ಮುನ್ನೂ ನಾನೂರು ವರ್ಷಗಳಾಗಿವೆ. ಮೇಲಾಗಿ ಪರಕೀಯ ಜನರು ಆಗಿನ ಕಾ ತಮ್ಮ ಹಗೆಗಳ ಮೇಲಿನ ಡಂಕಿನಿಂದ ಅವರ ವೈಭವ ಚಿಹ್ನಗಳ ತುಂಡರಿಸಿದ್ದಾರೆ. ಇಂಥ ಸ್ಥಿತಿಯಲ್ಲಿ ಕೂಡ ಉಳಿದಷ್ಟು ಸಾಮ ಯನ್ನು ಕಲೆಹಾಕುವ ಬುದ್ಧಿ ನಮ್ಮಲ್ಲಿದ್ದರೆ ಇತಿಹಾಸಕ್ಕೆ ಎಷ್ಟೊ ಸಹಾಯವಾಗಬಹುದಾಗಿತ್ತು. ಆದರೆ ನಮ್ಮಲ್ಲಿ ಅಂಥ ಬುದ್ಧಿಯು ವಿಶೇಷವಾಗಿ ಹುಟ್ಟಲಿಲ್ಲ. ಅಂದ ಬಳಿಕ, ಈಗ ನಮ್ಮ ಹತ್ತರ ಆದ್ಯ ವಾದ ಇತಿಹಾಸವನ್ನು ಬರೆಯುವುದಕ್ಕೆ ಬೇಕಾದಷ್ಟು ಸಾಧನಗಳಿಲ್ಲ ತಪ್ಪು ನಮ್ಮದೇ ಅಲ್ಲವೇ ? ಕನ್ನಡಿಗರೇ ! ಇನ್ನಾದರೂ ಎಳಿ ಸಾಧ್ಯವಾದಷ್ಟು ಸಾಧನಗಳನ್ನು ಕಲೆ ಹಾಕಿದರೂ ಎಷ್ಟೋ ಕಾಯ ವಾಗುವಂತಿದೆ ! ಏಕೆಂದರೆ, ಈ ನಿಮ್ಮ ನಿರಭಿಮಾನತೆಯನ್ನು ನಿಮ್ಮ ಪೂರ್ವಜರು ಮೊದಲೇ ಕಂಡುಹಿಡಿದುದರಿಂದಲೋ ಏನೋ ಅವರ ತಮ್ಮ ವೈಭವದ ಕುರುಹುಗಳನ್ನು ಶಾಶ್ವತವಾಗಿ ಶಿಲಾಲಿಪಿ, ಕಟ್ಟ ಮುಂತಾದವುಗಳಲ್ಲಿ ಇಟ್ಟು ಹೋಗಿದ್ದಾರೆ. ೧೦೦೦–೧೫೦೦ ವರ್ಷಗ ವರೆಗೆ ಆಳಿದ ಕರ್ನಾಟಕದಂಥ ವೈಭವಶಾಲಿಯಾದ ರಾಷ್ಟ್ರವೆಂದರೇನು ಹಿಂದುಸ್ಥಾನದ ದೊಡ್ಡ ದೊಡ್ಡ ಇತಿಹಾಸ ಗ್ರಂಥಗಳಲ್ಲಿ ಕೂಡ ಅದ

ಚರಿತ್ರೆಯು ಪಾಲಿಗೆ ಹತ್ತೆಂಟು ಪುಟಗಳೇ ಬರುವುದೆಂದರೇನು! ಕನ್ನಡಿಗರೇ ಇದು ಅಪಮಾನಕರವಲ್ಲವೇ? ಈ ಕುಂದಕವನ್ನು ಹೋಗಲಾಡಿಸುವುದು ನಿಮ್ಮ ಕರ್ತವ್ಯವಲ್ಲವೆ?

ನಮ್ಮ ಪೂರ್ವಜರು ಬಿಟ್ಟು ಹೋದ ಸಾಧನಸಾಮುಗ್ರಿಯು ಶಾಶ್ವತವಾಗಿದೆಯೆಂದು ಹೇಳಿದೆವಷ್ಟೇ! ಆ ಸಾಧನಗಳು ಯಾವುವೆಂಬುದನ್ನು ಇನ್ನು ನೋಡುವ. ಅಂಥ ಸಾಧನ ವಿಪುಲವಾಗಿರದಿದ್ದರೂ, ಸ್ವದೇಶ ಭಕ್ತಿಯಿಂದ ಪ್ರೇರಿತನಾದವನಿಗೆ ಇತಿಹಾಸವನ್ನು ಬರೆಯುವುದಕ್ಕೆ ಸಾಕಾಗುವಷ್ಟು ಇರುತ್ತವೆಂದು ಕಂಡುಬರುವುದು. ಅಂಥವನಿಗೆ ಕರ್ನಾಟಕದೊಳಗೆ ಎಲ್ಲಿ ನೋಡಿದರೂ ಇತಿಹಾಸ ಸಾಮುಗ್ರಿಯ ರಾಶಿಗಳು ಅಲ್ಲಲ್ಲಿಗೆ ಒಟ್ಟಿರುವುದಾಗಿ ಕಾಣುವವು. ಏಕೆಂದರೆ ನಮ್ಮ ನಾಡಿನಲ್ಲಿ ಎತ್ತ ನೋಡಿದತ್ತ ಶಿಲಾಲಿಪಿಗಳು ಹರಡಿಕೊಂಡಿರುವವು. ಇಲ್ಲಿ ದೊರೆಯುವಷ್ಟು ಶಿಲಾಲಿಪಿಗಳು ಬೇರೆ ಯಾವ ಕಡೆಗೂ ದೊರೆಯುವುದಿಲ್ಲ. ನಮ್ಮ ನಾಡು ಶಿಲಾಲಿಪಿಗಳ ತವರುಮನೆಯೆಂದರೂ ಸಲ್ಲುವುದು. ಕರ್ನಾಟಕದೊಳಗೆ ಕಲ್ಲುಗುಡಿಯಿಲ್ಲದ ಊರಿಲ್ಲ; ಶಿಲಾಲಿಪಿಯಿಲ್ಲದ ಗುಡಿಯಿಲ್ಲ; ನಮ್ಮ ಅರಸರ ಔದಾರ್ಯವನ್ನೂ ದಾನಶೌಂಡತ್ವವನ್ನೂ ಹೊಗಳದ ಶಿಲಾಲಿಪಿಯಿಲ್ಲ. ನಮ್ಮ ಸುದೈವದಿಂದ ಮೈಸೂರಿನ ಸರಕಾರದವರು ತಮ್ಮ ಪ್ರಾಂತದ ಮಟ್ಟಿಗೇ ಏಕಾಗಲೊಲ್ಲದು,—ತಮ್ಮ ದೇಶದ ಮೂಲೆ ಕೊಂಪೆಗಳನ್ನು ಸಹ ಹುಡುಕಿ, ಸುಮಾರು ೮೦೦೦ ಶಿಲಾಲಿಪಿ ಮತ್ತು ತಾಮ್ರ ಶಾಸನಗಳನ್ನು ಅಚ್ಚು ಹಾಕಿಸಿದ್ದಾರೆ. ಉತ್ತರ ಕರ್ನಾಟಕದಲ್ಲಿಯೂ ಕನಿಷ್ಠ ೭-೮ ಸಾವಿರ ಶಿಲಾಲೇಖಗಳು ಸಿಕ್ಕಬಹುದು. ಧಾರವಾಡದ ಒಂದೇ ಜಿಲ್ಲೆಯಲ್ಲಿರುವ ಒಟ್ಟು ೧೧೦೦-೧೧೧೦ ದೊಡ್ಡ ಗ್ರಾಮದೊಳಗೆ ನಾಲ್ಕೆಂಟು ಗ್ರಾಮಗಳನ್ನು ಮಾತ್ರವೇ ಬಿಟ್ಟು ಉಳಿದ ಎಲ್ಲ ಗ್ರಾಮಗಳಲ್ಲಿ ಶಿಲಾಲಿಪಿಗಳು ದೊರೆಯುತ್ತವೆ. ಲಕ್ಕುಂಡಿ, ಅಣ್ಣಿಗೇರಿ ಮುಂತಾದ ಗ್ರಾಮಗಳಲ್ಲಂತೂ ೨೦-೩೦ ಶಿಲಾಲಿಪಿಗಳು ಒಂದೊಂದೇ ಊರಿನಲ್ಲಿ ದೊರೆಯುತ್ತವೆ. ಸಾರಾಂಶ, ನಮ್ಮ ನಾಡು ಶಿಲಾಲಿಪಿಮಯವಾಗಿರುವುದೆಂದರೂ ಅತ್ಯೋಕ್ತಿಯಾಗದು! ಎಂದೂ ಸವೆಯದಂಥ ಮೂಲಧನವು ನಮ್ಮಲ್ಲಿರಲು ಅದರ ಅವಸ್ಥೆ

ಏನಾಗಿರುವುದು, ನೋಡಿದಿರೋ? ಅಕಟಕಟ! ಅದು ನೆನಪಾದೊ ನೆಯೇ ಎದೆ ಹಾರುತ್ತದೆ! ನಮ್ಮಲ್ಲಿ 'ನಾ ನೀ' ಎಂದೆನ್ನುವ ವಿದ್ವಾ ಸರಿಗೂ ಅವುಗಳ ಮೇಲ್ಮೆಯು ಚೆನ್ನಾಗಿ ಹೊಳೆದಿರುವುದಿಲ್ಲ ಸಾಮಾನ್ಯ ಜನರ ಮಾತಂತೂ ದೂರವೆ! ಸಾಮಾನ್ಯ ಜನರಲ್ಲಿ ಕೆ ವರು ಅವುಗಳ ಮೇಲೆ ಎಣ್ಣೆ ಸುರಿಯುತ್ತಾರೆ; ಮತ್ತೆ ಕೆಲವರು ಅವಕ್ಕೆ ಬಣ್ಣ ಬಳಿಯುತ್ತಾರೆ; ಬೇರೆ ಕೆಲವು ಹುಡುಗರು ತಮ್ಮ ಸ್ವಭಾವಾ ನುಗುಣವಾಗಿ ಅದನ್ನು ಮನಬಂದಂತೆ ಕಟೆದು ಕೆಡಿಸುತ್ತಾರೆ. ಹೀಗಾ ಶಿಲಾಶಾಸನಗಳನ್ನು ಸಾವಿರಗಟ್ಲೆ ನೋಡಬಹುದು. ಅವುಗಳ ಮಹತ್ವ ವನ್ನರಿತವರಾದ ಸರ್ ಜಾರ್ಜ ಇಲಿಯೆಟ್, ಡಾ. ಫ್ಲೀಟ್, ಡಾ. ರೈಸ್ ಇವರಂಥ ಯುರೋಪೀಯ ಬಂಧುಗಳು ಮಾತ್ರ ಸಾವಿರಾರು ಲಿ ಗಳನ್ನು ಶ್ರಮಪಟ್ಟು ಉದ್ಧರಿಸಿದ್ದಾರೆ. ತೀರಿತು! ಮಿಕ್ಕವುಗಳೆಲ್ಲ ಹಾಗೇ ಮಣ್ಣುಮುಕ್ಕುತ್ತ ಬಿದ್ದುಕೊಂಡಿವೆ. † ಅವುಗಳ ದುರವಸ್ಥೆ ಕಂಡು ಯಾವ ಇತಿಹಾಸಾಭಿಮಾನಿಯ ಕಣ್ಣುಗಳು ಅಶ್ರುಗಳಿಂದ ತುಂ ತುಳುಕದೆ ಇರಲಾರವು! ಹೀಗೆ ಇನ್ನೆಷ್ಟು, ಮಣ್ಣಿನಲ್ಲಿ ಹುಗಿದು ಹೋಗಿರುವುವೋ ದೇವರೇ ಬಲ್ಲ! ಅನೇಕ ಶಿಲಾಲಿಪಿಗಳು ತಿಪ್ಪೆಯಲ್ಲಿ ಹೊರಳಾಡುವುದನ್ನೂ, ಬಾವಿಗಳಿಗೆ ಪಾವಟಿಗೆಗಳಾಗಿ ಬಿದ್ದಿರುವುದನ್ನೂ, ಗುಡಿ-ಗುಂಡಾರಗಳಿಗೆ ತೊಲೆ-ಜಂತೆಗಳಾಗಿರುವದನ್ನೂ ಪ್ರಸ್ತುತ ಲೇಖ ಕನು ಕಣ್ಣಾರೆ ಕಂಡಿದ್ದಾನೆ! ಆದರೆ ಏನು! ಅವುಗಳನ್ನುದ್ಧರಿಸುವ ಕಾರ್ಯವು ಒಬ್ಬಿಬ್ಬರಿಂದ ಸುಲಭ ಸಾಧ್ಯವೋ? ಮೈಸೂರ ಸರಕಾರ ದವರಂತೆ ನಮ್ಮ ಸರಕಾರದವರ ಮನಸ್ಸಿನಲ್ಲಿ ಬಂದಾಗಲೇ ಆ ಕೆ ಸವು ಸುಲಭಸಾಧ್ಯವು. ಆದರೆ ಅಂಥ ಕಾಲವು ಬರುವ ವರೆಗೆ ನಾವು ಸುಮ್ಮನಿರಬೇಕೋ? ಇಲ್ಲ. ನಾವು ಸಂಘಶಕ್ತಿಯಿಂದ ಆದಷ್ಟು ಮಟ್ಟಿಗೆ ಅವುಗಳನ್ನು ಕಾಲನ ಬಾಯಿಯಿಂದಲಾದರೂ ಉಳಿಸಿಕೊಂಡು ಮುದ್ರಿಸಿ ಇಡಬೇಕು. ಸುಲಭ ಸಾಧನಗಳುಳ್ಳ ಮಹಾರಾಷ್ಟ್ರ ಬಂಧು-

---

* ಟಿಪ್ಪಣಿ— ನಮ್ಮ ಪರಿಶ್ರಮದ ಪರಿಣಾಮವಾಗಿ, ೧೯೨೫ ರಿಂದ ಸರಕಾರದ ವರು ಉತ್ತರ ಕರ್ನಾಟಕದಲ್ಲಿಯ ಶಿಲಾಲಿಪಿಗಳನ್ನು ಅಚ್ಚು ತೆಗೆದುಕೊಳ್ಳುವುದಕ್ಕೆ ಪ್ರಾರಂಭಿಸಿರುವರೆಂಬುದು ಸಂತೋಷಕರ.

ಗಳಿಗೆ ತಮ್ಮ ಇತಿಹಾಸವನ್ನು ಸಂಶೋಧಿಸಲಿಕ್ಕೆ ಪ್ರಸಿದ್ಧ ಶೋಧಕರಾದ ಶ್ರೀ ರಾಜವಾಡೆಯಂಥ ನೂರಾರು ಜನರು ಬೇಕಾಗಿರುವರು. ಇನ್ನು ನಮ್ಮ ಇತಿಹಾಸಕ್ಕೆ ಎಷ್ಟು ರಾಜವಾಡೆಯವರು ಬೇಕಾಗುವವೆಂಬುದನ್ನು ನೀವೇ ಕಲ್ಪಿಸಿರಿ. ಅಂಥ ಜನರು ಹುಟ್ಟಿದ ದಿವಸವೇ ಕರ್ನಾಟಕಕ್ಕೆ ಮಂಗಲ ದಿವಸವು. ಅವರು ಯಾವಾಗ ಹುಟ್ಟುವರೋ ಹುಟ್ಟಲಿ! ಸದ್ಯಕ್ಕಂತೂ ನಾವು ಶಿಲಾಲಿಪಿಗಳನ್ನು ಮೆಟ್ಟಿ ತುಳಿಯುತ್ತಿದ್ದೇವೆ. ಯಾವ ಶಿಲಾಲಿಪಿಗಳನ್ನು ರಾಜರು ಮಹಾರಾಜರು ಪವಿತ್ರ ವಸ್ತುಗ- ಳೆಂದು ಸಂರಕ್ಷಿಸುತ್ತಿದ್ದರೋ ಅವುಗಳಿಗೆ ಹಾದಿಹೋಕರರು ಸಹ ವ್ಯಸನ ಪಡುವ ದುಸ್ಥಿತಿಯು ಬಂದೊದಗಿದೆ. ಕರ್ನಾಟಕ ಇತಿಹಾಸಕ್ಕೆ ಮುಖ್ಯ ಸಾಧನವಾದ ಇವುಗಳನ್ನು ಉದ್ಧರಿಸುವುದೇ ಕನ್ನಡಿಗರ ಮೊದಲನೆಯ ಕಾರ್ಯವು.

ಕರ್ನಾಟಕ ಇತಿಹಾಸದ ಎರಡನೆಯ ಸಾಧನವಾವುದೆಂದರೆ ತಾಮ್ರ ಪಟಗಳು. ಇವೂ ಶಿಲಾಲಿಪಿಯಷ್ಟೇ ಮಹತ್ವದವಾಗಿರುತ್ತವೆ. ಇವು ಗಳು ದಪ್ಪ ತಾಮ್ರದ ತಗಡುಗಳ ಮೇಲೆ ಸುವಾಚ್ಯವಾದ ಅಕ್ಷರಗಳು ಕೆತ್ತಲ್ಪಟ್ಟು, ನಾಲ್ಕಾರು ತಗಡುಗಳಲ್ಲಿ ರಂಧ್ರ ಕೊರೆದು ತಾಮ್ರದ ಬಳೆಗಳಲ್ಲಿ ಪೋಣಿಸಲ್ಪಟ್ಟಿರುತ್ತವೆ. ಈ ತಾಮ್ರಪಟಗಳೆಲ್ಲವೂ ಭೂದಾನದ ಸನದುಗಳೇ ಸರಿ. ಇಂಥ ನೂರಾರು ದೊರೆಯಬಹುದು. ಈಗ ಅವು ಬ್ರಾಹ್ಮಣರ ಮನೆಯಲ್ಲಿ ನೆಲಮನೆಯಲ್ಲಾಗಲಿ ದೇವರ ಜಗುಲಿಗಳ ಮೇಲಾಗಲಿ ಬಿದ್ದಿರುತ್ತವೆ. ಅನೇಕ ಮಠಗಳಲ್ಲಿ ಅವನ್ನು ಜನರು ಪೂಜೆ ಮಾಡುತ್ತಾರೆ. ಇಂಥ ತಾಮ್ರ ಶಾಸನಗಳನ್ನು ಇತಿಹಾಸ ಸಂಶೋಧಕರು ಹುಡುಕಿ ತೆಗೆಯಬೇಕು.

ಕರ್ನಾಟಕ ಇತಿಹಾಸವನ್ನು ಸಾರುವ ಮೂರನೆಯ ಸಾಧನವಾವು ದೆಂದರೆ— 'ವೀರಗಲ್ಲು'ಗಳು, 'ಮಾಸತಿಕಲ್ಲು'ಗಳು. ವೀರಗಲ್ಲುಗಳೆಂದರೆ ವೀರರು ಮಡಿದ ಸ್ಥಳಗಳಲ್ಲಿ ಅವರ ಸ್ಮಾರಕಕ್ಕೆಂದು ನಟ್ಟ ಕಲ್ಲುಗಳು. ಇವುಗಳ ಮೇಲೆ ಆಯಾ ವೀರರ ಮೂರ್ತಿಗಳು ಕಟೆದಿದ್ದು ದೇವದೂತರು ಅವರನ್ನು ವಿಮಾನಗಳಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆ ಚಿತ್ರ ತೋರಿಸಿರುತ್ತದೆ. ಕೆಲವು ವೀರಗಲ್ಲುಗಳ ಮೇಲೆ ನಡನಡುವೆ ಅಕ್ಷರ

ಗಳಿರುತ್ತವೆ. ಮಹಾಸತಿ ಕಲ್ಲುಗಳೆಂದರೆ ಪತಿವ್ರತೆಯರು ವೀರರಾ
ತಮ್ಮ ಪತಿಗಳೊಡನೆ ಸಹಗಮನ ಮಾಡಿದ ಸ್ಥಳದಲ್ಲಿ ಅವರ ಸ್ಮಾ
ಕಾರ್ಥವಾಗಿ ನಿಲ್ಲಿಸಿದ ಕಲ್ಲುಗಳು. ಇದಕ್ಕೆ ಹಳ್ಳಿವಾಡ ಜನರು 'ಮಾಸ್ತಿ
ಕಲ್ಲು' ಎಂದೆನ್ನುತ್ತಾರೆ. ಇಂಥ ಕಲ್ಲುಗಳಲ್ಲಿ ಕೆಲವುಗಳ ಮೇ
ಒಂದು ಕೈಯಾಕಾರದ ಗುರುತು ಮಾತ್ರ ಇರುತ್ತದೆ. ಈ ವೀರಗಲ್ಲ
ಮಹಾಸತಿಗಲ್ಲುಗಳಿಂದಲೂ ಕೆಲಪು ಮಟ್ಟಿಗೆ ಇತಿಹಾಸಕ್ಕೆ ಸಹಾ
ವಾಗುವದು.

ನಾಲ್ಕನೆಯ ಸಾಧನವಾವುದೆಂದರೆ **ನಾಣ್ಯಗಳು.** ಈ ನಾಣ್ಯ
ಳಿಂದ ಆಯಾಕಾಲದ ಅರಸರ ಹೆಸರು ಇತ್ಯಾದಿಗಳು ವ್ಯಕ್ತವಾಗುತ್ತವೆ.

ಐದನೆಯ ಮಹತ್ವದ ಸಾಧನವೆಂದರೆ **ಪೂರ್ವಕಾಲದ ಕಟ್ಟಡ
ಗಳು.** ದಕ್ಷಿಣ ಹಿಂದುಸ್ತಾನದಲ್ಲಿರುವಂಥ ಭವ್ಯವಾದ ಗುಡಿಗಳು ಇಡೀ
ಹಿಂದುಸ್ತಾನದಲ್ಲಿಯೇ ಇಲ್ಲ. ಇದರ ಕಾರಣವೇನೆಂದರೆ— ನಮ್ಮ ದೇ
ದಲ್ಲಿ ಶಿಲ್ಪಕಲೆಯು ಅತ್ಯಂತ ಪರಿಣತಾವಸ್ಥೆಯನ್ನು ಪಡೆದಷ್ಟು ಅದು
ಮತ್ತಾವ ದೇಶದಲ್ಲಿಯೂ ಪಡೆದಿರಲಿಲ್ಲ. ಇದರ ಸತ್ಯತೆಯು, ನಮ್ಮ-
ಲ್ಲಿಯ ಮನೋಹರವಾದ ಅಸಂಖ್ಯ ದೇವಾಲಯಗಳನ್ನು ನೋಡಿದರೆ
ಗೊತ್ತಾಗುವುದು. ಡಾ. ಫರ್ಗ್ಯುಸನ್ನರೆಂಬವರು ಈ ದೇಶವನ್ನೆಲ್ಲಾ
ಸಂಚಾರ ಮಾಡಿ, ಈ ಕಟ್ಟಡಗಳ ಆಮೂಲಾಗ್ರವಾದ ಇತಿಹಾಸವನ್ನು
ಬರೆದಿಟ್ಟಿದ್ದಾರೆ. ಈ ಕಟ್ಟಡಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ
ಇಂಥ ಗುಡಿಯು ಸುಮಾರು ಇಂಥ ಅರಸರ ಆಳಿಕೆಯಲ್ಲಿಯೇ ಹುಟ್ಟಿ
ತೆಂದು ನಿರ್ಧರಿಸಲಿಕ್ಕೆ ಬರುತ್ತದೆಂದು ಡಾ. ಫರ್ಗ್ಯುಸನ್ ಇವರು ಹೇಳು
ತ್ತಾರೆ. ಇದಲ್ಲದೆ, ಆ ಗುಡಿಗಳ ಮೇಲೆ ಕೊರೆದಿರುವ ಚಿತ್ರಗಳಿಂದ ಆ
ಕಾಲದ ಜನರ ಕಲಾ-ಕೌಶಲ್ಯ ಉಡಿಗೆ–ತೊಡಿಗೆ, ಸಮಾಜಸ್ಥಿತಿ,
ಆಯುಧ, ವಾಹನ ಇವೇ ಮೊದಲಾದವುಗಳು ತಿಳಿದುಬರುತ್ತವೆ.
ಕರ್ನಾಟಕದ ಅರಸರನ್ನು ಒಂದು ವೇಳೆ ಮರೆಯಬಹುದು; ಕರ್ನಾ
ಟಕದ ವಿದ್ವನ್ಮಣಿಗಳು ಒಂದು ವೇಳೆ ನಮ್ಮ ಸ್ಮೃತಿಪಥದಿಂದ ದೂರ
ವಾದಾರು; ಕರ್ನಾಟಕ ವಾಙ್ಮಯವು ಒಂದು ವೇಳೆ ಹುಳ ತಿಂದು
ಹಾಳಾಗಿ ಹೋದೀತು! ಆದರೆ ಗುಡ್ಡ–ಬೆಟ್ಟಗಳ ಬಂಡೆಗಳಲ್ಲಿ ಕೊರೆ

ಯಲ್ಪಟ್ಟ ಅಖಂಡವಾದ ಕೃತ್ರಿಮ ಗವಿಗಳೂ, ಅಲೌಕಿಕವಾದ ಕಲಾ-ಕೌಶಲ್ಯದಿಂದ ಯುಕ್ತವಾದ ದೇವಾಲಯಗಳೂ ಮಾತ್ರ ನಮ್ಮ ಪ್ರಾಚೀನ ಕಾಲದ ವೈಭವವನ್ನೂ ಜಾಣ್ಮೆಯನ್ನೂ ಸಂಪತ್ತಿಯನ್ನೂ ಆ ಜಗತ್ತಿಗೆಲ್ಲ ಪ್ರದರ್ಶಿಸುತ್ತ ಮಳೆ-ಗಾಳಿಗಳ ಆಘಾತಗಳಿಗೆ ಮೈಗೊಟ್ಟು ಯುಗಾಂತ್ಯದ ವರೆಗೆ ನಿಲ್ಲುವವದರಲ್ಲೇನೂ ಸಂದೇಹವಿಲ್ಲ.

ಆರನೆಯ ಸಾಧನವಾವುದೆಂದರೆ— ವಾಙ್ಮಯ. ತಾಳೆಯೋಲಿಗಳನ್ನೇ ಆಗಿನ ಕಾಲಕ್ಕೆ ಬರಹಕ್ಕೆ ಬಳಸುತ್ತಿದ್ದುದರಿಂದ ನಮ್ಮ ವಾಙ್ಮಯವೆಲ್ಲವೂ ತಾಳೆಯೋಲೆಗಳಲ್ಲಿ ಅಡಕವಾಗಿದೆ. ಆದರೆ ಆ ತಾಳೆಯೋಲೆಗಳು ಈಗ ದುರ್ಲಭವಾಗಿವೆ. ತಮ್ಮ ವಾಙ್ಮಯುವನ್ನು ಸಮೃದ್ಧಿಪಡಿಸಬೇಕೆಂದು ಕುತೂಹಲವುಳ್ಳವರಾದ ಪಕ್ಷಕ್ಕೆ ಕನ್ನಡಿಗರು ಮೊದಲು ಆ ಹಳೆಯ ತಾಳೆಯೋಲೆಗಳನ್ನು ಗೆದ್ದಲು ಹುಳಗಳ ಬಾಯಿಯಿಂದ ಬದುಕಿಸಬೇಕು. ಹಿಂದಿನ ಕಾಲದ ವಾಙ್ಮಯ ಸಂಪತ್ತೆಲ್ಲವೂ ಸುದೈವದಿಂದ ನಮ್ಮ ಕೈಸೇರಿದರೆ, ಅದರ ಆಧಾರದಿಂದ ಈಗಿನ ವರೆಗೆ ನಡೆದು ಬಂದ ಕನ್ನಡ ಭಾಷೆಯ ಇತಿಹಾಸವನ್ನೂ ಅದರ ಬೆಳವಣಿಗೆಯನ್ನೂ ಗೊತ್ತುಹಿಡಿಯಬಹುದು. ಅಲ್ಲದೆ, ಅದು ರಾಜಕೀಯ ಇತಿಹಾಸ ಸಂಶೋಧನಕ್ಕೂ ನೆರವಾಗುವುದು. 'ಕವಿರಾಜಮಾರ್ಗ', 'ರಾಜಶೇಖರ ವಿಳಾಸ', 'ಚೆನ್ನಬಸವಪುರಾಣ' ಮುಂತಾದ ಗ್ರಂಥಗಳನ್ನು ಇತಿಹಾಸ ದೃಷ್ಟಿಯಿಂದ ಓದಲಿಕ್ಕೆ ಕನ್ನಡಿಗರು ಮೊದಲು ಮಾಡಬೇಕು. ಆದರೆ ಆ ದೃಷ್ಟಿಯಿಂದ ಕನ್ನಡ ವಾಙ್ಮಯವನ್ನು ವ್ಯಾಸಂಗಮಾಡುವ ಇತಿಹಾಸ ಭಕ್ತರು ನಮ್ಮಲ್ಲಿ ಎಷ್ಟು ಜನರಿದ್ದಾರೆ ? ನಮ್ಮ ಪರಮ ಮಿತ್ರರಾದ ರಾ. ರಾಜಪುರೋಹಿತರವರು ಪಂಢರಪುರದ ಇತಿಹಾಸವನ್ನು ಈ ಕನ್ನಡ ವಾಙ್ಮಯದ ಆಧಾರದಿಂದಲೇ ತೆಗೆದಿರುವರು. ಬಿಲ್ಹಣನ 'ವಿಕ್ರಮಾಂಕದೇವ ಚರಿತ' ವೆಂಬ ಸಂಸ್ಕೃತ ಕಾವ್ಯವು ಕರ್ನಾಟಕ ಚಕ್ರವರ್ತಿಯಾದ ಚಾಲುಕ್ಯ ವಿಕ್ರಮನ ಜೀವನ ಚರಿತ್ರವೇ ಆಗಿರುವುದು. ಸಾರಾಂಶ— ನಮ್ಮ ವಾಙ್ಮಯವು ಇತಿಹಾಸದ ಒಂದು ದೊಡ್ಡ ಬೊಕ್ಕಸವೇ ಆಗಿದೆ. ಆ ಬೊಕ್ಕಸದ ಮುದ್ರೆಯನ್ನು ತೆಗೆದು ಅದರೊಳಗಿನ ಠುವ ವಸ್ತುಗಳನ್ನು ಪರೀಕ್ಷಿಸದಿದ್ದರೆ ಅದಾರ ತಪ್ಪು ?

ಏಳನೆಯ ಮಹತ್ವದ ಸಾಧನವಾವುದೆಂದರೆ— ಪರದೇಶೀಯ ಪ್ರವಾಸಿಕರು ಬರೆದಿಟ್ಟ ಬರಹಗಳು. ಟಾಲೇಮಿ, ಹುಯೆನತ್ಸಾಂಗ, ಫಾಹೈನ, ಅಲಬುರ್ನಿ, ಇಬ್ನಬತೂತ, ಮಾರ್ಕೋಪೋಲೋ, ಅಬ್ದುಲ ರಜಾಕ ಮುಂತಾದವರ ಉಲ್ಲೇಖಗಳಿಂದ ನಮ್ಮ ಇತಿಹಾಸ ಜ್ಞಾನಕ್ಕೆ ಹೆಚ್ಚು ಬೆಳಕು ದೊರೆಯುವದು. ಚೀನ ದೇಶದ ಪ್ರವಾಸಿಯಾದ ಹುಯೆನತ್ಸಾಂಗನು ಬರೆದ ಬಾದಾಮಿಯ ೨ ನೆಯ ಪುಲಿಕೇಶಿಯ ವರ್ಣನೆಯನ್ನೂ, ಅಬ್ದುಲರಜಾಕನು ಬರೆದ ವಿಜಯನಗರದ ವರ್ಣನೆಯನ್ನೂ ಓದಿದರೆ ನಾವು ಈ ಪುಸ್ತಕದಲ್ಲಿ ಅಡಿಗಡಿಗೆ ಹೇಳಿರುವ ನಮ್ಮ ವೈಭವವಲ್ಲಿ ಅತಿಶಯೋಕ್ತಿಯಿಲ್ಲೆಂಬುದೂ ನಮ್ಮ ಅಭಿಮಾನವು ಪಕ್ಷಪಾತ ಮೂಲಕವಾದುದಲ್ಲವೆಂಬುದೂ ಮನದಟ್ಟಾಗುವದು.

ಕಡಿಮೆ ಇಲ್ಲದ ಎಂಟನೆಯ ಸಾಧನವಾವುದೆಂದರೆ— ಪರಂಪರಾಗತವಾದ ಕಥೆಗಳು, ಸ್ಥಳಮಹಾತ್ಮ್ಯಗಳು, ಆಚಾರಗಳು ಮತ್ತು ಧಾರ್ಮಿಕ ವಿಚಾರಗಳು. ಇವುಗಳ ಮಹತ್ವವು ಇಷ್ಟಿಷ್ಟೆಂದು ಹೇಳಿಕ್ಕಾಗದು. ಪ್ರತಿಯೊಂದು ಪ್ರಸಿದ್ಧವಾದ ಸ್ಥಳಕ್ಕೆ 'ಸ್ಥಳ ಪುರಾಣ' ವೊಂದು ಇದ್ದೇ ಇರುತ್ತದೆ. ಅದನ್ನು ಐತಿಹಾಸ ದೃಷ್ಟಿಯಿಂದ ಶೋಧಿಸಿದರೆ ಆ ಊರಿನ ಉತ್ಪತ್ತಿ, ಅದರ ಹಳೆಯ ಹೆಸರು ಮುಂತಾದವುಗಳು ಗೊತ್ತಾಗುವವು. ಕಥೆಗಳನ್ನೂ ಆಚಾರ-ವಿಚಾರಗಳನ್ನೂ ಪರೀಕ್ಷಿಸಿ, ಅವುಗಳಲ್ಲಿರುವ ಹೊಟ್ಟನ್ನು ತೂರಿಹೊಡೆದರೆ, ಒಳಗೆ ಒಂದೆರಡು ಗಟ್ಟಿ ಕಾಳುಗಳು ಹೊರಟೇ ಹೊರಡುವವು.

ಒಂಭತ್ತನೆಯ ಮಹತ್ವದ ಸಾಧನವೆಂದರೆ ಭೂಮಿಯ ಅಗೆತ. ಚಂದ್ರವಳ್ಳಿ, ಹೆರಕಲ್ಲ, ಮಾಸ್ಕಿ ಮುಂತಾದ ಅನೇಕ ಸ್ಥಳಗಳಲ್ಲಿ ಐತಿಹಾಸಿಕ ಸಾಮಗ್ರಿಗಳು, ಶಿಲಾಯುಗ-ಲೋಹಯುಗಗಳ ಕುರುಹುಗಳು ದೊರೆಯುತ್ತವೆ.

ಸಾರಾಂಶ— ಈ ಸಾಧನ ಸಾಮಗ್ರಿಯನ್ನೆಲ್ಲ ಕೂಡಿ ಹಾಕುವದೇ ಇತಿಹಾಸ ಸಂಶೋಧಕರ ಮೊದಲನೆಯ ಕೆಲಸವು. ಈ ಸಾಧನ ಸಾಮಗ್ರಿಯನ್ನೆಲ್ಲ ಕಲೆಹಾಕಿ ಕಡೆದರೆ ಬೆಣ್ಣೆ ಹೊರಡದೆ ಇರುವುದೇ ? ಆದರೆ ಮನೆಯ ಕೆಲಸವನ್ನು ಬದಿಗರಿಸಿ, ಅದನ್ನು ಕಣ್ತೆರೆದು ನೋಡುವವ-

ರಾರು ? ಇದು ರುಕ್ಷವಾದ ವಿಷಯವೆಂದು ಕಲಿತವರೂ ಇದನ್ನು ಹೇಳು ಯುತ್ತಾರೆ; ಏಕೆಂದರೆ, ಇದರಿಂದ ಹಣ ಪ್ರಾಪ್ತಿಯಿಲ್ಲ; ಗೌರವ ಪ್ರಾಪ್ತಿಯಿಲ್ಲ; ಅಧಿಕಾರ ಪ್ರಾಪ್ತಿಯಿಲ್ಲ. ಮೇಲಾಗಿ ಶಾಲೆಯಲ್ಲಿ ಈಗ ಕಲಿಯುವ ವಿದ್ಯೆಯು ಇಲ್ಲಿ ಬಹಳ ಮಟ್ಟಿಗೆ ಉಪಯೋಗವಾಗುವದಿಲ್ಲ. ಇಷ್ಟೇ ಅಲ್ಲ; ಈಗ ನಮಗೆ ಶಾಲೆಯಲ್ಲಿ ಸಿಕ್ಕುವ ವಿದ್ಯೆಯಿಂದ ಸಂಶೋಧನಕ್ಕೆ ದಾರಿ ಯಾವುದೆಂಬುದೂ ತಿಳಿಯುವದಿಲ್ಲ. ಈ ಬಗೆ-ಯಾಗಿ ಈ ವಿಷಯವು ರುಕ್ಷವಾಗಿರುವದಲ್ಲದೆ ಕಠಿಣವೂ ಆಗಿದೆ. ಅನೇಕ ಸಾಮಗ್ರಿಗಳನ್ನು ಓದಿ, ಅಣಿಮಾಡಿಟ್ಟುಕೊಂಡರೂ ಒಮ್ಮೊಮ್ಮೆ ಇತಿಹಾಸದ ಒಂದು ಕಣವು ಕೂಡ ಕಾಣದೆ ಹೋಗಬಹುದು ! ಹೀಗೆ ಎಲ್ಲೆಡೆಯಲ್ಲಿಯೂ ನಿರಾಶೆಯೇ ಬಲಿತುಕೊಂಡಿರುವ ಇಂತಹ ಸ್ಥಿತಿಯಲ್ಲಿ ಕೇವಲ ದೇಶಭಕ್ತಿಯಿಂದ ಪ್ರೇರಿತರಾಗಿ, ಯಾವದೊಂದು ಮೂರ್ತ ಪರಿಣಾಮವನ್ನು ಪಡೆಯುವೆವೆಂಬ ಆಶೆ ಹಿಡಿಯದೇ ದುಡಿಯುವಂಥವರೇ ಮುಂದಾಳುಗಳಾಗಿ ಇತಿಹಾಸ ಮಂದಿರಕ್ಕೆ ತಳಹದಿಯನ್ನು ಹಾಕಲಿಕ್ಕೇ ಬೇಕು. ಅದರ ಮೇಲೆ ಕಟ್ಟಡವನ್ನೇರಿಸುವ ಕಾರ್ಯವನ್ನು ಮುಂದೆ ಯಾರಾದರೂ ಕೈಕೊಳ್ಳಬಹುದು. ಈ ತಳ-ಹದಿಯನ್ನು ಹಾಕುವ ಕಾರ್ಯದ ಮಹತ್ವವು ಎಂದರೆ ಸಂಶೋಧನ ಕಾರ್ಯದ ಮಹತ್ವವು-ಸಾಮಾನ್ಯ ಜನರಿಗೆ ಬೇಗನೆ ತಿಳಿಯುವದಿಲ್ಲ-ವಾದುದರಿಂದ, ಬಲ್ಲವರು ಅದನ್ನು ತಿಳಿಯ ಹೇಳಿ ಕಾರ್ಯಕ್ಕೆ ಪ್ರಾರಂಭಿಸಬೇಕು. ಈಗಿನ ಸಂಶೋಧಕರ ಅದೃಶ್ಯವಾದ ಅಸ್ತಿವಾರದ ಮೇಲೆಯೇ ಮುಂದೆ ಭವ್ಯವಾಗಿ ಕಾಣಿಸುವ ಸುಂದರವಾದ ಮಂದಿರವು ಕಾಣತಕ್ಕುದಿರುತ್ತದೆ. ಸೇತುಬಂಧನದ ಕಾರ್ಯವೇನು ಚಿಕ್ಕದೋ ? ಆದರೆ ರಾಮಭಕ್ತಿಯಿಂದ ಪ್ರೇರಿತವಾದ ಅಳಿಲುಗಳು ಒಂದೊಂದೇ ಮಳಲ ಕಣವನ್ನು ತಂದು ಹಾಕಿ, ಆ ಪ್ರಚಂಡ ಕಾರ್ಯಕ್ಕೆ ನೆರವಾಗಲಿಲ್ಲವೆ ? ಆ 'ಅಳಿಲಭಕ್ತಿ' ಯನ್ನು ನೆನಪಿಗೆ ತಂದುಕೊಂಡು, ಸಾವಿರಾರು ಇತಿಹಾಸ ಸಂಶೋಧಕರು ನಿರಪೇಕ್ಷ ಬುದ್ಧಿಯಿಂದಲೂ ಯಾವದೊಂದು ಮೂರ್ತ ಪರಿಣಾಮವನ್ನು ತಾವೇ ನೋಡಬೇಕೆಂದು ಅಪೇಕ್ಷಿಸದೆಯೂ ಹೆಣಗಿದರೆ ಮಾತ್ರ ಭೂತಕಾಲ ಮತ್ತು ವರ್ತಮಾನ ಇವುಗಳ ನಡುವಿನ ಈ

ಸೇತುಬಂಧನವು ಸಿದ್ಧವಾಗಿ ಅದರ ಮೇಲಿಂದ ಭವಿಷ್ಯತ್ಕಾಲಕ್ಕೆ ಹೋ
ವದಕ್ಕೂ ನಮಗೆ ಮಾರ್ಗವಾಗುವದು. ಸಾರಾಂಶ— ಇತಿಹಾಸ ಸಂಶೋ
ಧನ ಕಾರ್ಯವು ಅವಸರದಿಂದಾಗತಕ್ಕ ಕಾರ್ಯವಲ್ಲ. ಇದು ಸ
ಧಾನದಿಂದಲೂ, ಪ್ರಯತ್ನ ಸಾತತ್ಯದಿಂದಲೂ, ಕ್ರಮದಿಂದಲೂ ಸ
ವಾಗತಕ್ಕ ಕಾರ್ಯವು. ಹಿಂದೆ ಹೇಳಿದಂತೆ, ಇಲ್ಲಿ ಅಧಿಕಾರಲೋ
ಪರಿಗೆ ಆಸ್ಪದವಿರುವದಿಲ್ಲ; ಹಣದಾಶೆಯುವರಿಗೆ ಆಸರವಿಲ್ಲ; ಕೀ
ಕಾಂಕ್ಷಿಗಳಿಗೆ ಇಂಬಿಲ್ಲ; ಇಂಥವರು ಇತ್ತ ಇಣಿಕಿ ಸಹ ನೋಡಕೂಡ
ಯಾರಿಗೆ ಕರುಳು ಕರಗಿದರೂ, ನೆತ್ತರೋಣಗಿದರೂ, ಮೈಮುರಿದ
ಹಿಂಜರಿಯದೆ ದುಡಿಯುವಷ್ಟು ಅಪಾರವಾದ ಉತ್ಸಾಹ ಶಕ್ತಿಯು
ವದೋ, ಯಾರು ರಾಷ್ಟ್ರದ ಸೇವೆ ಮಾಡುವೆವೆಂಬುದೊಂದೇ ಸಂಕೇ
ದಿಂದ ಕೈ ಹಾಕುವರೋ ಅವರು ಮಾತ್ರ ಈ ಕ್ಷೇತ್ರದಲ್ಲಿ ಕಾಲಿಡ
ಅರ್ಹರು. ರಾಷ್ಟ್ರದಲ್ಲಿ ಈಗ ನವಜೀವನವು ಸಂಚರಿಸುತ್ತಿರುವದರಿ
ಇಂಥ ಸ್ವಾರ್ಥತ್ಯಾಗಿಗಳ ಸಂಖ್ಯೆಯು ಕರ್ನಾಟಕದೊಳಗೆ ನೂಮ
ಯಾಗಿ ಬೇಗನೆ ಬೆಳೆಯಲೆಂದು ಹರಕೆಯಿಟ್ಟು ಮುಂದೆ ಸಾಗುವೆವು.

---

## ೬ ನೆಯ ಪ್ರಕರಣ

## ಚಾಲುಕ್ಯರ ಪೂರ್ವದ ಕರ್ನಾಟಕದ ಇತಿಹಾಸ

### ( ೫ ನೆಯ ಶತಕದ ವರೆಗೆ!)

ನಾಲ್ಕನೆಯ ಪ್ರಕರಣದಲ್ಲಿ ಕರ್ನಾಟಕದ ಇತಿಹಾಸದ ಮಹಿ-ಮಾತಿಶಯವನ್ನು ವರ್ಣಿಸಿ, ಐದನೆಯದರಲ್ಲಿ ಕರ್ನಾಟಕ ಇತಿಹಾಸದ ಸಾಧನ ಸಂಪತ್ತಿಯನ್ನು ಹೇಳರುವೆವಷ್ಟೆ. ಆದರೆ ಈ ಮಹಿಮಾತಿ-ಶಯವು ಚೆನ್ನಾಗಿ ಮನಸ್ಸಿನಲ್ಲಿ ನಟ್ಟು, ಆ ಸಾಧನ ಸಂಪತ್ತಿಯನ್ನು ಯೋಗ್ಯವಾಗಿ ಉಪಯೋಗ ಮಾಡಿಕೊಳ್ಳುವ ಸಾಮರ್ಥ್ಯವು ನಮ್ಮಲ್ಲಿ ಬರಬೇಕಾದರೆ, ನಾವು ಕರ್ನಾಟಕದ ಸಂಕ್ಷಿಪ್ತ ಇತಿಹಾಸವನ್ನು ಈಗ ಗೊತ್ತಿದ್ದ ಮಟ್ಟಿಗೆ ಅರಿತುಕೊಳ್ಳುವದು ಅವಶ್ಯವಾಗಿದೆ. ಈಗ ನಮ್ಮ ಲ್ಲಿಯ ಸುಶಿಕ್ಷಿತರಿಗೂ ಕೂಡ, ಕರ್ನಾಟಕದ ಪ್ರಸಿದ್ಧ ಅರಸರು ಯಾರು, ಅವರು ಯಾವಾಗ ಆಳಿದರು, ಸಾರ್ವಭೌಮ ರಾಜರ ಮನೆ ತನಗಳು ಯಾವವು. ಮಾಂಡಲಿಕರ ಮನೆತನಗಳು ಯಾವವು ಎಂಬ ಕಲ್ಪನೆಯು ಕೂಡ ಚೆನ್ನಾಗಿ ತೋರಿರುವದಿಲ್ಲ. ಚಾಲುಕ್ಯ ವಿಕ್ರಮ ನೆಂದರೆ ಪ್ರಸಿದ್ಧ ಶಕಕರ್ತನಾದ ಉತ್ತರ ಪ್ರಾಂತದ ವಿಕ್ರಮಾದಿತ್ಯ ನೆಂದೇ ಇಂದಿಗೂ ಅನೇಕರ ಭಾವನೆ. ಪುಲಿಕೇಶಿಯೆಂಬುದು ಅರಸನ ಹೆಸರೋ, ಅರಸುಮನೆತನದ ಹೆಸರೋ, ಇದು ಕೂಡ ಗೊತ್ತಿರುವ ದಿಲ್ಲ. ಚಾಲುಕ್ಯರು ಬಾದಾಮಿಯಲ್ಲಿ ಆಳಿದರೋ, ಲಕ್ಷ್ಮೇಶ್ವರದಲ್ಲಿ ಆಳಿ ದರೋ ಎಂಬುದನ್ನು ಅನೇಕರು ಅರಿಯರು * ಹೀಗೆ ನಿಜಸ್ಥಿತಿಯಿರು-

---

* ಕರ್ನಾಟಕ ಕಾಲೇಜ ಅಸೋಸಿಯೇಶನ್ನದ ವತಿಯಿಂದ ಗವ್ಹರ್ನರ ಸಾಹೇಬ ರಿಗೆ ನಿವೇದಿಸಿದ ರಿಪೋರ್ಟಿನಂಥ ಮಹತ್ವದ ಲೇಖದಲ್ಲಿ ಸಹ ಈ ಬಗೆಯ ಭಯಂಕರ ವಾದ ತಪ್ಪುಗಳು ಸೇರಿದ್ದನ್ನು ನೋಡಿ ಯಾವ ಇತಿಹಾಸಾಭಿಮಾನಿಗೆ ವ್ಯಸನವಾಗ ಲಿಕ್ಕಿಲ್ಲ ? ಕರ್ನಾಟಕ ಇತಿಹಾಸಮಂಡಲದ ಅವಶ್ಯಕತೆಯ ಬಗ್ಗೆ ಇದಕ್ಕಿಂತ ಹೆಚ್ಚಿನ ಆಧಾರವು ಬೇಡ.

ವದರಿಂದ, ಅಲ್ಲೊಂದು ಇಲ್ಲೊಂದು ಹರಡಿರುವ ಸಾಧನ ಸಾಮಗ್ರಿ
ಯನ್ನು ತಲೆಯಲ್ಲಿ ಹಾಕಿಕೊಳ್ಳುವದು ಸಾಮಾನ್ಯ ಜನರಿಗೆ ಕಠಿಣ ಕಾರ್ಯ
ವಾಗಿರುತ್ತದೆಂಬುದು ನನ್ನ ಅನುಭವಕ್ಕೆ ಬಂದಿದೆ. ಆದುದರಿಂದ
ಮೊದಲಿನಿಂದ ಕೊನೆಯ ವರೆಗೆ ಕರ್ನಾಟಕದ ಇತಿಹಾಸದ ಮಹತ್ವದ
ಸಂಗತಿಗಳನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿಬಿಟ್ಟರೆ ಹೊಸದಾಗಿ ದೊರೆ
ಸಾಧನಗಳ ಪ್ರಯೋಜನ ಮಾಡಿಕೊಳ್ಳುವದಕ್ಕೆ ಅನುಕೂಲವಾಗುತ್ತದೆ
ಅರಸರ ಆಳಿಕೆಗಳ ಕ್ರಮವಾದ ಇತಿಹಾಸವನ್ನು ಹೇಳುವದೇ ಈ
ನಡೆದು ಬಂದ ಪದ್ಧತಿ. ಅದಕ್ಕನುಸಾರವಾಗಿ ಸಾಮಾನ್ಯ ವಾಚಕರು
ಕೂಡ ನೆನಪಿನಲ್ಲಿಡಬಹುದಾದ ಮತ್ತು ಪ್ರತಿಯೊಬ್ಬ ಕನ್ನಡಿಗನೂ ಅ
ಶ್ಯವಾಗಿ ಕಲಿಯತಕ್ಕ ಸಂಗತಿಗಳನ್ನಷ್ಟೇ ಹೇಳಿ, ಅತಿ ಪ್ರಾಚೀನ ಕಾ
ದಿಂದ ಕೊನೆಯ ವರೆಗಿನ ಇತಿಹಾಸ ಕ್ಷೇತ್ರದಲ್ಲಿ ನಮ್ಮ ವಾಚಕರನ್ನು
'ಮೋಟಾರ' ವೇಗದಿಂದ ಅಡ್ಡಾಡಿಸಿಕೊಂಡು ಬರುತ್ತೇವೆ.

ರಾಮಾಯಣ ಕಾಲದಲ್ಲಿ ನರ್ಮದೆಯ ದಕ್ಷಿಣಕ್ಕೆ ದಂಡಕಾರಣ್ಯ
ವೆಂಬ ಮಹಾ ಕಾಂತಾರವಿತ್ತು. ಕರ್ನಾಟಕದಲ್ಲಿ ಆಗ ಬೆಳೆದ ಅಡವಿ
ಮತಂಗವನವೆಂದು ಹೆಸರು. ಅದರಲ್ಲಿ ಮತಂಗ, ಗಾಲವ, ಜಮದಗ್ನಿ
ಮುಂತಾದ ಋಷಿಗಳು ತಪಶ್ಚರ್ಯ ಮಾಡುತ್ತಿದ್ದರು. ಆದರೆ ಆ ಕಾ
ದಲ್ಲಿ ಕೂಡ ಸುಗ್ರೀವನ ರಾಜಧಾನಿಯಾದ ಕಿಷ್ಕಿಂಧಾ ಪಟ್ಟಣವು ಈ
ಭರಾಟಿಯಲ್ಲಿ ಇದ್ದೇ ಇತ್ತು. ಈಗಿನ ಹಂಪೆ ಅಥವಾ ಪಂಪಾ ಪಟ್ಟಣವೇ ಆ
ಕಿಷ್ಕಿಂಧೆ. ಈಗಿನಂತೆ ಆಗಲೂ ಕೂಡ ಅದೊಂದು ಕ್ಷೇತ್ರವೆಂದೆಣಿಸಲ್ಪ
ಡುತ್ತಿತ್ತು. ವಿಜಯನಗರವೆಂದರೂ ಇದೇ ! ಸಾರಾಂಶ— ಈ ಪಟ್ಟ
ಣವು ಕರ್ನಾಟಕದಲ್ಲಿ ಅತಿ ಪ್ರಾಚೀನ ಕಾಲದಿಂದ ಪ್ರಸಿದ್ಧವು. ಕರ್ನಾ
ಟಕದ ವೈಭವದ ಸಮಾಧಿಯೂ ಇಲ್ಲಿಯೇ ಆಯಿತು. ಯಾಕೆಂದರೆ
ಕನ್ನಡ ನಾಡಿನ ಕೊನೆಯ ಅರಸರಾದ ವಿಜಯನಗರದ ರಾಜರು ಇದೇ
ಪಟ್ಟಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿ ಆಳಿದರು. ೧೫೬೫
ರಲ್ಲಿ ತಾಳಿಕೋಟಿ ಕಾಳಗದಲ್ಲಿ ( ಈ ಕಾಳಗದ ನಿಜವಾದ ಹೆಸರು ರಾಕ್ಷಸ
ತಂಗಡಿಗಿ ಕಾಳಗ. ಏಕೆಂದರೆ, ರಾಕ್ಷಸ-ತಂಗಡಗಿ ಊರುಗಳ ಹತ್ತರ
ಆ ಕಾಳಗವಾಗಿದೆ. ) ಅವರು ಸೋತುದರಿಂದ ಅವರ ವೈಭವವೆಲ್ಲವ

ಮಣ್ಣುಪಾಲಾಯಿತು. ಇರಲಿ, ಗೋಕರ್ಣದ ಮಹಾಬಳೇಶ್ವರ ಲಿಂಗವು ರಾವಣನಿಂದ ಸ್ಥಾಪಿತವಾಯಿತೆಂದು ಕಥೆಯುಂಟು. ಈ ದೇವಸ್ಥಾನದ ಉಲ್ಲೇಖವು ರಾಮಾಯಣ ಕಾಲದಲ್ಲಿಯೂ ಇರುತ್ತದೆ. ಇದು ರಾಮಾ-ಯಣ ಕಾಲದ ಸ್ಥಿತಿಯಾಯಿತು.

ಮಹಾಭಾರತದ ಕಾಲದೊಳಗೆ ಕರ್ನಾಟಕದೊಳಗೆ ಹಲಕೆಲವು ರಾಜ್ಯಗಳು ನೆಲೆಗೊಂಡಿದ್ದವು. ಕರವೀರಪುರ (ಕೊಲ್ಹಾಪುರ) ದಲ್ಲಿ ಶೃಗಾಲ ವಾಸುದೇವನೆಂಬ ಅರಸನು ಆಳುತ್ತಿದ್ದನು. ಕೃಷ್ಣನು ಅವನನ್ನು ಕೊಂದು ಅವನ ರಾಜ್ಯಕ್ಕೆ ಸೇರಿದ ಗೋಮಾಂತಕ ಪ್ರಾಂತವನ್ನು ತನ್ನ ಕೈವಶಮಾಡಿಕೊಂಡನು. ಮತ್ಸ್ಯಪುರದಲ್ಲಿ ವಿರಾಟನೆಂಬ ರಾಜನು ರಾಜ್ಯಮಾಡುತ್ತಿದ್ದನು. ಶಾಲಿವಾಹನ ಶತಕದ ೧೧ನೆಯ ಶತಮಾನದಲ್ಲಿಯೂ, ಹಾನಗಲ್ಲಿಗೆ ವಿರಾಟಕೋಟೆಯೆಂಬ ಹೆಸರಿತ್ತೆಂದು ಆ ಕಾಲದ ಲಿಪಿಗಳಿಂದ ತಿಳಿಯುತ್ತದೆ. ಹಾನಗಲ್ಲಿನಲ್ಲಿ ಹಳೇ ಕೋಟೆಯನ್ನೂ ಕೀಚಕನ ಗರಡೀಮನೆಯನ್ನೂ ಜನರು ಈಗಲೂ ತೋರಿಸುತ್ತಾರೆ. ವಿರಾಟ ರಾಜ್ಯದ ದಕ್ಷಿಣಕ್ಕೆ ಅದಕ್ಕೆ ಹೊಂದಿ, ಸುಶರ್ಮನೆಂಬ ಅರಸನ ತ್ರಿಗರ್ತ ದೇಶದ ರಾಜ್ಯವಿತ್ತೆಂದು ವಿರಾಟಪರ್ವದಲ್ಲಿ ಹೇಳಿದೆ. ತ್ರಿಗರ್ತವೆಂದರೆ ಮೂರು ದಿಕ್ಕುಗಳಲ್ಲಿ ತಗ್ಗುಳ್ಳ ಸೀಮೆಯೆಂಬರ್ಥವು. ಈ ವರ್ಣನೆಯು ಮೈಸೂರ ಸೀಮೆಗೆ ಸರಿಹೊಂದುತ್ತದೆ. ಒಟ್ಟಿಗೆ ಕೌರವ-ಪಾಂಡವರ ಕಾಲದಲ್ಲಿ ಗೋಮಂತಕ, ಮತ್ಸ್ಯ, ತ್ರಿಗರ್ತ ಈ ಮೂರೂ ರಾಷ್ಟ್ರಗಳೂ ಕರ್ನಾಟಕದಲ್ಲಿದ್ದುವೆಂದು ಊಹೆಯಾಗುತ್ತದೆ. **ಆನೆಗೊಂದಿಯೆಂಬುದೇ ಮಹಾಭಾರತದಲ್ಲಿಯ ಉಪಪ್ಲಾವ.** ಮಹಾಭಾರತದ ಭೀಷ್ಮಪರ್ವದಲ್ಲಿ ಕರ್ನಾಟಕದ ಹೆಸರು ಬಂದಿದೆ.

ಕರ್ನಾಟಕ ಮಹಿಷಕಾ ವಿಕಲ್ಪಾ ಮೂಷಕಾಸ್ತಥಾ |
ಝಿಲ್ಲಿಕಾಃ ಕುಂತಲಾಶ್ಚೈವ ಸೌಹೃವಾ ನಭಕಾನನಾಃ ||

ಭೀಷ್ಮಪರ್ವ ೯-೦೯

ಪಾಂಡವರ ಕಾಲದಿಂದ ಶಾಲಿವಾಹನ ಶತಕ ಆರಂಭದ ವರೆಗೆ ಕರ್ನಾಟಕದ ಇತಿಹಾಸವು ತಿಳದಿಲ್ಲ, ಈ ಅವಧಿಯಲ್ಲಿ ಕರ್ನಾಟಕಕ್ಕೆ ಕುಂತಳ, ನಾಟ, ಲಾಟ ಮುಂತಾದ ಹೆಸರು ಪ್ರಾಪ್ತವಾಗಿದ್ದುವು.

ಕುಂತಳ ದೇಶದಲ್ಲಿ ಚಂದ್ರಹಾಸನೆಂಬ ಅರಸನು ಆಳಿದ ಕಥೆಯು ಪ್ರ
ಪ್ರಸಿದ್ಧವಾಗಿದೆ. ಈ ಅವಧಿಯಲ್ಲಿಯೇ ಇಜಿಪ್ತ ಗ್ರೀಸ ದೇಶ
ವ್ಯಾಪಾರಸ್ಥರು ಕರ್ನಾಟಕಕ್ಕೆ ಆಗಾಗ್ಗೆ ಬರುತ್ತಿದ್ದರೆಂದು ತೋ
ತ್ತದೆ. ಇಜಿಪ್ತ ದೇಶದಲ್ಲಿ 'ಟಾಲೇಮಿ' ಎಂಬೊಬ್ಬ ಗ್ರಂಥಕರ್ತ
ಕ್ರಿ. ಶ. ೧೫೦ನೆಯ ವರ್ಷದಲ್ಲಿ ಇದ್ದನು. ಅವನು ಆ ಕಾಲ
ವ್ಯಾಪಾರಕ್ಕೋಸ್ಕರ ಹಿಂದುಸ್ತಾನದ ಪಶ್ಚಿಮ ಸಮುದ್ರ ತೀರಕ್ಕೆ ಬರು
ತ್ತಿದ್ದ ವರ್ತಕರನ್ನು ಕೇಳಿ 'ಆರ್ಯಕ' ಎಂಬ ದೇಶದೊಳಗಿನ ೫ ಗ್ರಾ
ಗಳ ಹೆಸರನ್ನು ಬರೆದಿಟ್ಟಿದ್ದಾನೆ. ಅವು ಯಾವವೆಂದರೆ— 'ಬದಯ
ಮೇಯಿ', 'ಇಂಡಿ' 'ಕಲ್ಲಿಗೇರಿ', 'ಮೊದೋಗಲ್ಲ', 'ಪತರ್ಗಲಿ' ಇವು
ಕ್ರಮವಾಗಿ 'ಬಾದಾಮಿ' 'ಇಂಡೀ', 'ಕಲಕೇರಿ', 'ಮುದಗಲ್ಲು',
'ಪಟ್ಟದಕಲ್ಲು' ಮುಂತಾದ ಊರುಗಳು. ಬನವಾಸಿಯು ಹೆಸರು
ಹೊನ್ನಾವರ ಮತ್ತು ಮಿರ್ಜಾನ್ ಬಂದರಗಳ ಹೆಸರೂ ಅದರಲ್ಲಿ ಉಕ್ತ
ವಾಗಿವೆ. ಎರಡನೆಯ ಶತಮಾನದಲ್ಲಿ ಹುಟ್ಟಿದ ಅಹನಾನೂರ ಎಂಬ
ತಮಿಳು ಗ್ರಂಥದಲ್ಲಿ ಎರುವೈನಾಡಿನ ಎಂದರೆ ಮಹಿಷಮಂಡ
(ಮೈಸೂರ ದೇಶ) ದ ಅರಸನು ಪಾಂಡ್ಯರಾಜನೊಡನೆ ಯುದ್ಧವಾಡಿದಂತೆ
ಉಲ್ಲೇಖವಿದೆ. ೫ನೆಯ ಶತಮಾನದ ಆದಿ ಭಾಗದಲ್ಲಿದ್ದ ವರಾಹಮಿಹಿ
ರಾಚಾರ್ಯರ ಗ್ರಂಥದಲ್ಲಿಯೂ ಕರ್ನಾಟಕ ಎಂಬ ಶಬ್ದವು ಬಂದಿದೆ.
ಆದರೆ ಇವೆಲ್ಲವುಗಳಿಂದ ಹೆಚ್ಚಿನ ಐತಿಹಾಸಿಕ ಸಂಗತಿಗಳೇನೂ ಗೊತ್ತಾಗು
ವದಿಲ್ಲ. ಇರಲಿ.

ಹಿಂದುಸ್ತಾನದ ವಿಷಯವಾಗಿ ನಮಗೆ ಗೊತ್ತಿದ್ದ ಇತಿಹಾಸವು ನಂದ
ಚಂದ್ರಗುಪ್ತರ ಕಾಲದಿಂದ ಎಂದರೆ— ಕ್ರಿ. ಪೂ. ದಲ್ಲಿ ೪-೫ ಶತಮಾನ
ಮಾನಗಳಿಂದ ಪ್ರಾರಂಭವಾಗುತ್ತವೆಂದು ಹೇಳಬಹುದು. ಚಂದ್ರ
ಗುಪ್ತನು ಕ್ರಿ. ಪೂ. ೩೨೧ರಲ್ಲಿ ಆಳಿದನೆಂಬ ಸಂಗತಿಯೇ ಎಲ್ಲಕ್ಕೂ
ಪ್ರಾಚೀನವಾದ ಮತ್ತು ವಿಶ್ವಸನೀಯವಾದ ಐತಿಹಾಸಿಕ ಸಂಗತಿಯು.
ಹಿಂದುಸ್ತಾನದ ಪ್ರಾಚೀನ ಇತಿಹಾಸದಲ್ಲಿ ಮುಖ್ಯವಾಗಿ ಎರಡು ಭಾಗ
ಗಳನ್ನು ಮಾಡಬಹುದು. ಒಂದು ಉತ್ತರ ಹಿಂದುಸ್ತಾನದ ಎಂದರೆ
ವಿಂಧ್ಯದ ಉತ್ತರದ ಇತಿಹಾಸ, ಮತ್ತೊಂದು ದಕ್ಷಿಣ ಹಿಂದುಸ್ತಾನದ

ಅಥವಾ ದಕ್ಷಿಣಾಪಥದ ಇತಿಹಾಸ. ಇವೆರಡು ಇತಿಹಾಸಗಳು ಭಿನ್ನ ಭಿನ್ನ ವಿರುತ್ತವೆ. ಇವೆರಡರ ಸುಧಾರಣೆಯು ಬೇರೆ. ಇವೆರಡಕ್ಕೂ ತಮ್ಮ ತಮ್ಮ ವಿಶಿಷ್ಟ ಸಂಸ್ಕೃತಿಯಿರುತ್ತದೆ. ಆದರೂ ದಕ್ಷಿಣಾಪಥದ ಇತಿಹಾಸದ ಸಂಬಂಧವು ನಡುನಡುವೆ ಉತ್ತರ ಹಿಂದುಸ್ತಾನದ ಕೂಡ ಬಂದಿರುವದ ರಿಂದ ನಾವು ಉತ್ತರ ಹಿಂದುಸ್ತಾನದಲ್ಲಿ ಯಾವ ಯಾವ ರಾಜವಂಶಗಳು ಆಗಿಹೋದವೆಂಬುದನ್ನು ಸ್ವಲ್ಪದರಲ್ಲಿ ಹೇಳುತ್ತೇವೆ.

ನಂದನೆಂಬ ಅರಸನನ್ನು ಸೋಲಿಸಿ ಚಂದ್ರಗುಪ್ತನು ಚಾಣಕ್ಯ ನೆಂಬವನ ಸಹಾಯದಿಂದ ರಾಜ್ಯಪದವನ್ನು ಪಡೆದು ಕ್ರಿ. ಪೂ. ೩೨೧ ರಲ್ಲಿ ಪಟ್ಟವೇರಿದ ಸಂಗತಿಯನ್ನು ಸಾಮಾನ್ಯವಾಗಿ ಎಲ್ಲರೂ ಕೇಳಿರು ವರು. ಈ ಚಂದ್ರಗುಪ್ತನು ಮೌರ್ಯವಂಶದವನು. ಈ ಮೌರ್ಯ ವಂಶವು ಮುಂದೆ ಕ್ರಿ. ಪೂರ್ವದ ೧೮೪ರ ವರೆಗೆ ಆಳಿತು. ಚಂದ್ರ-ಗುಪ್ತನ ಮೊಮ್ಮಗನೇ ಅಶೋಕನು, ಅವನು ಕ್ರಿ. ಪೂರ್ವದಲ್ಲಿ ೨೭೩ ರಿಂದ ೨೩೨ರ ವರೆಗೆ ಅಂದರೆ, ೪೧ ವರ್ಷ ಆಳಿದನು. ಇವನ ಕಾಲಕ್ಕೆ ರಾಜ್ಯವಿಸ್ತಾರವು ಅತಿಶಯ ದೊಡ್ಡದಾಗಿತ್ತು. ಉತ್ತರ ಹಿಂದುಸ್ತಾನ ವೆಲ್ಲಾ ಇವನ ವಶದಲ್ಲಿ ಇದ್ದುದಲ್ಲದೆ, ಪಶ್ಚಿಮಕ್ಕೆ ಅಫಗಾಣಿಸ್ತಾನವೂ ಇವನ ಆಧೀನದಲ್ಲಿಯೇ ಇತ್ತು. ದಕ್ಷಿಣದಲ್ಲಿ ಮೈಸೂರ ಪ್ರಾಂತದ ವರೆಗೆ ಇವನ ರಾಜ್ಯವು ಹಬ್ಬಿತ್ತು. ಈ ಹೆಸರಾದ ಅಶೋಕನ ವಂಶದ ವನಾದ ಬ್ರಹದ್ರಥನನ್ನು ಕೊಂದು ಪುಷ್ಯ ಮಿತ್ರನೆಂಬ ಅವನ ಬ್ರಾಹ್ಮಣ ಸೇನಾಪತಿಯು 'ಸುಂಗ' ವಂಶವನ್ನು ಸ್ಥಾಪಿಸಿದನು. ಈ ವಂಶವು ಕ್ರಿ. ಶ. ಪೂರ್ವದ ೧೮೪ ರಿಂದ ೭೨ ರ ವರೆಗೆ ಆಳಿತು. ಆಮೇಲೆ ಆಂಧ್ರರೆಂಬ ತೆಂಕಣಿಗರು ಅಲ್ಲಿ ಆಳುತ್ತಿದ್ದರು. ಇವರು ಕ್ರಿ. ಶಕದ ಅನಂತರ ೩ ನೆಯ ಶತಮಾನದಲ್ಲಿ ಮಾಯವಾದರು. ಈ ಅವಧಿಯಲ್ಲಿಯೇ ಪೇಶಾವರದಲ್ಲಿ ಕನಿಷ್ಕನೆಂಬ ಬಲಾಢ್ಯ ಅರಸನು ಕ್ರಿ. ಶ. ೧೨೩ ರ ವರೆಗೆ ಆಳಿದನು. ಮುಂದೆ ಉತ್ತರದಲ್ಲಿ ಚಂದ್ರ ಗುಪ್ತನೆಂಬವನು ೩೨೦ ನೆಯ ಇಸ್ವಿಯಲ್ಲಿ ಗುಪ್ತ ವಂಶವನ್ನು ಸ್ಥಾಪಿಸಿದನು. ಈ ಗುಪ್ತ ವಂಶದ ಸಮುದ್ರಗುಪ್ತನೆಂಬವನು ಅತ್ಯಂತ ಪರಾಕ್ರಮಿಯು. ಇವನನ್ನು ಹಿಂದುಸ್ತಾನದ ನೆಪೋಲಿಯನ್ನನೆಂದು

ಹೇಳುತ್ತಾರೆ. ಅವನು ೩೭೫ರಲ್ಲಿ ಮರಣ ಹೊಂದಿದನು. ಈ ಗುಪ್ತ ವಂಶವು ಉತ್ತರದಲ್ಲಿ ೪೮೦ನೆಯ ಇಸ್ವಿಯ ವರೆಗೆ ಪ್ರಬಲವಾಗಿತ್ತು. ಈ ಗುಪ್ತ ವಂಶವು ಪರದೇಶೀಯರ ಹೂಣರಿಂದ ಹಾಳಾಗಿ ಮಗಧ ದೇಶ ರಾಜಕೀಯ ವರ್ಚಸ್ಸು ಹೊರಟು ಹೋಯಿತು. ಮುಂದೆ ಉತ್ತರದಲ್ಲಿ ಸಾರ್ವಭೌಮನಾದ ಅರಸನೆಂದರೆ ಕನೋಜದ ಶಿಲಾದಿತ್ಯ ಹರ್ಷವರ್ಧನನೇ. ಅವನು (ಕ್ರಿ. ಶ. ೬೦೬ರಿಂದ ೬೪೮ ರ ವರೆಗೆ ಆಳಿದನು. ಅವನನ್ನು ಕರ್ನಾಟಕದ ೨ನೆಯ ಪುಲಿಕೇಶಿಯು ಸೋಲಿಸಿದಂದಿನಿಂ ಉತ್ತರ ಹಿಂದುಸ್ತಾನದ ಉಜ್ವಲ ಇತಿಹಾಸವು ಮುಗಿಯಿತು. ಉತ್ತರದಲ್ಲಿ ಮುಂದೆ ಸಾರ್ವಭೌಮರಾಗಲಿಲ್ಲ. ಇರಲಿ. ಈ ಮೇರೆಗೆ ಉತ್ತರ ಹಿಂದುಸ್ತಾನದ ವೈಭವದ ಇತಿಹಾಸವು ಕ್ರಿ. ಪೂರ್ವದ ೩೨೧ ರಿಂದ ಅಂದರೆ ಚಂದ್ರಗುಪ್ತನ ಕಾಲದಿಂದ ಕ್ರಿ, ಶ. ೬೪೨ರ ವರೆಗೆ ಅಂದರೆ— ಹರ್ಷವರ್ಧನನ ಮರಣದ ವರೆಗೆ ಸುಮಾರು ೯೦೦ ವರ್ಷ ನಡೆಯಿತೆಂದು ಹೇಳಬಹುದು.

ಈ ಪ್ರಕಾರ, ಉತ್ತರ ಹಿಂದುಸ್ತಾನದ ಇತಿಹಾಸದ ಸ್ವಲ್ಪ ಕಲ್ಪನೆಯನ್ನು ಮಾಡಿ ಕೊಟ್ಟಿರುವೆವಷ್ಟೆ. ಇನ್ನು ಈ ಇತಿಹಾಸದ ಸಂಬಂಧವು ನಮ್ಮ ಕರ್ನಾಟಕದ ಇತಿಹಾಸಕ್ಕೆ ಯಾವ ಯಾವ ಕಾಲಕ್ಕೆ ಉಂಟಾಗುತ್ತದೆಂಬುದನ್ನು ಹೇಳುತ್ತೇವೆ.

ನಂದರು ಈ ಕುಂತಳ ದೇಶವನ್ನು ಒಂದಾನೊಂದು ಕಾಲಕ್ಕೆ ಎಂದರೆ— ಕ್ರಿ. ಪೂರ್ವದ ೪ನೆಯ ಶತಮಾನದಲ್ಲಿ ಆಳಿದಂತೆ ತೋರುತ್ತದೆ. ೧೨ನೆಯ ಶತಮಾನದ ಶಿಲಾಲಿಪಿಗಳಲ್ಲಿ ನಂದರು ಕುಂತಳ ದೇಶವನ್ನು ಆಳಿದಂತೆ ಬರೆದಿರುತ್ತದೆ. ಅಶೋಕನ ಕಾಲದಲ್ಲಿ ಈ ದೇಶವು ಅವನ ವಶದಲ್ಲಿದ್ದಂತೆ ಅವನ ಲೇಖಗಳೇ ಹೇಳುತ್ತಿರುವುದರಿಂದಲೂ, ಅಶೋಕನು ಕಲಿಂಗ ದೇಶದ ಹೊರತು ಬೇರೆ ಯಾವ ಹೊಸ ದೇಶವನ್ನು ಆಕ್ರಮಿಸಲಿಲ್ಲವಾದುದರಿಂದಲೂ ಚಂದ್ರಗುಪ್ತನ ಕಾಲದಲ್ಲಿಯೇ ಈ ದೇಶವು ಅವನ ವಶವಾಯಿತೆಂದು ಊಹಿಸಲಿಕ್ಕೆ ಆಸ್ಪದವಿರುತ್ತದೆ, ಮೇಲಾಗಿ ಚಂದ್ರಗುಪ್ತನು ತನ್ನ ಗುರುವಾದ ಭದ್ರಬಾಹುವನ್ನು ಕರೆದುಕೊಂಡು ದಕ್ಷಿಣ ದೇಶಕ್ಕೆ ಬಂದಿದ್ದನೆಂದೂ

ಅವರೀರ್ವರು ಮೈಸೂರ ಪ್ರಾಂತದ ಚಂದ್ರಗಿರಿಯಲ್ಲಿ ತಪಶ್ಚರ್ಯ ಮಾಡಿ ದರೆಂದೂ ಇತ್ತ ಕಡೆಯ ಆರನೆಯ ಶತಮಾನದ ಕೆಲವು ಶಿಲಾಲಿಪಿಗ ಳಿಂದ ಗೊತ್ತಾಗಿರುವ ಸಂಗತಿಯು ಮೇಲಿನ ಊಹೆಗೆ ಮುಂದೆ ಪುಷ್ಟಿ ಯನ್ನು ಕೊಡುತ್ತದೆ. ಅಶೋಕನ ಕಾಲದಲ್ಲಂತೂ ಈ ದೇಶವು ಅವನ ಅಧೀನದಲ್ಲಿತ್ತೆಂಬುದನ್ನು ಇಲ್ಲಿ ದೊರೆಯುವ ಅವನ ಶಿಲಾಶಾಸನಗಳೇ ಹೇಳುತ್ತವೆ. ಆ ಶಾಸನಗಳು ಮೊಳಕಾಲ್ಮುರು ಟಾಲೂಕಿನಲ್ಲಿಯ ಬ್ರಹ್ಮ ಗಿರಿ ಸಿದ್ಧಾಪುರ ಮತ್ತು ಜಟಿಂಗ ರಾಮೇಶ್ವರ ಗುಡ್ಡಗಳಲ್ಲಿ ದೊರೆಯು ತ್ತವೆ. ರಾಯಚೂರ ಜಿಲ್ಲೆಯೊಳಗಿನ ಲಿಂಗಸೂರ ತಾಲೂಕ ಪೈಕಿ 'ಮುಸಗಿ' ಎಂಬಲ್ಲಿಯೂ ಒಂದು ಶಾಸನವು ಮೊನ್ನೆ ಮೊನ್ನೆ ಸಿಕ್ಕಿರುತ್ತದೆ. ಅಶೋಕನ ಕಾಲಕ್ಕೆ ಬನವಾಸಿಯಲ್ಲಿ ಕದಂಬ ಅರಸರಿದ್ದರು. ಅಶೋ ಕನು (ಕ್ರಿ. ಪೂ. ೨೫೧) ರಕ್ಷಿತನೆಂಬ ಧರ್ಮೋಪದೇಶಕನನ್ನು ಬನವಾ ಸಿಗೂ, ಮಹಾದೇವನೆಂಬವನನ್ನು ಮಹಿಷಮಂಡಲಕ್ಕೂ ಕಳುಹಿರುವು ದಾಗಿ ಆಧಾರ ದೊರೆಯುತ್ತವೆ.

ಮುಂದೆ ನಾಲ್ಕನೆಯ ಶತಮಾನದಲ್ಲಿ ಗುಪ್ತವಂಶದ ಸಮುದ್ರಗುಪ್ತ ನೆಂಬವನು ಹಿಂದುಸ್ತಾನವನ್ನೆಲ್ಲ ಪಾದಾಕ್ರಾಂತ ಮಾಡಬೇಕೆಂಬ ಮಹ ತ್ವಾಕಾಂಕ್ಷೆಯಿಂದ ದಕ್ಷಿಣಕ್ಕೆ ಕಂಚಿಯ ವರೆಗೆ ಹೋಗಿ ಕರ್ನಾಟಕ ದೊಳಗಿದ ೧೧ ರಾಜ್ಯಗಳಲ್ಲಿ ಹಾಯ್ದು ಉತ್ತರಕ್ಕೆ ತೆರಳಿದನು. ಸಮುದ್ರ ಗುಪ್ತನ ತರುವಾಯ ಕರ್ನಾಟಕಕ್ಕೆ ಸಂಬಂಧಪಟ್ಟ ಉತ್ತರದ ಸಾರ್ವ ಭೌಮ ರಾಜನೆಂದರೆ ಹರ್ಷವರ್ಧನನೇ. ಕರ್ನಾಟಕದ ಪ್ರಖ್ಯಾತ ರಾಜ ನಾದ ೨ನೆಯ ಪುಲಿಕೇಶಿಯು ಕ್ರಿ. ಶ. ೬೩೪ ರಲ್ಲಿ ಸೋಲಿಸಿದ ಹರ್ಷ ವರ್ಧನನು ಇವನೇ.

ಈ ಮೇರೆಗೆ, ಉತ್ತರದಲ್ಲಿ ಮೌರ್ಯರೂ, ಸುಂಗರೂ, ಆಂಧ್ರರೂ, ಗುಪ್ತರೂ ಅತಿ ಬಲಾಢ್ಯರಾಗಿ ಆಳುತ್ತಿದ್ದಾಗ, ನಮ್ಮ ದೇಶದಲ್ಲಿ ಕದಂಬ ಮುಂತಾದ ಚಿಕ್ಕ ಚಿಕ್ಕ ರಾಜ್ಯಗಳು ಮಾತ್ರ ಅಲ್ಲಲ್ಲಿಗೆ ಆಳುತ್ತಿ ದ್ದವು. ಆದರೆ ದಕ್ಷಿಣಾಪಥದ ವೈಭವದ ಇತಿಹಾಸವು ಹೀಗೆ ತಡವಾಗಿ ಪ್ರಾರಂಭವಾದರೂ ಅದು ಮುಂದೆ ಅನೇಕ ಶತಮಾನಗಳ ವರೆಗೆ ಬಾಳಿ ತೆಂಬುದನ್ನು ಮರೆಯಕೂಡದು. ಕ್ರಿ. ಶ. ಪ್ರಾರಂಭಕ್ಕೆ ಈ ದೇಶದ

ಕೆಲವು ಭಾಗದಲ್ಲಿ ಆಂಧ್ರ ಭೃತ್ಯರು ಆಳುತ್ತಿದ್ದರು. ಇವರ ರಾಜ್ಯವು ಕೃಷ್ಣಾ ಮತ್ತು ಗೋದಾವರೀ ನದಿಗಳ ಮುಖದ ವರೆಗೆ ಹಬ್ಬಿತ್ತು. ಆದರೆ ಕರ್ನಾಟಕವೆಲ್ಲವೂ ಇವರ ವಶವಾಗಲಿಲ್ಲ. ರಾಷ್ಟ್ರಕೂಟ, ಪಲ್ಲವ, ಗಂಗ, ಬಾಣ, ಕದಂಬ ಮುಂತಾದ ಚಿಕ್ಕ ಚಿಕ್ಕ ರಾಜ್ಯಗಳು ಆಗ ಈ ದೇಶದಲ್ಲಿ ಆಳುತ್ತಿದ್ದಂತೆ ತೋರುತ್ತದೆ. ಆಂಧ್ರಭೃತ್ಯರು ಕ್ರಿ. ಶ. ೨೨೫ ವರೆಗೆ ಆಳಿ ದರು. ಮುಂದೆ ಸುಮಾರು ೧೦೦ ವರ್ಷಗಳ ಇತಿಹಾಸವು ಚೆನ್ನಾಗಿ ಗೊತ್ತಾಗುವುದಿಲ್ಲ. ಆಗ ಕ್ಷತ್ರಪರೆಂಬ ಪರದೇಶಸ್ಥರು ಪ್ರಬಲವಾದಂತೆ ತೋರುತ್ತದೆ. ಮುಂದೆ ೫ನೆಯ ಶತಮಾನದಲ್ಲಿ ಚಾಲುಕ್ಯರು ತಲೆಯೆ ತ್ತಿದರು. ಈ ಚಾಲುಕ್ಯರು ಮುಂದೆ ಇಡೀ ಕರ್ನಾಟಕವನ್ನೆಲ್ಲ ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡದ್ದರಿಂದ ಕರ್ನಾಟಕದ ವೈಭವದ ಇತಿಹಾಸವು ಅಲ್ಲಿಂದ ಪ್ರಾರಂಭವಾಗುತ್ತದೆ. ಆದರೆ ಅವರ ಇತಿಹಾಸವನ್ನು ಪ್ರಾರಂಭ ಮಾಡುವ ಮೊದಲು ಕದಂಬ, ಗಂಗರ ವಿಷಯವಾಗಿ ಸಂಕ್ಷೇಪವಾಗಿ ಹೇಳು ವದು ಅವಶ್ಯವಿದೆ. ಏಕೆಂದರೆ ಇವು ಕರ್ನಾಟಕದಲ್ಲಿ ಎಲ್ಲಕ್ಕೂ ಹಳೆಯ ರಾಜವಂಶಗಳು.

## ಕದಂಬ ವಂಶಾವಳಿ*




* ಈ ವಂಶಾವಳಿಯಲ್ಲಿ ಮುಖ್ಯವಾದ ಹೆಸರುಗಳನ್ನು ಮಾತ್ರವೇ ಕೊಟ್ಟಿದೆ.

ಕದಂಬರರ ವಿಷಯಕವಾದ ಗೊತ್ತಿರುವ ಸಂಗತಿಗಳೆಂದರೆ, ಇವರ ಮೂಲ ಪುರುಷನು ಮಯೂರವರ್ಮನು. ಇವನು ಸೊರಬ ತಾಲೂಕಿನ ಸ್ಥಾನಗುಂಡೂರ ಅಥವಾ ತಾಳಗುಂದ ಎಂಬಲ್ಲಿಯ ಬ್ರಾಹ್ಮಣನು. ಇವನು ಕಂಚಿಗೆ ವೇದಾಧ್ಯಯನಕ್ಕಾಗಿ ಹೋದಾಗ ಅಲ್ಲಿಯ ಪಲ್ಲವ ಅರಸನಿಂದ ಅವಮಾನಿತನಾದುದರಿಂದ ಕ್ಷತ್ರಿಯ ಧರ್ಮವನ್ನು ಸ್ವೀಕರಿಸಿ ಬನವಾಸಿಯಲ್ಲಿ ಕದಂಬ ರಾಜ್ಯವನ್ನು ಸ್ಥಾಪಿಸಿದನು. ಈ ಕದಂಬರು ೩ನೆಯ ಶತಮಾನದಿಂದ ೬ನೆಯ ಶತಮಾನ ವರೆಗೆ ಸ್ವತಂತ್ರವಾಗಿ ಆಳಿದರು. ಈ ವಂಶದಲ್ಲಿ ಕಾಕುತ್ಸ್ಯವರ್ಮ, ಕೃಷ್ಣವರ್ಮ ಮುಂತಾದ ಅರಸರು ಪ್ರಬಲರಾಗಿದ್ದರು. ಮುಂದೆ ಚಾಲುಕ್ಯರು ೬ನೆಯ ಶತಮಾನದಲ್ಲಿ ಇವರ ಸ್ವಾತಂತ್ರ್ಯವನ್ನು ಹರಣ ಮಾಡಿದರು. ಮುಂದೆ ಈ ಕದಂಬರು ಅನೇಕ ಶತಮಾನಗಳ ವರೆಗೆ ಮಾಂಡಲಿಕ ಅರಸರಾಗಿ ಆಳಿದರು.

### ಗಂಗವಂಶಾವಳಿ*

ಮಾಧವ–ಕೊಂಗುಣಿವರ್ಮ (೧೦೩)
|
ಅವನೀತ (೪೩೦-೪೮೨).
|
ದುರ್ವಿನೀತ (೪೮೨-೫೧೭).
|
ಶಿವಮಾರ (೬೭೦-೭೧೩).
|
ಶ್ರೀಪುರುಷ (೭೨೭-೭೭೬)
|
ರಾಜಮಲ್ಲ (೮೭೦.೯೦೭).
|
ಭೂತುಗ (೯೩೮-೯೫೩).
|
ಮಾರಸಿಂಹ (೯೬೧–೯೭೪).
|
ರಾಜಮಲ್ಲ (೯೭೪-೯೮೪).

* ಈ ವಂಶಾವಳಿಯಲ್ಲಿ ಮುಖ್ಯವಾದ ಹೆಸರುಗಳನ್ನು ಮಾತ್ರವೇ ಕೊಟ್ಟಿದೆ.

## ಗಂಗರು

ಮೈಸೂರ ಸರಕಾರದವರು ತಮ್ಮ ಪ್ರಾಂತದ ಶಿಲಾಲಿಪಿಗಳನ್ನು ಹೊರಗೆಡುಹಿರುವದರಿಂದ, ಆ ಪ್ರಾಂತದಲ್ಲಿ ಹಿಂದಕ್ಕೆ ಆಳಿದ ಗಂಗವಂಶದ ವಿಷಯುವಾಗಿ ನಮಗೆ ಹೆಚ್ಚಿಗೆ ಸಂಗತಿಗಳು ಗೊತ್ತಾಗಿವೆ. ಅವರು ಸಾರ್ವಭೌಮ ಅರಸರಲ್ಲದಿದ್ದರೂ ಅವರಲ್ಲಿ ಅನೇಕ ಪ್ರಸಿದ್ಧ ರಾಜರು ಆಳಿದವರು. ಗಂಗರು ಮೈಸೂರಿನಲ್ಲಿ ೨ನೆಯ ಶತಮಾನದಿಂದ ೧೧ನೆಯ ಶತಮಾನದ ವರೆಗೆ ಆಳಿದರು. ಅವರ ರಾಜ್ಯಕ್ಕೆ ಗಂಗವಾಡಿ ಎಂದು ಹೆಸರು. ಕೋಲಾರ, ತಲಕಾಡುಗಳೇ ಅವರ ರಾಜಧಾನಿಗಳು. ಮಾಧವ ಅಥವಾ ಕೊಂಗುಣಿವರ್ಮನು ಇವರ ಮೂಲಪುರುಷನು. ಈ ವಂಶದಲ್ಲಿ ಹರಿವರ್ಮ, ಅವನೀತ, ದುರ್ವಿನೀತ, ಶಿವಮಾರ, ಶ್ರೀಪುರುಷ ಮುಂತಾದ ಅರಸರು ಪ್ರಬಲರಾಗಿದ್ದರು. ಅವರಲ್ಲಿ ಶ್ರೀಪುರುಷನೇ ಶ್ರೇಷ್ಠನು (೭೨೭-೭೭೬). ಈ ವಂಶದಲ್ಲಿ ಅನೇಕ ಅರಸರು ಗ್ರಂಥಕರ್ತರಾಗಿದ್ದರು. ಆ ವಿಷಯುವನ್ನು ಮುಂದೆ ಹೇಳುವೆವು. ರಾಜಮಲ್ಲನೆಂಬ ಈ ವಂಶದ ಅರಸನ ಕಾಲದಲ್ಲಿ ಅವನ ಮಂತ್ರಿಯಾದ ಚಾಮುಂಡರಾಯನು ಶ್ರವಣಬೆಳಗೊಳದ ಅತ್ಯಂತ ಭವ್ಯವಾದ ಗೋಮಟೇಶ್ವರ ಎಂಬ ಜೈನ ಮೂರ್ತಿಯನ್ನು ೯೮೩ ರಲ್ಲಿ ಸ್ಥಾಪಿಸಿದನು. ಈ ಗಂಗರು ನಡುನಡುವೆ ಚಾಲುಕ್ಯ, ರಾಷ್ಟ್ರಕೂಟರಿಗೆ ಮಾಂಡಲಿಕರಾಗಿದ್ದರು. ಮುಂದೆ ಈ ರಾಜ್ಯವು ಚೋಳ ರಾಜ್ಯದಲ್ಲಿ ಲೀನವಾಯಿತು.

---

## ೭ ನೆಯ ಪ್ರಕರಣ

## ಬಾದಾಮಿಯ ಚಾಲುಕ್ಯರ ವಂಶಾವಳಿ



## ಬಾದಾಮಿಯ ಚಾಲುಕ್ಯರು *

( ೫೫೦—೭೫೭ )

ಈ ಚಾಲುಕ್ಯರೇ ಇಡೀ ಕರ್ನಾಟಕಕ್ಕೆ ಸಾರ್ವಭೌಮರಾ ಮೊದಲು ಆಳಿದ ಅರಸರು. ಈ ವಂಶದ ೯ ಜನ ಅರಸರು ಬಾದಾ ಯಲ್ಲಿ ಬಹು ವೈಭವದಿಂದ ಸುಮಾರು ೨೦೦ ವರ್ಷಗಳ ವರೆಗೆ ಆ ದರು. ಹಾರೀಕ ಋಷಿಯು ದೇವತೆಗಳಿಗೆ ಅರ್ಘ್ಯೋದಕವನ್ನು ಕೊಡ ವಾಗ, ಅವನ ಚುಲಕದಿಂದ ಎಂದರೆ ಬೊಗಸೆಯೊಳಗಿಂದ ಒಬ್ಬ ವೀರ- ಪುರುಷನು ಹುಟ್ಟಿದನಂತೆ. ಚಾಲುಕ್ಯರು ತಾವು ಆ ವೀರಪುರುಷ ವಂಶಜರೆಂದು ಹೇಳಿಕೊಳ್ಳುತ್ತಾರೆ. ಆದುದರಿಂದ ಇವರಿಗೆ "ಹಾರೀತ ಪುತ್ರ" ರೆಂದೆನ್ನುತ್ತಾರೆ. ಇವರ ಗೋತ್ರ ಮಾನವ್ಯ; ಕುಲದೇವ ವಿಷ್ಣು; ವಂಶ ಚಂದ್ರವಂಶ. ಇವರು ಮೊದಲು ಉತ್ತರದವರು ನರ್ಮದೆಯನ್ನು ದಾಟಿ ಮೊದಲು ಬಂದವನು ಜಯಸಿಂಹನು. ಇವನ ರಾಷ್ಟ್ರಕೂಟರ ಅರಸನಾದ ಇಂದ್ರನನ್ನು ಸೋಲಿಸಿ, ಮುಂದೆ ದಕ್ಷಿಣಕ್ಕೆ ಸಾಗಿ, ಕಂಚಿಯಲ್ಲಿರುವ ಪಲ್ಲವ ವಂಶದ ತ್ರಿಲೋಚನ ಪಲ್ಲವನೊಡ ಕಾದಿದನು; ಆದರೆ ಆ ಯುದ್ಧದಲ್ಲಿ ತಾನೇ ಮಡಿದನು. ಆಗ ಗರ್ಭಿ ಯಾಗಿದ್ದ ಅವನ ಹೆಂಡತಿಯು ವಿಷ್ಣುಸೋಮಯಾಜಿಯೆಂಬ ಒಬ್ಬ ಬ್ರಾಹ್ಮಣನನ್ನು ಆಶ್ರಯಿಸಿದಳು. ಅಲ್ಲಿ ಅವಳಿಗೆ ರಾಜಸಿಂಹನೆಂ ಮಗನು ಹುಟ್ಟಿದನು. ಅವನು ದೊಡ್ಡವನಾದ ಬಳಿಕ ಪಲ್ಲವರೊಡ ಕಾದಿ, ಅವರನ್ನು ಸೋಲಿಸಿ, ಆ ವಂಶದ ರಾಜಪುತ್ರಿಯನ್ನು ಮದುವೆ ಯಾದನು. ಆದರೆ, ಅವನ ಇತಿಹಾಸವು ನಮಗೆ ವಿಶೇಷವಾಗಿ ತಿಳಿದಿಲ್ಲ. ಇವನ ಮಗನಾದ ಪುಲಿಕೇಶಿಯೇ ಈ ಚಾಲುಕ್ಯ ವಂಶದ ಮೊದಲನೆಯ

* ಉತ್ತರ ಕರ್ನಾಟಕದಲ್ಲಿ ಈ ವಂಶದ ಶಿಲಾಲಿಪಿ, ತಾಮ್ರಪಟಗಳು ಕೂಡಿ ಸುಮಾರು ೧೧೦ ವರೆಗೆ ದೊರತಿದ್ದರೂ, ಅವುಗಳಲ್ಲಿ ೫೦-೫೫ ಮಾತ್ರವೇ ಶೋಧಿಸ ಲ್ಪಟ್ಟಿದೆ. ಇವರ ಲೇಖಗಳು ಪಿಂಪಳನೇರ, ಹೈದರಾಬಾದ, ಚಿಪಳೂಣ, ಕುಂಡಲ ಗಾಂವ, ರಾಯಗಡ, ಬಾದಾಮಿ, ಮಹಾಕೂಟ, ಅಡೂರ, ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿ ದೊರೆಯುತ್ತವೆ.

ಪ್ರಖ್ಯಾತ ರಾಜನು. ಇವನ ರಾಜಧಾನಿಯು ಮೊದಲು "ಇಂದು-ಕಾಂತ" ಅಥವಾ ಅಜಂತೆಯಲ್ಲಿದ್ದಿತು. ಆದರೆ ಮುಂದೆ ಈ ಪುಲಿಕೇಶಿಯು ಪಲ್ಲವರನ್ನು ಬಗ್ಗುಬಡಿದು ವಾತಾಪಿ ಅಥವಾ ಬಾದಾಮಿಯನ್ನು ಅವರಿಂದ ಸೆಳೆದುಕೊಂಡು, ಅದನ್ನು ತನ್ನ ರಾಜಧಾನಿಯನ್ನಾಗಿ ಮಾಡಿದನು. ಇವನು ಸಾರ್ವಭೌಮತ್ವ ಸೂಚಕವಾದ ಅಶ್ವಮೇಧ ಯಜ್ಞವನ್ನು ಮಾಡಿ ದಿಗಂತ ಕೀರ್ತಿಯನ್ನು ಪಡೆದನು. ಇವನ ಮಗನಾದ ಮಂಗಳೇಶನು (೫೯೭-೬೦೮) ಮಹಾಕೋಟೀಶ್ವರನ ಭಕ್ತನು. ಬಾದಾಮಿಯಲ್ಲಿಯ ಎಲ್ಲಕ್ಕೂ ದೊಡ್ಡದಾದ ಮೂರನೆಯ ವೈಷ್ಣವ ಗವಿಯನ್ನು ಕೊರೆಯಿಸಿದವನು ಇದೇ ಮಂಗಳೇಶನು.

ಇವನ ತರುವಾಯ ಪ್ರೌಢಪ್ರತಾಪಿಯಾದ ೨ನೆಯ ಪುಲಿಕೇ-ಶಿಯು ಪಟ್ಟವೇರಿದನು. ( ೬೦೯-೬೪೨ ). ಈ ೨ನೆಯ ಪುಲಿಕೇ-ಶಿಯು ಕರ್ನಾಟಕದ ಗಂಗ, ಕದಂಬ, ಪಲ್ಲವ ಮುಂತಾದ ಅರಸರನ್ನು ಗೆದ್ದುದಲ್ಲದೆ, ಕರ್ನಾಟಕವನ್ನು ದಾಟಿ ಹೋಗಿ, ಉತ್ತರದಲ್ಲಿ ಆಳುತ್ತಿದ್ದ ಕೋಸಲ, ಕಲಿಂಗ, ಮೌರ್ಯ ಮುಂತಾದ ಅರಸರನ್ನೂ, ದಕ್ಷಿಣದಲ್ಲಿಯ ಪಾಂಡ್ಯ, ಚೋಳ, ಕೇರಳ, ಮೊದಲಾದ ಅರಸರನ್ನೂ ಪಾದಾಕ್ರಾಂತರನ್ನಾಗಿ ಮಾಡಿದನು. ನೂರು ಹಡಗುಗಳುಳ್ಳ ಹಡಗುಪಡೆಯೊಂದಿಗೆ ಪಶ್ಚಿಮ ಸಮುದ್ರದಲ್ಲಿ ಸೈನ್ಯವನ್ನು ಸಾಗಿಸಿ, ಉತ್ತರಕ್ಕೆ ಮುಂಬಯಿ ಹತ್ತರ ಇರುವ "ಪುರಿ" ಎಂಬ ಪಟ್ಟಣವನ್ನು ತೆಗೆದುಕೊಂಡನು. ಆದರೆ ಈ ಪುಲಿಕೇಶಿಯು ಮಾಡಿದ ಎಲ್ಲಕ್ಕೂ ಮಹತ್ವದ ಕಾರ್ಯವೆಂದರೆ ಉತ್ತರ ಹಿಂದುಸ್ತಾನಕ್ಕೆಲ್ಲ ಸಾರ್ವಭೌಮ ಚಕ್ರವರ್ತಿಯಾಗಿದ್ದ ಕನೋಜದ ಅರಸನಾದ " ಹರ್ಷವರ್ಧನ " ನನ್ನು ನರ್ಮದೆಯ ದಂಡೆಯ ಮೇಲೆ ಸಂಪೂರ್ಣವಾಗಿ ಸೋಲಿಸಿದುದೇ. ಆಗ ಅವನು " ಪರಮೇಶ್ವರ " ಎಂಬ ಬಿರುದನ್ನು ಧರಿಸಿ ಅಶ್ವಮೇಧ ಯಾಗವನ್ನು ಮಾಡಿದನು. ಹರ್ಷವರ್ಧನನು ಇವನ ಮೇಲೆ ದಂಡೆತ್ತಿ ಬಂದಾಗ ಅವನ ಸೈನ್ಯದಲ್ಲಿ ಬರೀ ಆನೆಗಳೇ ಅರವತ್ತು ಸಾವಿರವಿದ್ದವು. ಎಂದ ಮೇಲೆ ಅವನ ಕುದುರೆ ಕಾಲಾಳುಗಳ ಸೈನ್ಯವು ಎಷ್ಟಿತ್ತೆಂಬುದನ್ನು ನೀವೇ ಊಹಿಸಿರಿ; ಅಂದಿನಿಂದ ಉತ್ತರ ಹಿಂದುಸ್ತಾನದ ಇತಿಹಾಸವು ಮುಗ್ಗಿತು.

ಕರ್ನಾಟಕದ ಇತಿಹಾಸಕ್ಕೆ ಕಳೆಯೇರುತ್ತ ಹೋಯಿತು. ಇವನ ರಾಜ್ಯವಿಸ್ತಾರವು ನರ್ಮದೆಯಿಂದ ದಕ್ಷಿಣಕ್ಕೆ ಇಡೀ ದಕ್ಷಿಣಾಪಥವನ್ನು ಆಕ್ರಮಿಸಿತ್ತು. ಪೂರ್ವ, ಪಶ್ಚಿಮ, ದಕ್ಷಿಣ ಸಮುದ್ರದ ನಡುವಿನ ನಾಡೆಲ್ಲವೂ ಇವನ ಕೈಸೇರಿತ್ತು. ಹ್ಯುವೆನತ್ಸಾಂಗನೆಂಬ ಚೀನ ದೇಶದ ಪ್ರವಾಸಿಯು ೬೪೧ ನೆಯ ಇಸ್ವಿಯ ಸುಮಾರಿಗೆ ಈ ಪುಲಿಕೇಶಿಯ ರಾಜ್ಯದೊಳಗೆ ಸಂಚಾರ ಮಾಡಿದನು. ಅವನು ನಮ್ಮ ಕರ್ನಾಟಕವನ್ನೂ ಪುಲಿಕೇಶಿಯ ಆಗಿನ ಪ್ರಜೆಗಳನ್ನೂ, ಅವರ ನಡೆನುಡಿಗಳನ್ನೂ ಅತ್ಯಂತ ಸುಂದರವಾಗಿ ವರ್ಣಿಸಿದ್ದಾನೆ. ( ಮುಂದೆ ೧೨ನೆಯ ವೈಭವ ವರ್ಣನೆ ಪ್ರಕರಣ ನೋಡಿರಿ. ) ಪ್ರತಿಯೊಬ್ಬ ಕನ್ನಡಿಗನು ಅದನ್ನು ತನ್ನೆದೆಯ ಮೇಲೆ ಬರೆದಿಟ್ಟುಕೊಳ್ಳಬೇಕು. ಈ ಪುಲಿಕೇಶಿಯಂಥ ವೈಭವ ಸಂಪನ್ನರಾದ ಅರಸರು ಹಿಂದುಸ್ತಾನದ ಇತಿಹಾಸದಲ್ಲಿ ಬೆರಳೆಣಿಸುವಷ್ಟು ಸಹ ಸಿಕ್ಕುವುದು ಅಪೂರ್ವ. ಆವನ ವರ್ಚಸ್ಸು ಇರಾಣ ಮುಂತಾದ ಪರರಾಷ್ಟ್ರಗಳ ಮೇಲೆಯೂ ಇತ್ತೆಂದು ಗೊತ್ತಾಗುತ್ತದೆ. ಅರಬೀ ಭಾಷೆಯ ಒಂದು ಪುಸ್ತಕದಲ್ಲಿ ಈತನು ಇರಾಣದ ಅರಸನಾದ ' ಖುಸ್ರು ' ವಿನ ಕಡೆಗೆ ತನ್ನ ರಾಯಭಾರಿಯನ್ನು ಕಳುಹಿದ್ದನೆಂದು ಉಲ್ಲೇಖವಿದೆ. ಮೇಲಾಗಿ, ಇರಾಣದ ರಾಯಭಾರಿಗಳು ಇವನ ಒಡ್ಡೋಲಗಕ್ಕೆ ಬಂದಿದ್ದರೆಂಬುದು ' ಅಜಂತೆ ' ಯಲ್ಲಿಯ ಗವಿಯೊಳಗಿನ ಒಂದು ಚಿತ್ರದಿಂದ ಗೊತ್ತಾಗುತ್ತದೆ. ಈ ಪುಲಿಕೇಶಿಯ ಪ್ರತ್ಯಕ್ಷ ದರ್ಶನವು ಆ ಚಿತ್ರದಲ್ಲಿ ಕನ್ನಡಿಗರಿಗೆ ಆಗುವಂತಿದೆ. ಕನ್ನಡಿಗರ ದುರ್ದೈವದಿಂದ, ಅದರಲ್ಲಿಯ ಪುಲಿಕೇಶಿಯ ಮುಖವನ್ನೇ ಯಾವನೊಬ್ಬ ದುಷ್ಟನು ಕೆಡಿಸಿರುವನು. ಆದರೆ ಅದೇ ಅಜಂತೆಯಲ್ಲಿರುವ ಮತ್ತೊಂದು ಗವಿಯಲ್ಲಿ ಒಂದು ' ರಾಜವಿಲಾಸ ' ನೌಕೆಯ ಚಿತ್ರವಿದ್ದು, ಅದರಲ್ಲಿಯ ಮೂರ್ತಿಯು ಪುಲಿಕೇಶಿಯದೇ ಇರಬಹುದೆಂದು ನಮಗೆ ತೋರುತ್ತದೆ. ಇರಲಿ ! ಮುಖ್ಯವಾಗಿ ಹೇಳುವುದೇನೆಂದರೆ, ಈ ಪುಲಿಕೇಶಿಯ ಹೆಸರನ್ನು ಯಾವ ಕನ್ನಡಿಗನೂ ಎಂದಿಗೂ ಮರೆಯಕೂಡದು. ಇವನ ಪರಾಕ್ರಮದ ಮತ್ತು ರಾಜನೀತಿಯ ಕೃತ್ಯಗಳನ್ನು ಎಷ್ಟು ವರ್ಣಿಸಿದರೂ ಸ್ವಲ್ಪವೇ ! ಇವನ ಕಾಲದಲ್ಲಿ ಇವನ ಹಿರಿಯ ಸೊಸೆಯಾದ " ವಿಜಯ

ಭಟ್ಟಾರಿಕಾ " ಎಂಬವಳು ಸಾವಂತವಾಡಿಯನ್ನಾಳಿದಳು. ಪುಲಿಕೇಶಿಯ ಮಗನ ಆಳಿಕೆಯಲ್ಲಿ ದಕ್ಷಿಣ ಗುಜರಾಥದಲ್ಲಿ ಚಾಲುಕ್ಯರದೊಂದು ಶಾಖೆ-ಯು ಸ್ಥಾಪಿಸಲ್ಪಟ್ಟಿತು. ಇವನ ಮಗ, ಮೊಮ್ಮಗ, ಮರಿಮಕ್ಕಳು, ಇವರೆಲ್ಲ ಶೂರರಾದ ಅರಸರೇ. ಅವರು, ಈ ವಂಶದ ಹುಟ್ಟುಹಗೆಗಳಾದ ಪಲ್ಲವರೊಡನೆಯೂ, ಚೋಳ, ಪಾಂಡ್ಯ, ಹೈಹಯ ಮುಂತಾದವರೊಡನೆಯೂ ಕಲಿತನದಿಂದ ಕಾದಿ, ಚಾಲುಕ್ಯ ವಂಶದ ಹೆಸರನ್ನು ಶಾಶ್ವತವಾಗಿ ನಿಲ್ಲಿಸಿರುವರು. ಆದರೆ ಇತಿಹಾಸವನ್ನು ಕೊಡುವದು ನಮ್ಮ ಮುಖ್ಯ ಉದ್ದೇಶವಿರದೆ, ವೈಭವವನ್ನು ಕಣ್ಣೆದುರಿಗೆ ತಂದಿರುವುದೇ ನಮ್ಮ ಮುಖ್ಯ ಮನೋಗತವಿರುವುದರಿಂದ, ನಾವು ಹೆಚ್ಚಿನ ಸಂಗತಿಗಳನ್ನು ಇಲ್ಲಿ ಹೇಳುವದಿಲ್ಲ. ಈ ಮಹಾಪುಲಿಕೇಶಿಯಿಂದ ನಾಲ್ಕನೆಯ ತಲೆಯವನಾದ ೨ನೆಯ ವಿಕ್ರಮಾದಿತ್ಯನು ತನ್ನ ವಂಶಕ್ಕೆ ಪೂರ್ವದಿಂದಲೂ ಶತ್ರುಗಳಾದ ಪಲ್ಲವರೊಡನೆ ಹೋರಾಡಿ, ಮಾಣಿಕ್ಯದ ರಾಶಿಯನ್ನೂ, ಗಜತುರಗಗಳನ್ನೂ ಯಥೇಚ್ಛವಾಗಿ ತೆಗೆದುಕೊಂಡು ಅವರ ರಾಜಧಾನಿಯಾದ ಕಂಚಿಯನ್ನು ಹೊಕ್ಕ ಸಂಗತಿಯು ಮಾತ್ರ ನೆನಪಿನಲ್ಲಿಡತಕ್ಕದಾಗಿದೆ. ಏಕೆಂದರೆ, ಈ ವಿಕ್ರಮಾದಿತ್ಯನು ಮಿಕ್ಕವರಂತೆ, ಆ ಪಟ್ಟಣವನ್ನು ಹಾಳು ಮಾಡದೆ, ದೇವಬ್ರಾಹ್ಮಣರಿಗೂ, ಬಡಬಗ್ಗರಿಗೂ ಅನೇಕ ದಾನ ಮುಂತಾದವುಗಳನ್ನು ಮಾಡಿ ಅಲ್ಲಿಯ ರಾಜಸಿಂಹೇಶ್ವರ ಮುಂತಾದ ದೇವಾಲಯಗಳನ್ನು ಉದ್ಧರಿಸಿದನು, ಇವನ ಹೆಂಡತಿಯಾದ ಲೋಕಮಹಾದೇವಿಯೆಂಬವಳು ಈತನ ಈ ಜಯದ ಸೂಚನಾರ್ಥವಾಗಿ ಪಟ್ಟದಕಲ್ಲಿನಲ್ಲಿ ವಿರೂಪಾಕ್ಷನ ಅತಿ ವಿಸ್ತಾರವಾದ ದೇವಾಲಯವನ್ನು (೬೫೬ ಶಕ) ಕಟ್ಟಿಸಿದಳು. ಇವಳು ಈ ಕಾಲದಲ್ಲಿ ' ಕಿಸುವೊಳಲ್ ' ಎಂದರೆ ಪಟ್ಟದಕಲ್ಲಿನಲ್ಲಿ ಆಳುತ್ತಿದ್ದಳು. ಆದರೆ, ಇವನ ಮಗನ ಕಾಲಕ್ಕೆ, ಏಳೆಂಟು ತಲೆಗಳಿಂದ ಅವಿಚ್ಛಿನ್ನವಾಗಿ ನಡೆಯುತ್ತ ಕೈವಶವಾಗಿದ್ದ ರಾಜಲಕ್ಷ್ಮಿಯು ಈ ವಂಶವನ್ನು ಬಿಟ್ಟು ಹೋದಳು. ರಾಷ್ಟ್ರಕೂಟರ ಅರಸನಾದ ದಂತಿವರ್ಮನೆಂಬವನು ಇವರ ರಾಜ್ಯವನ್ನು ಸೆಳೆದುಕೊಂಡು, ರಾಷ್ಟ್ರಕೂಟ ವಂಶವನ್ನುಸ್ಥಾಪಿಸಿದನು.

ಈ ಬಗೆಯಾಗಿ, ಕರ್ನಾಟಕವನ್ನೆಲ್ಲ ಒಂದೇ ಛತ್ರದ ಕೆಳಗೆ ತಂದು,

ಕರ್ನಾಟಕದ ಕೀರ್ತಿಯನ್ನು ದಶದಿಕ್ಕುಗಳಲ್ಲಿ ಪಸರಿಸುವಂತೆ ಮಾಡಿ ಈ ಚಾಲುಕ್ಯರು ಕೆಲವು ಕಾಲ ಇತಿಹಾಸದಿಂದ ಮರೆಯಾದರು. ಆದ ಚಾಲುಕ್ಯರು ಮುಳುಗಿದರೂ, ಕರ್ನಾಟಕದ ವೈಭವವು ಮುಳುಗಲಿ ಏಕೆಂದರೆ, ಇವರ ತರುವಾಯ ಬಂದ ಅರಸರೂ ಕರ್ನಾಟಕಸ್ಥ ಅವರೂ ಏಕಛತ್ರಾಧಿಪತಿಗಳೇ. ಇರಲಿ. ಅವರ ಇತಿಹಾಸವನ್ನು ಮುಂದಿ ಪ್ರಕರಣದಲ್ಲಿ ಕೊಡುವೆವು. ಈ ಚಾಲುಕ್ಯ ವಂಶದ ೨ನೆಯ ಪುಲಿಕೇ ಅವನ ಸೊಸೆಯಾದ 'ವಿಜಯಭಟ್ಟಾರಿಕೆ' ಮತ್ತು ೨ನೆಯ ವಿಕ್ರಮಾ ತ್ಯನ ಹೆಂಡತಿಯಾದ 'ಲೋಕಮಹಾದೇವಿ' ಮುಂತಾದವರು ಕನ್ನಡಿಗ ಸ್ಮೃತಿಪಥದಿಂದ ಮರೆಯಾಗುವುದೆಂತು! ಹುವೆನ್‌ತ್ಸಾಂಗನು ವರ್ಣಿಸ ಕನ್ನಡಿಗರ ಸ್ವಭಾವವೂ ಶೌರ್ಯವೂ, ಕನ್ನಡಿಗರಲ್ಲಿದ್ದ ಅವರ ವಿಷಯ ಲ್ಲಿಯ ಅನಾದರವನ್ನು ಓಡಿಸಲಾರವೇ! ಬಾದಾಮಿಯ ಗವಿಗಳೂ, ಅಜ ತೆಯಲ್ಲಿಯ ಅತ್ಯಂತ ಸುಂದರವಾದ ಚಿತ್ರಗಳೂ ಈ ಚಾಲುಕ್ಯವಂಶ ದಿ ಕವನ್ನು ಕನ್ನಡಿಗರ ಕಣ್ಣೆದುರಿಗೆ ಥಟ್ಟನೆ ತಂದಿರಿಸದೆ ಇರವು. ಪ್ರಸಿ ಜೈನ ಕವಿಯಾದ 'ರವಿಕೀರ್ತಿ'ಯು ೨ನೆಯ ಪುಲಿಕೇಶಿಯ ಸಂಬಂ ವಾಗಿ ಐಹೊಳೆಯಲ್ಲಿ ಶಿಲಾಲೇಖವನ್ನು ಬರೆದಿಟ್ಟು ಕನ್ನಡಿಗರ ವೈಭವಕ್ಕೆ ಸಾಕ್ಷಿಯಾಗಿ ನಿಂತಿರುತ್ತಾನೆ. ಕನ್ನಡಿಗರು ಆ ಲೇಖವನ್ನೇ ಕಣ್ದೆರೆದು ನೋಡದಿದ್ದರೆ ಆವನೇನು ಮಾಡಿಯಾನು ?

— ———

## ೮ ನೆಯ ಪ್ರಕರಣ

### ರಾಷ್ಟ್ರಕೂಟರ ವಂಶಾವಳಿ *




---

* ವಂಶಾವಳಿಯಲ್ಲಿ ಪ್ರಸಿದ್ಧ ಅರಸರ ಹೆಸರುಗಳನ್ನು ಮಾತ್ರ ಕೊಟ್ಟಿದ್ದೇವೆ.

# ರಾಷ್ಟ್ರಕೂಟರು

( ೭೫೭–೯೭೩ )

ಕಂ— ಶ್ರೀತಳ್ತುರದೊಳ್ಕೌಸ್ತುಭ ।
ಜಾತಿದ್ಯುತಿ ಬಳಸಿ ಕಾಂಡಪಟದಂತಿರೆ ಸಂ ॥
ಪ್ರೀತಿಯಿನಾವನನನಗಲ ।
ಕ್ಷೀತಿನಿರಂತರನುದಾರನಾ ನೃಪತುಂಗಂ ॥

ಕವಿರಾಜಮಾರ್ಗ

ವಾಚಕರೇ, ಬಾದಾಮಿಯ ಚಾಲುಕ್ಯರು ಇಡೀ ಕರ್ನಾಟಕವನ್ನೇ ತಮ್ಮ ಅಂಕಿತವಾಗಿ ಮಾಡಿಕೊಂಡು, ಕರ್ನಾಟಕ ಸಾಮ್ರಾಜ್ಯವನ್ನು ಕರ್ನಾಟಕದ ಹೊರಗೂ ಬಹಳ ದೂರದ ವರೆಗೆ ಹಬ್ಬಿಸಿದ ಸಂಗತಿಯನ್ನು ಹೋದ ಪ್ರಕರಣದಲ್ಲಿ ಹೇಳಿರುವೆವಷ್ಟೆ. ಈ ಬಗೆಯಾಗಿ ಚಾಲುಕ್ಯರು ಬಿತ್ತಿದ ಕರ್ನಾಟಕ ಸಾರ್ವಭೌಮತ್ವದ ಬೀಜವನ್ನು ರಾಷ್ಟ್ರಕೂಟರು ವೃಕ್ಷವಾಗಿ ಬೆಳೆಸಿದರು. ಚಾಲುಕ್ಯರು ಹೋಗಿ ರಾಷ್ಟ್ರಕೂಟರು ಬಂದರೂ ಕರ್ನಾಟಕ ವೈಭವವು ಕನ್ನಡಿಗರ ಕೈಬಿಟ್ಟು ಹೋಗಲಿಲ್ಲ. ಏಕೆಂದರೆ, ರಾಷ್ಟ್ರಕೂಟರೂ ಕನ್ನಡಿಗರೇ, ಅವರೂ ತಮ್ಮ ರಾಜಧಾನಿಯನ್ನು ಕರ್ನಾಟಕದಲ್ಲಿಯೇ ಸ್ಥಾಪಿಸಿದರು. ಅವರೂ ಕನ್ನಡ ಭಾಷೆಯನ್ನೇ ಬೆಳೆಸಿದರು. ಆದುದರಿಂದ ಚಾಲುಕ್ಯರ ಕಾಲದಲ್ಲಿ ಮೇಲ್ಮೆಗೆ ಬಂದ ಕರ್ನಾಟಕ ಸಾರ್ವಭೌಮತ್ವವು ರಾಷ್ಟ್ರಕೂಟರ ಕಾಲದಲ್ಲಿಯೂ ಅವ್ಯಾಹತವಾಗಿ ಮುಂದಕ್ಕೆ ಸಾಗಿತು.

* ಈ ರಾಷ್ಟ್ರಕೂಟ ವಂಶದ ಮೊದಲನೆಯ ಅರಸನೂ ಚಾಲುಕ್ಯ

---

* ಉತ್ತರ ಕರ್ನಾಟಕದಲ್ಲಿಯ ಈ ವಂಶದ ಲೇಖಗಳು ಸುಮಾರು ೬೦–೭೦ ಮಾತ್ರವೇ ಪ್ರಸಿದ್ಧವಾಗಿವೆ. ಅವು ಸಾಮನಗಡ, ವಾಣಿ, ಕಾವಿ, ಕಾನ್ಹೇರಿ, ಸಾಂಗಲಿ, ಕರ್ಹಾಡ, ಹತ್ತಿಮತ್ತೂರ, ಪಟ್ಟದಕಲ್ಲು, ಲಕ್ಷ್ಮೇಶ್ವರ, ವೇರೂಳ, ಸವದತ್ತಿ ಮುಂತಾದ ಸ್ಥಳಗಳಲ್ಲಿ ದೊರೆತಿರುತ್ತವೆ.

ರಂತೆ ಮೊದಲಿಗೆ ಉತ್ತರದಿಂದ ಬಂದವನು. ದಂತಿದುರ್ಗನೆಂಬವನು ಉತ್ತರದಿಂದ ಬಂದು ಬಾದಾಮಿಯ ಚಾಲುಕ್ಯರ ಕೊನೆಯ ಅರಸನಾದ ಕೀರ್ತಿವರ್ಮನೆಂಬವನನ್ನು ಸೋಲಿಸಿ, ಅವನ ರಾಜ್ಯವನ್ನು ಕಸಿದು ಕೊಂಡನು. ಅವನು ಕಂಚಿ, ಕಲಿಂಗ, ಕೋಸಲ, ಶ್ರೀಶೈಲ, ಮಾಳವ, ಲಾಟ, ಟಂಕ ಮುಂತಾದ ರಾಜ್ಯಗಳನ್ನು ಗೆದ್ದನೆಂತಲೂ, ಉಜ್ಜಯಿನಿ ಯಲ್ಲಿ ಸುವರ್ಣ, ರತ್ನ ಮುಂತಾದವುಗಳನ್ನು ವಿಪುಲವಾಗಿ ದಾನ ಮಾಡಿ ದನೆಂತಲೂ ಉಲ್ಲೇಖವಿದೆ.

ದಂತಿದುರ್ಗನ ತರುವಾಯ, ಕೃಷ್ಣರಾಜ ಅಥವಾ ಶುಭತುಂಗನು (೭೬೦-೭೭೦) ಪಟ್ಟವನ್ನೇರಿ, ಚಾಲುಕ್ಯರನ್ನು ಪುನಃ ಸಂಪೂರ್ಣವಾಗಿ ಸೋಲಿಸಿ, ರಾಷ್ಟ್ರಕೂಟರ ಸಾರ್ವಭೌಮತ್ವವನ್ನು ದೃಢವಾಗಿ ನಿಲ್ಲಿಸಿದನು. ಜಗತ್ತಿನೊಳಗಿನ ಪ್ರವಾಸಿಕರೆಲ್ಲರನ್ನು ಅತಿಶಯವಾಗಿ ಬೆರಗುಗೊಳಿಸು- ವಂಥ ವೇರೂಳಿನಲ್ಲಿಯ ಅತ್ಯದ್ಭುತವಾದ 'ಕೈಲಾಸ' ವೆಂಬ ಅಖಂಡ ವಾದ ಕಲ್ಲಿನ ಗುಡಿಯನ್ನು ಕೊರೆಸಿದವನು ಇದೇ ಕೃಷ್ಣರಾಜನು. ( ವೈಭವ ವರ್ಣನೆಯ ೨೧ನೆಯ ಪ್ರಕರಣವನ್ನು ನೋಡಿರಿ. )

ಇವನ ತರುವಾಯ ಧ್ರುವನು ಹೆಸರುವಾಸಿಯಾದ ಅರಸನು. ಇವನಿಗೆ 'ನಿರುಪಮ' 'ಕಲಿವಲ್ಲಭ' ಎಂದೂ ಹೆಸರುಗಳಿದ್ದವು. ಇವನು ಪಲ್ಲವರನ್ನೂ ಗಂಗರನ್ನೂ ಗೆದ್ದು ಅವರಿಂದ ಕಪ್ಪವನ್ನು ತೆಗೆದು ಕೊಂಡನಲ್ಲದೆ ಉತ್ತರದಲ್ಲಿ ಅಲ್ಹಾಬಾದದ ಹತ್ತರವಿರುವ ಕೌಶಾಂಬಿ ಯಲ್ಲಿ ಆಳುತ್ತಿದ್ದ ವತ್ಸ ಅರಸನ ಮೇಲೆ ದಂಡೆತ್ತಿ ಹೋಗಿ, ಅವನನ್ನು ಕಾಡಿಗೆ ಅಟ್ಟಿ ಅವನಿಂದ ರಾಜ್ಯಛತ್ರಗಳನ್ನು ಕಸಿದುಕೊಂಡನು.

ಅನಂತರ ೩ನೆಯ ಗೋವಿಂದನು ಬಲಾಢ್ಯ ಅರಸನು. ಸಿಂಹಾ- ಸನವನ್ನೇರಿದ ಕೂಡಲೆ ಒಳಸಂಚು ಮಾಡಿದ್ದ ಹನ್ನೆರಡು ಜನ ಅರಸ- ರನ್ನು ಇವನೊಬ್ಬನೇ ಬಗ್ಗುಬಡಿದನು. ಅನಂತರ ಇವನು ಗುರ್ಜರ, ಮಾಳವ ದೇಶಗಳನ್ನು ತೆಗೆದುಕೊಂಡನು. ಅಲ್ಲಿಂದ ವಿಂಧ್ಯಪರ್ವತಕ್ಕೆ ಸಾಗಿಹೋಗಿ 'ಮಾರಾಶ್ವರ' ನೆಂಬ ಅರಸನನ್ನು ವಶಮಾಡಿಕೊಂಡನು. ಮುಂದೆ ಅವನು ದಕ್ಷಿಣಕ್ಕೆ ತುಂಗಭದ್ರೆಯ ಕಡೆಗೆ ಹೊರಳಿ, ಪಲ್ಲವ ರನ್ನು ಗೆದ್ದು ಬೇರೆ ಬೇರೆ ಅರಸರನ್ನು ( ಪೂರ್ವ ಚಾಲುಕ್ಯರ

ಅರಸನನ್ನು) ದಾಸಾನುದಾಸನನ್ನಾಗಿ ಮಾಡಿಕೊಂಡು ಅವನ ಕೈಯಿಂದ ತನ್ನ ಕೋಟೆಯ ಗೋಡೆಗಳನ್ನು ಕಟ್ಟಿಸಿಕೊಂಡನು. ಈತನ ವಿಜಯ ಯಾತ್ರೆಯು ೮೦೪ ನೆಯ ಇಸ್ವಿಯ ಸುಮಾರಿಗೆ ಮುಗಿಯಿತು. ಸಾರಾಂಶ, ಈ ಮೂರನೆಯ ಗೋವಿಂದನು ರಾಷ್ಟ್ರಕೂಟ ಅರಸರೊಳಗೆ ಅತ್ಯಂತವಾಗಿ ಶೂರನಾದ ಅರಸನು. ' ಈತನ ಕಾಲಕ್ಕೆ ರಾಷ್ಟ್ರಕೂಟರ ರಾಜ್ಯವಿಸ್ತಾರವು ಉತ್ತರದಲ್ಲಿ ಮಾಳವಾ ದೇಶದಿಂದ ದಕ್ಷಿಣಕ್ಕೆ ಕಂಚಿಯ ವರೆಗೆ ಹಬ್ಬಿತ್ತು. ನರ್ಮದೆಯಿಂದ ತುಂಗಭದ್ರೆಯ ವರೆಗಿನ ಪೂರ್ವ ಪಶ್ಚಿಮ ಸಮುದ್ರಗಳ ನಡುವಿನ ಪ್ರದೇಶವಂತೂ ಪ್ರತ್ಯಕ್ಷವಾಗಿ ಈತನ ಆಧೀನದಲ್ಲಿಯೇ ಇತ್ತು. ಮಿಕ್ಕ ಪ್ರದೇಶದಲ್ಲಿ ಈತನ ವರ್ಚಸ್ಸು ನಡೆಯುತ್ತಿತ್ತು.

ಈ ಗೋವಿಂದನ ಮಗನೇ ಕನ್ನಡಿಗರೆಲ್ಲರಿಗೂ ಪರಿಚಿತನಾದ **ಅಮೋಘವರ್ಷ ಅಥವಾ ನೃಪತುಂಗನು;** ಉಪಲಬ್ಧವಿರುವ ಕನ್ನಡ ಗ್ರಂಥಗಳಲ್ಲಿ ಎಲ್ಲಕ್ಕೂ ಹಳೆಯದಾದ ' ಕವಿರಾಜಮಾರ್ಗ ' ವೆಂಬ ಪ್ರಖ್ಯಾತ ಗ್ರಂಥದ ಕರ್ತನು. ಈತನೇ. ಗುಣಭದ್ರನ ಗುರುವೂ ಆದಿ-ಪುರಾಣವೆಂಬ ಜೈನ ಗ್ರಂಥದ ಕರ್ತನೂ ಆದ ಜಿನಸೇನನು ಈ ನೃಪ ತುಂಗನ ಗುರು. ಮುಂಬಯಿ ಹತ್ತಿರಿರುವ ಕಾನ್ಹೇರಿಯ ಶಿಲಾಲಿಪಿ ಗಳಲ್ಲಿ, ಅಲ್ಲಿಯ ಶಿಲಾಹಾರರು ಈ ನೃಪತುಂಗನ ಮಾಂಡಲಿಕರಾಗಿದ್ದಂತೆ ಉಲ್ಲೇಖವಿದೆ. ಈ ಅಮೋಘವರ್ಷನು ಮಳಖೇಡದಲ್ಲಿ ಕರ್ನಾಟಕ ಸಿಂಹಾಸನದ ಮೇಲೆ ಒಟ್ಟಿಗೆ ೬೩ ವರ್ಷಗಳ ವರೆಗೆ ಕುಳಿತು ಅತ್ಯಂತ ವೈಭವದಿಂದ ರಾಜ್ಯವಾಳಿದನು. ಇಂಥವನನ್ನು ಕನ್ನಡಿಗರು ಮರೆಯು ವದು ಹೇಗೆ ?

ಆದರೆ ಚಾಲುಕ್ಯರ ವಂಶದಲ್ಲಿ ಅತ್ಯಂತ ಪ್ರಸಿದ್ಧವಾದ ೨ನೆಯ ಪುಲಿಕೇಶಿಯ ತರುವಾಯದಲ್ಲಿ ಒಬ್ಬರಿಗಿಂತ ಓಬ್ಬರು ದೊಡ್ಡ ದೊಡ್ಡ ಅರಸರು ಆಗಿಹೋದಂತೆ ಈ ರಾಷ್ಟ್ರಕೂಟರಲ್ಲಿ ಆಗಲಿಲ್ಲ. ಅಮೋಘ ವರ್ಷನ ತರುವಾಯದಲ್ಲಿ ಪಟ್ಟವೇರಿದ ಒಬ್ಬೊಬ್ಬ ಅರಸರು ಶೂರರಾಗಿ ಹೋದರೂ ಅವರು ಬಹಳ ದಿವಸ ಉಳಿಲಿಲ್ಲ. ಮುಂದೆ ರಾಷ್ಟ್ರಕೂಟ

ಅರಸರ, ಹುಟ್ಟುಹಗೆಗಳಾದ ಚಾಲುಕ್ಯರು ಪ್ರಬಲರಾಗಿ, ಅವರಲ್ಲಿ ತೈಲಪನೆಂಬವನು ಈ ರಾಷ್ಟ್ರಕೂಟ ವಂಶದ ಅರಸನಾದ ಕರ್ಕನೆಂಬವನನ್ನು ಸಂಪೂರ್ಣವಾಗಿ ಸೋಲಿಸಿ, ರಾಜ್ಯವನ್ನು ಸೆಳೆದುಕೊಂಡು, ಪುನಃ ಚಾಲುಕ್ಯ ವಂಶವನ್ನು ಸ್ಥಾಪಿಸಿದನು. (೯೭೨), ಈ ಮೇರೆಗೆ ನೃಪತುಂಗ ಅಥವಾ ಅಮೋಘವರ್ಷನ ತರುವಾಯ ಸುಮಾರು ನೂರು ವರ್ಷಗಳಲ್ಲಿಯೆ ಈ ವಂಶವು ಲಯ ಹೊಂದಿತು.

———

## ೯ ನೆಯ ಪ್ರಕರಣ

### ಕಲ್ಯಾಣ-ಚಾಲುಕ್ಯರ ವಂಶಾವಳಿ

ತೈಲಪ (೯೭೩-೯೯೭).
|
ಸತ್ಯಾಶ್ರಯ, ಇರಿವ-ಬೆಡಂಗ ೯೯೭-೧೦೦೮).
|
ವಿಕ್ರಮಾದಿತ್ಯ (೧೦೦೮-೧೦೬೮).

ಸೋಮೇಶ್ವರ I ಅಹವಮಲ್ಲ, ತ್ರೈಲೋಕ್ಯಮಲ್ಲ (೧೦೬೯-೧೦೭೬).
|
ಸೋಮೇಶ್ವರ II ಭುವನೈಕಮಲ್ಲ (೧೦೬೯-೧೦೭೬).
|
ಚಾಲುಕ್ಯವಿಕ್ರಮ, ವಿಕ್ರಮಾದಿತ್ಯ, ತ್ರಿಭುವನಮಲ್ಲ (೧೦೭೬-೧೧೨೬)
|
ಸೋಮೇಶ್ವರ III ಭೂಲೋಕಮಲ್ಲ (೧೧೨೬-೧೧೩೮).
|
ಜಗದೇಕಮಲ್ಲ (೧೧೩೮-೧೧೫೦).
|
ತೈಲಪ, ತ್ರೈಲೋಕ್ಯಮಲ್ಲ, ನೂರ್ಮಡಿ(೧೧೫೦-೧೧೬೫)
|
ಸೋಮೇಶ್ವರ IV, ತ್ರಿಭುವನಮಲ್ಲ (೧೧೮೨-೧೧೮೯).

# ಕಲ್ಯಾಣದ ಚಾಲುಕ್ಯರು*

(೯೭೩–೧೧೮೧)

ಶ್ರೀವಲ್ಲಭನಹಿತಜಯ । ಶ್ರೀವಲ್ಲಭನೆನಿಸಿ ವಿಕ್ರಮಾದಿತ್ಯಂಗಂ ॥
ಶ್ರೀವಧುವೊಲೆಸೆವ ಬೊಂಥಾ । ದೇವಿಗವಾದಂ ತನೂಭವಂ ತೈಲನೃಪಂ ॥

—ಗದುಗಿನ ಶಿಲಾಲೇಖ

ಆಸತೋಃ ಕೀರ್ತಿರಾಶೇ ರಘುಕುಲತಿಲಕಸ್ಯಾಚ ಶೈಲಾದಿರಾಜಾ ।
ದಾಚ ಪ್ರತ್ಯಕ್‌ಪ್ರಯೋಧೇಶ್ಚಟುಲತಿಮಿಕುಲೋತ್ತುಂಗರಿಂಗತ್ತರಂಗಾತ್ ॥
ಆಚ ಪೃಥ್ವೀಸಮುದ್ರಾನ್ನತನೃಪತಿಶಿರೋರತ್ನಭಾಭಾಸುರಾಂಘ್ರೀಃ ।
ಪಾಯಾದಾಚಂದ್ರತಾರಂ ಜಯದಿದಮಖಿಲಂ ವಿಕ್ರಮಾದಿತ್ಯದೇವಃ ॥

—ಮಿತಾಕ್ಷರ (ವಿಜ್ಞಾನೇಶ್ವರ)

ಅಥ ಸುರಪಥವಲ್ಗದ್ದಿವ್ಯಭೇರೀನಿನಾದಂ ।
ಪ್ರಶಮಿತಪರಿತಾಪಂ ಭರ್ತೃಲಾಭಾತ್ ಪೃಥಿವ್ಯಾಃ ।
ಅಲಭತ ಚಿರಚಿತ್ತಾ ಚಾಂತ ಚಾಲುಕ್ಯಲಕ್ಷ್ಮೀಃ ।
ಕ್ಷಮುಷಮಭಿಷೇಕಂ ವಿಕ್ರಮಾದಿತ್ಯದೇವಃ ॥

—ವಿಕ್ರಮಾಂಕ ದೇವಚರಿತ (ಬಿಲ್ಹಣಕೃತ)

ಕನ್ನಡಿಗರೇ, ಈ ಪ್ರಕರಣದಲ್ಲಿ ನಾವು ನಿಮ್ಮ ರಾಜ್ಯವೈಭವದ ಪರಮಾವಧಿಯನ್ನು ವರ್ಣಿಸುವೆವು. ಈ ಕಲ್ಯಾಣ ಚಾಲುಕ್ಯರ ಕಾಲವೆಂದರೆ ಕರ್ನಾಟಕ ವೈಭವಸೂರ್ಯನ ಮಧ್ಯಾಹ್ನಕಾಲವು. ಬಾದಾಮಿಯ ಚಾಲುಕ್ಯರು ಬಿತ್ತಿದ ಬೀಜವು ರಾಷ್ಟ್ರಕೂಟರ ಕಾಲದಲ್ಲಿ ವೃಕ್ಷವಾಗಿ ಬೆಳೆದು, ಅದರ ಸವಿಯಾದ ಫಲಗಳು ಈ ಕಲ್ಯಾಣಚಾಲುಕ್ಯರ ಕಾಲದಲ್ಲಿ ತಿನ್ನಲಿಕ್ಕೆ ದೊರೆತವು. ಇವರ ಕಾಲದಲ್ಲಿ ಕನ್ನಡಿಗರ-

* ಉತ್ತರ ಕರ್ನಾಟಕದಲ್ಲಿ ಈ ಚಾಲುಕ್ಯರ ಲೇಖಗಳು ಸುಮಾರು ೩೦೦–೪೦೦ ದೊರೆತಿರುತ್ತವೆ. ಆದರೆ ಮೈಸೂರಿನವರು ಮುದ್ರಿಸಿದ ಲೇಖಗಳನ್ನು ಬಿಟ್ಟರೆ ಇತ್ತಕಡೆಗೆ ೧೦೧–೧೧೫ ಲೇಖಗಳು ಮಾತ್ರವೇ ಪ್ರಸಿದ್ಧವಾಗಿರುತ್ತವೆ. ಚಾಲುಕ್ಯ ವಿಕ್ರಮನೊಬ್ಬನ ಶಿಲಾಲೇಖಗಳೇ ಇನ್ನೂರರ ಮೇಲೆ ಇರುತ್ತವೆ. ಇವರ ಶಿಲಾಲೇಖಗಳು ಗದಗ, ಬೈರಮಟ್ಟಿ, ಅಮ್ಮಿನಭಾವಿ, ಮಿರಜ, ಬಂಕಾಪುರ, ಕರಿಗುದರಿ ಮುಂತಾದ ಅನೇಕ ಸ್ಥಳಗಳಲ್ಲಿ ದೊರೆಯುತ್ತವೆ.

ಕೀರ್ತಿಯು ದಶದಿಕ್ಕುಗಳಲ್ಲಿ ಹಬ್ಬಿತು. ಕನ್ನಡಿಗರ ಧ್ವಜಪತಾಕೆಯು ಈಶಾನ್ಯಕ್ಕೆ ಆಸಾಮು ಪ್ರಾಂತದಲ್ಲಿ ಊರಲ್ಪಟ್ಟಿತು. ಕರ್ನಾಟಕ ಅರಸರು ಅನೇಕ ಕವಿಪುಂಗವರಿಗೂ ವಿದ್ವಜ್ಜನರಿಗೂ ಆಶ್ರಯದಾತರಾದರು. ಈ ಬಗೆಯಾಗಿ ಕನ್ನಡಿಗರಿಗೆ ಅತ್ಯಂತ ಅಭಿಮಾನಾಸ್ಪದವಾದ ಈ ಚಾಲುಕ್ಯರ ಇತಿಹಾಸವನ್ನು ಇಲ್ಲಿ ಕೊಡುವೆವು.

ಈ ಚಾಲುಕ್ಯ ವಂಶದ ಮೂಲಪುರುಷನು ತೈಲಪನು. ಇವನು ಚೋಳ ಅರಸನನ್ನೂ ಚೇದಿ (ಬುಂದೇಲಖಂಡ) ಅರಸನನ್ನೂ ಗೆದ್ದನು. ಈ ತೈಲಪನು ಗುಜರಾಥ ಚಾಲುಕ್ಯ ವಂಶದ ಮೂಲಪುರುಷನಾದ ಮೂಲರಾಜನ ಮೇಲೆ ಬಾರಪ್ಪನೆಂಬವನನ್ನು ಕಳುಹಿದನು. ಆತನು ಮೂಲರಾಜನನ್ನು ಸೋಲಿಸಿದನು. ಆಮೇಲೆ ತೈಲಪನು ಮಾಳವ ದೇಶದ ಮೇಲೆ ದಾಳಿಯಿಟ್ಟನು. ಭಾರತೀಯರೆಲ್ಲರಿಗೂ ಅತಿ ಪರಿಚಿತನಾದ ಪ್ರಸಿದ್ಧ ಭೋಜರಾಜನ ಕಕ್ಕನಾದ ಮುಂಜನೆಂಬುವನೇ ಆಗ ಮಾಳವಾಧಿಪತಿಯಾಗಿದ್ದನು. ಈ ಮುಂಜನು ದೊಡ್ಡ ಸೈನ್ಯದೊಂದಿಗೆ ಗೋದಾವರಿಯನ್ನು ದಾಟಿ ಬಂದು ತೈಲಪನನ್ನು ಕೆಣಕಿದನು. ಆದರೆ ತೈಲಪನು ಅವನನ್ನು ಸೋಲಿಸಿ, ಸೆರೆ ಹಿಡಿದನು. ಮುಂಜನು ತಪ್ಪಿಸಿಕೊಳ್ಳಲಿಕ್ಕೆ ಯತ್ನಿಸಿದ್ದರಿಂದ ತೈಲಪನು ಆತನ ತಲೆ ಹಾರಿಸಿದನು. ಈತನ ಮಾಂಡಲಿಕನೊಬ್ಬನು ಸವದತ್ತಿಯಲ್ಲಿ ಜೈನ ಗುಡಿಗೆ ಭೂಮಿ ದಾನ ಕೊಟ್ಟಿರುತ್ತಾನೆ. ತೈಲಪನ ಹೆಂಡತಿಯ ಹೆಸರು ಜಾಕವ್ವೆ. ಇವಳು ತೈಲಪನು ಮುರಿದ ರಾಷ್ಟ್ರಕೂಟ ವಂಶದ ರಾಜಪುತ್ರಿಯು.

ತೈಲಪನ ತರುವಾಯ (೧೦೪೦) ಈ ವಂಶದ ದೊಡ್ಡ ಅರಸನು ಸೋಮೇಶ್ವರ ಆಹವಮಲ್ಲನು. ಪಟ್ಟವೇರಿದ ಕೂಡಲೆ ಇವನು ಚೋಳರೊಡನೆ ಕಾದಬೇಕಾಯಿತು. ಅವನನ್ನು ಗೆದ್ದನಂತರ ಉತ್ತರಕ್ಕೆ ತೆರಳಿ ಭೋಜನ ರಾಜಧಾನಿಯಾದ ಧಾರಾಪಟ್ಟಣವನ್ನು ತೆಗೆದುಕೊಂಡನು. ಚೇದಿ ಅರಸನಾದ ಕರ್ಣನನ್ನು ಹಿಡಿದು ಕೊಂದನು. ಅಲ್ಲಿಂದ ಹೊರಟು ಪಶ್ಚಿಮದ ಸಮುದ್ರದ ಕಡೆಗೆ ತಿರುಗಿ ಅಲ್ಲಿಯ ಅರಸನನ್ನು ಗೆದ್ದು, ವಿಜಯಸ್ತಂಭವನ್ನು ಊರಿ, ಸಮುದ್ರ ಮಾರ್ಗದಿಂದ ದಕ್ಷಿಣಕ್ಕೆ ಇಳಿದು ಬಂದನು, ಮುಂದೆ ಚೋಳರ ರಾಜಧಾನಿ

ಯಾದ ಕಂಚಿಯನ್ನು ತೆಗೆದುಕೊಂಡು, ಆ ಅರಸನನ್ನು ಓಡಿಸಿದನು. ಈ ಸೋಮೇಶ್ವರನು ಉತ್ತರದಲ್ಲಿ ಕನ್ಯಾಕುಬ್ಜ ಅಂದರೆ ಕನೋಜದ ಅರಸನನ್ನು ಗೆದ್ದುದರಿಂದ ಅವನು ಓಡಿಹೋಗಿ ಅಡವಿಯನ್ನು ಆಶ್ರಯಿಸಬೇಕಾಯಿತು. ಸೋಮೇಶ್ವರನೇ ಕಲ್ಯಾಣ ಪಟ್ಟಣವನ್ನು ಸ್ಥಾಪಿಸಿ ಅದನ್ನು ರಾಜಧಾನಿಯನ್ನಾಗಿ ಮಾಡಿದನು. ಇವನಿಗೆ ಸೋಮೇಶ್ವರ, ವಿಕ್ರಮಾದಿತ್ಯ ಮತ್ತು ಜಯಸಿಂಹ ಹೀಗೆ ಮೂರು ಮಂದಿ ಮಕ್ಕಳು. ೨ನೆಯ ಮಗನಾದ ವಿಕ್ರಮಾದಿತ್ಯನು ಇವರೆಲ್ಲರೊಳಗೆ ಚತುರನೂ ವಿದ್ವಾಂಸನೂ ಆಗಿದ್ದನು. ಅವನನ್ನೇ ಯುವರಾಜನನ್ನಾಗಿ ಮಾಡಬೇಕೆಂದು ಸೋಮೇಶ್ವರನ ಇಚ್ಛೆ. ಆದರೆ ವಿಕ್ರಮಾದಿತ್ಯನು ತನ್ನ ಅಣ್ಣನ ಹಕ್ಕನ್ನು ಮುಳುಗಿಸಲು ಇಚ್ಛಿಸಲಿಲ್ಲ. ಆದರೂ ತಂದೆಗೆ ಆತನ ಸಮರ ಸಾಹಸಗಳಲ್ಲಿ ಸಹಾಯ ಮಾಡಿದವನು ವಿಕ್ರಮನೇ. ಈ ವಿಕ್ರಮನು ಮೊದಲು ಚೋಳರನ್ನು ಗೆದ್ದು ಆ ರಾಜ್ಯವನ್ನು ತನ್ನ ರಾಜ್ಯಕ್ಕೆ ಕೂಡಿಸಿಕೊಂಡನು. ಮಾಳವದ ಅರಸನಿಗೆ ಸಹಾಯ ಮಾಡಿ, ಅವನು ಕಳೆದುಕೊಂಡ ಪಟ್ಟವನ್ನು ಅವನಿಗೆ ಕೊಡಿಸಿದನು. ಬಂಗಾಲ ಆಸಾಮು ಪ್ರಾಂತಗಳ ಮೇಲೆ ಹಾಳೀ ಇಟ್ಟನು. ಕೇರಳವನ್ನು ಕೆಣಕಿದನು. ಸಿಂಹಳದ್ವೀಪದ ಅರಸನು ಇವನಿಗೆ ಶರಣಾಗತನಾದನು. ಕಂಚಿಯನ್ನು ಕೈವಶ ಮಾಡಿಕೊಂಡನು. ಅಲ್ಲಿಂದ ವೆಂಗೀ ದೇಶ ಅಂದರೆ ತೆಲುಗು ದೇಶದ ಕಡೆಗೆ ಹೊರಳಿದನು. ಹೀಗೆ ವಿಕ್ರಮಾದಿತ್ಯನು ಒಂದೇ ಸವನೆ ರಾಜ್ಯಗಳನ್ನು ಗೆಲ್ಲುತ್ತ ಸಾಗಿರಲು, ಇತ್ತ ಅವನ ತಂದೆಯಾದ ಸೋಮೇಶ್ವರನಿಗೆ ವಿಷಮಜ್ವರ ಹುಟ್ಟಿತು. ಇನ್ನು ತನಗೆ ಬದುಕುವ ಆಶೆಯಿಲ್ಲವೆಂದು ತಿಳಿದಕೂಡಲೆ ಅವನು ತುಂಗಭದ್ರೆಯ ಬದಿಗೆ ಬಂದು, ಸುವರ್ಣದಾನ ಮೊದಲಾದವುಗಳನ್ನು ಮಾಡಿ ನದಿಯಲ್ಲಿ ಹೋಗಿ ಮುಳುಗಿ ಸತ್ತು ಹೋದರು. ಆಹವಮಲ್ಲನು ವಿದ್ಯಾಪಕ್ಷಪಾತಿಯು; ವಿದ್ವಾಂಸರಿಗೆ ಆಶ್ರಯದಾತನು. ಇವನ ಸದ್ಗುಣಗಳ ಮೂಲಕ ಕವಿಗಳು ಇವನನ್ನು ತಮ್ಮ ಕಾವ್ಯದಲ್ಲಿ ನಾಯಕನನ್ನಾಗಿ ಮಾಡಿರುವರೆಂದು ಬಿಲ್ಹಣನು ಇವನನ್ನು ವರ್ಣಿಸಿದ್ದಾನೆ.

ಇವನ ತರುವಾಯ ಇವನ ಹಿರಿಯ ಮಗನಾದ ಎರಡನೆಯ

ಸೋಮೇಶ್ವರನು ಪಟ್ಟವೇರಿದನು. ಇವನಿಗೆ ಭುವನೇಕಮಲ್ಲನೆಂಬ ಹೆಸರು. ವಿಕ್ರಮಾದಿತ್ಯನು, ತಮ್ಮ ತಂದೆಯು ಸತ್ತ ಸುದ್ದಿಯನ್ನು ಕೇಳಿ, ರಾಜಧಾನಿಗೆ ಬಂದು ತಾನು ತಂದ ಸುಲಿಗೆಯನ್ನೆಲ್ಲ ಅಣ್ಣನ ವಶಕ್ಕೆ ಒಪ್ಪಿಸಿದನು. ಆದರೆ ಈ ಸೋಮೇಶ್ವರನ ಆಳಿಕೆಯು ಪ್ರಜೆಗಳಿಗೆ ಸುಖಕರವಾಗಲಿಲ್ಲ. ಅವನು ತನ್ನ ಮಂತ್ರಿಗಳ ಮಾತನ್ನು ಕೇಳಲಿಲ್ಲ. ತನ್ನ ಕುಶಲ ತಮ್ಮನಾದ ವಿಕ್ರಮಾದಿತ್ಯನ ಉಪದೇಶಕ್ಕೂ ಕಿವಿಗೊಡಲಿಲ್ಲ. ಮನಬಂದಂತೆ ವರ್ತಿಸಿ ಪ್ರಜೆಗಳನ್ನು ಅಸಂತುಷ್ಟ ಪಡಿಸಿದನು. ಇಷ್ಟೇ ಅಲ್ಲ, ತನ್ನ ತಮ್ಮನಾದ ವಿಕ್ರಮಾದಿತ್ಯನ ವಿರುದ್ಧವಾಗಿಯೇ ಪ್ರಯತ್ನ ನಡಿಸಿದನು. ಈ ಸಂಗತಿಯನ್ನು ತಿಳಿದು ಕೊಂಡು ವಿಕ್ರಮಾದಿತ್ಯನು ದೊಡ್ಡದೊಂದು ಸೈನ್ಯದೊಡನೆ. ತನ್ನ ತಮ್ಮನಾದ ಜಯಸಿಂಹನನ್ನು ಕರೆದುಕೊಂಡು ರಾಜಧಾನಿಯನ್ನು ಬಿಟ್ಟನು. ಸೋಮೇಶ್ವರನು ತಮ್ಮನನ್ನು ಹಿಡಿಯಲಿಕ್ಕೆ ಸೈನ್ಯ ಕಳು ಹಿದನು. ಆದರೆ ವಿಕ್ರಮನು ಅದನ್ನು ನುಚ್ಚುನುರಿಯಾಗಿ ಮಾಡಿ ದನು. ಅನಂತರ ವಿಕ್ರಮನು ಕದಂಬರನ್ನು ಕೂಡಿಕೊಂಡು ಅವರ ಅರಸನಾದ ಜಯಕೇಶಿಯಿಂದ ವಿಪುಲವಾಗಿ ಧನಕನಕಾದಿಗಳನ್ನು ತೆಗೆದು ಕೊಂಡು ಜೋಳ ರಾಜ್ಯದ ಕಡೆಗೆ ತಿರುಗಿದನು. ಸೋಮೇಶ್ವರನ ಆಳಿ ಕೆಗೆ ಜನರು ಮೊದಲೇ ಬೇಸತ್ತುದರಿಂದ, ವಿಕ್ರಮನು ಹೋದ ಹೋದಲ್ಲಿ, ಮಾಂಡಲಿಕ ಅರಸರು ಅವನನ್ನು ಗೌರವಿಸುತ್ತ ಬಂದರು. ಆಳುಪ, ಕೇರಳ, ಮುಂತಾದ ರಾಜ್ಯಗಳ ಅರಸರು ಈ ಬಗೆಯಾಗಿ ವಿಕ್ರಮನಿಗೆ ನೆರವಾದುದರಿಂದ, ಅವನು ಧೈರ್ಯದಿಂದ ಜೋಳರಾಜ್ಯದ ದಾರೀ ಹಿಡಿದು ಅಲ್ಲಿಗೆ ಬಂದು ಸೈನ್ಯದೊಂದಿಗೆ ತಲ್ಪಿದನು. ಅಲ್ಲಿಯ ಅರಸನು ವಿಕ್ರಮನೊಡನೆ ಸಂಧಿಯನ್ನು ಮಾಡಬೇಕೆಂದು ಕುತೂಹಲ ವುಳ್ಳವನಾಗಿ, ತನ್ನ ಮಗಳನ್ನು ಅವನಿಗೆ ಮದುವೆ ಮಾಡಲು ಇಚ್ಛಿಸಿ ದನು. ವಿಕ್ರಮನು ಬಹು ಧೂರ್ತನು. ಅವನು ಈ ಸುಸಂಧಿಯನ್ನು ಕಳೆದುಕೊಳ್ಳದೆ ಆ ಜೋಳ ರಾಜಪುತ್ರಿಯನ್ನು ಮದುವೆ ಮಾಡಿ- ಕೊಂಡು ಅವಳೊಡನೆ ತುಂಗಭದ್ರಾ ನದಿಯ ತೀರಕ್ಕೆ ಬಂದು ತಳ ವೂರಿದನು. ಕೆಲವು ದಿವಸಗಳಲ್ಲಿಯೇ ಜೋಳ ರಾಜ್ಯದಲ್ಲಿ ದೊಡ್ಡ

ಕ್ರಾಂತಿಯಾಯಿತು, ವಿಕ್ರಮನ ಮಾವನು ಮಡಿದನು. ಒಡನೆಯೆ ವಿಕ್ರಮನು ಕಂಚಿಗೆ ಹೋಗಿ ತನ್ನ ಬೀಗನನ್ನು ಪಟ್ಟಕ್ಕೆ ಕುಳ್ಳಿರಿಸಿದನು. ಆದರೆ ವಿಕ್ರಮನು ಮರಳಿ ಬಂದ ಕೂಡಲೆ, ವೆಂಗಿ ದೇಶದ ಅರಸನಾದ ಕುಲೋತ್ತುಂಗ ಅಥವಾ ರಾಜಿಗನೆಂಬ ಮಹಾಪ್ರತಾಗಿಯು ವಿಕ್ರಮನ ಬೀಗನನ್ನು ಗಾದಿಯಿಂದ ತಳ್ಳಿ ಚೋಳ ಸಿಂಹಾಸನವನ್ನು ಆಕ್ರಮಿಸಿದನು. ಇನ್ನು ವಿಕ್ರಮನು ತನ್ನ ಮೇಲೆ ಏರಿಬರುವನೆಂದು ತಿಳಿದು ಆ ರಾಜಿಗನು ವಿಕ್ರಮನ ಅಣ್ಣನಾದ ಸೋಮೇಶ್ವರನ ಕಿವಿಯೂದಿ ಅವನನ್ನು ವಿಕ್ರಮನಿಗೆ ವಿರುದ್ಧವಾಗಿ ನಿಲ್ಲಿಸಿದನು. ಈ ಹೊತ್ತಿನಲ್ಲಿ ವಿಕ್ರಮನು ತೋರಿಸಿದ ಶೌರ್ಯ-ಧೈರ್ಯಗಳು ವಿಲಕ್ಷಣವಾಗಿದ್ದವು. ಇತ್ತ ಮೇಲ್ಗಡೆಯಿಂದ ತನ್ನ ಅಣ್ಣನಾದ ಸೋಮೇಶ್ವರನು ಬೆನ್ನಟ್ಟಿ ಬರುತ್ತಿದ್ದನು. ಅತ್ತ ರಾಜಿಗನ ಸೈನ್ಯವು ದಕ್ಷಿಣದಿಂದ ವಿಕ್ರಮನನ್ನು ಮೇಲ ಕ್ಕೊತ್ತಬೇಕೆಂದು ಹವಣಿಸಿತು. ಆದರೆ ವಿಕ್ರಮನು ತನ್ನ ಅಣ್ಣನನ್ನು ಅಲಕ್ಷಿಸಿ, ರಾಜಿಗನ ಸೈನ್ಯವನ್ನು ಸೋಲಿಸಬೇಕೆಂದು ದಕ್ಷಿಣಕ್ಕೆ ಸಾಗಿದನು. ರಾಜಿಗನ ಸೈನ್ಯದ ಹತ್ತಿರ ಬಂದು ತಲ್ಪುವಷ್ಟರಲ್ಲಿ ಅಣ್ಣನ ಸೈನ್ಯವು ವಿಕ್ರಮನ ಸೈನ್ಯದ ಬೆನ್ನು ಹಿಂದೆ ಬಂದು ನಿಂತಿತು. ವಿಕ್ರಮನು ಈ ಆತ್ಮಘಾತಕದ ಕೃತ್ಯವು ಸರಿಯಲ್ಲವೆಂದು ತನ್ನ ಅಣ್ಣನಿಗೆ ಉಪದೇಶಿಸಿದನು. ಆದರೆ ಸೋಮೇಶ್ವರನಿಗೆ ಅದನ್ನು ಆಲಿಸುವಷ್ಟು ಬುದ್ಧಿಯು ಎಲ್ಲಿತ್ತು ? ಆದುದರಿಂದ ನಿರುಪಾಯನಾಗಿ ಅತ್ಯಂತ ಧೈರ್ಯ ತಾಳಿ, ಬೆನ್ನಹಿಂದಿನ ಮತ್ತು ಬೆನ್ನಮುಂದಿನ— ಹೀಗೆ ಎರಡೂ ಕಡೆಯ ಸೈನ್ಯಗಳೊಂದಿಗೆ ಒಮ್ಮೆಲೆ ಯುದ್ಧ ಮಾಡುವುದನ್ನೇ ನಿಶ್ಚಯಿಸಿದನು. ಮತ್ತು ರಾಜಿಗನ ಸೈನ್ಯವನ್ನು ಸಂಪೂರ್ಣವಾಗಿ ಸೋಲಿಸಿದುದರಿಂದ ರಾಜಿಗನು ಪಲಾಯನಸೂತ್ರವನ್ನು ಹೇಳಿದನು. ಇತ್ತ ಸೋಮೇಶ್ವರನನ್ನಂತೂ ಸೆರೆಯಾಳಾಗಿಯೇ ಹಿಡಿದನು. ಮುಂದೆ ಅವನನ್ನು ಸಿಂಹಾಸನದಿಂದ ತಳ್ಳಿ, ತಾನೇ ಪಟ್ಟವೇರಿ ರಾಜ್ಯವಾಳಲು ಪ್ರಾರಂಭಿದನು.

ಈ ಬಗೆಯಾಗಿ ವಿಕ್ರಮನು ತಮ್ಮ ತಂದೆಯ ಕಾಲಕ್ಕೂ ಅಣ್ಣನ ಕಾಲಕ್ಕೂ ತಾನೇ ಯಾವತ್ತೂ ಶೂರಕೃತ್ಯಗಳನ್ನು ಮಾಡಿ ಹೆಸರುವಾಸಿ-

ಯಾಗಿ ೧೦೭೬ ನೆಯ ಇಸವಿಯಲ್ಲಿ ಪಟ್ಟವೇರಿದನು. ಇವನೇ ಕನ್ನಡಿಗರೆಲ್ಲರಿಗೂ ಅತ್ಯಂತ ಅಭಿಮಾನಾಸ್ಪದನಾದ ಅರಸನು. ಇವನು ನಮ್ಮ ಅರಸರೊಳಗೆ ಎಲ್ಲಕ್ಕೂ ಶ್ರೇಷ್ಠನಾದ ಅರಸನು. ಇವನ ಕಾಲಕ್ಕೆ ಕರ್ನಾಟಕದ ರಾಜ್ಯ ವಿಸ್ತಾರವು ಪರಮಾವಧಿಯನ್ನು ಮುಟ್ಟಿತು. ಇವನು ವಿದ್ಯಾಪಕ್ಷಪಾತಿಯಾದುದರಿಂದ ವಿದ್ವಾಂಸರೆಲ್ಲರೂ ಇವನನ್ನೇ ಆಶ್ರಯಿಸಿದರು. ಬಿಲ್ಹಣನು ಇವನ ಆಸ್ಥಾನದಲ್ಲಿ ವಿದ್ಯಾಪತಿಯಾಗಿದ್ದನು. ಇವನೇ 'ವಿಕ್ರಮಾಂಕದೇವಚರಿತ' ವೆಂಬ ಇವನ ವಿಷಯವಾದ ಕಾವ್ಯವನ್ನು ಬರೆದಿರುವನು.

ಈ ವಿಕ್ರಮನಿಗೆ ಚಾಲುಕ್ಯವಿಕ್ರಮ ಅಥವಾ ತ್ರಿಭುವನಮಲ್ಲನೆಂದು ಹೆಸರು. ಕಲಿವಿಕ್ರಮ ಪೆರ್ಮಾಡಿರಾಯನೆಂದೂ ಬಿರುದುಗಳುಂಟು. ಈತನು ತಾನು ಪಟ್ಟವೇರಿದ ಕೂಡಲೆ, ತನ್ನದೊಂದು ಬೇರೆ ಶಕವನ್ನು ಪ್ರಾರಂಭಿಸಿದನು. ಆದರೆ ಅವನ ತರುವಾಯದಲ್ಲಿ ಆಗಿ ಹೋದ ಅರಸರು ಅವನಂತೆ ಬಲಾಢ್ಯರಾಗಿಲ್ಲದ್ದರಿಂದ ಆ ಶಕವು ಮುಂದೆ ಬಹಳ ದಿವಸ ಬಾಳಲಿಲ್ಲ. ಇರಲಿ. ವಿಕ್ರಮನು ಅರಸನಾದ ನಂತರ ಕರ್ಹಾಡಕ್ಕೆ ಹೋಗಿ ಅಲ್ಲಿಯ ಅರಸನ ಮಗಳಾದ ಚಂದ್ರಲೇಖಾ ಅಥವಾ ಚಂದಲಾದೇವಿಯನ್ನು ಮದುವೆಯಾದನು. ಇವಳು ಅತ್ಯಂತ ಸುಂದರಿಯು. ವಿಕ್ರಮನು ಪಟ್ಟವೇರಿದ ನಂತರ ಅವನ ತಮ್ಮನಾದ ಜಯಸಿಂಹನಿಗೆ ದುರಾಶೆ ಹುಟ್ಟಿ ಅವನು ಅಣ್ಣನಿಗೆ ವಿರುದ್ಧವಾಗಿ ಬನವಾಸಿಯಲ್ಲಿ ಒಳಸಂಚು ಹೂಡಿದನು. ಚಾಲುಕ್ಯ ವಿಕ್ರಮನು ಅವನಿಗೆ ಹಾಗೆ ಮಾಡಬೇಡವೆಂದು ಒಳ್ಳೆಯ ರೀತಿಯಿಂದ ಹೇಳಿ ನೋಡಿದರೂ ಅವನು ಕೇಳಲಿಲ್ಲ. ಜಯಸಿಂಹನು ತನ್ನದೊಂದು ಸೈನ್ಯವನ್ನೇ ಸಿದ್ಧಪಡಿಸಿ ಕೃಷ್ಣೆಯ ದಡಕ್ಕೆ ಬಂದು ತಳವೂರಿದನು. ಅಲ್ಲಿ ಅಣ್ಣ-ತಮ್ಮಂದಿರ ನಡುವೆ ಭಯಂಕರ ಕಾಳಗವೆಸಗಿತು. ಜಯಸಿಂಹನು ಓಡಿ ಅಡವಿಯಪಾಲಾದನು. ಮುಂದೆ ವಿಕ್ರಮನ ಸೈನ್ಯದವರು ಅವನನ್ನು ಹಿಡಿದು ವಿಕ್ರಮನೆದುರಿಗೆ ತಂದರು. ವಿಕ್ರಮನು ಅವನನ್ನು ಕ್ಷಮಿಸಿ ಬಿಟ್ಟುಕೊಟ್ಟನು. ಮುಂದೆ ಅನೇಕ ವರ್ಷಗಳ ವರೆಗೆ ವಿಕ್ರಮನು ಶಾಂತಿಯಿಂದ ರಾಜ್ಯವಾಳಿದನು. ಅವನ ಆಳಿಕೆಯ ಕೊನೆಯ

ಭಾಗದಲ್ಲಿ ಹೊಯ್ಸಳರ ವಿಷ್ಣುವರ್ಧನನೆಂಬವನು ಬಂಡಾಯವನ್ನೆಬ್ಬಿಸಿ ದನು. ಆದರೆ ವಿಕ್ರಮನ ಸರದಾರನಾದ ಅಚ್ಚ ಅಥವಾ ಅಚ್ಚಿಗನೆಂಬ ವನು ಆ ಬಂಡಾಯವನ್ನು ತಗ್ಗಿಸಿ, ಪಾಂಡ್ಯ, ಕೊಂಕಣ ಮುಂತಾದ ಅರಸರನ್ನು ಮುರಿದನು. ಚೋಳ ಅರಸನ ಕೂಡ ವಿಕ್ರಮನು ಸ್ವಂತ ತಾನೇ ಯುದ್ಧ ಮಾಡಿ ಅವನನ್ನು ಸೋಲಿಸಿದನು. ಅನಂತರ ಕಲ್ಯಾಣಕ್ಕೆ ಬಂದು ವಿಕ್ರಮಪುರವೆಂಬ ತನ್ನ ಹೆಸರಿನದೊಂದು ಪಟ್ಟಣವನ್ನು ಸ್ಥಾಪಿ ಸಿದನು. ಇವನಿಗೆ ೧೬ ಮಂದಿ ಮಾಂಡಲಿಕ ರಾಜರಿದ್ದರು.

ಈತನ ಆಳಿಕೆಯು ಪ್ರಜೆಗಳಿಗೆ ಅತ್ಯಂತ ಸುಖಕರವಾಗಿತ್ತು. ಬಡ ಬಗ್ಗರಿಗೆ ಈತನು ಆಶ್ರಯದಾತನು. ಮಿತಾಕ್ಷರಿಯ ಕರ್ತನಾದ ವಿಜ್ಞಾನೇಶ್ವರನು ಇವನ ಹತ್ತಿರವೇ ಇದ್ದನು. ಈತನ ರಾಜವರ್ಣನೆ ಯನ್ನು ನಾವು ಮುಂದೆ ವೈಭವವರ್ಣನೆಯ (೧೨ನೆಯ) ಪ್ರಕರಣದಲ್ಲಿ ಕೊಟ್ಟಿರುವೆವು. ಆದನ್ನು ಓದಿ ಯಾವ ಕನ್ನಡಿಗನ ಹೃದಯವು ತಾನೇ ಆನಂದದಿಂದ ಉಕ್ಕೇರುವುದಿಲ್ಲ ? ಯಾವನ ಮನಸ್ಸು ತಾನೇ ಅಭಿಮಾನ ವನ್ನು ತಾಳುವದಿಲ್ಲ ?

ಚಾಲುಕ್ಯ ವಿಕ್ರಮನ ತರುವಾಯ, ಈತನ ಮಗನಾದ ೩ ನೆಯ ಸೋಮೇಶ್ವರನು ಪಟ್ಟವೇರಿ ೧೧ ವರ್ಷ ಆಳಿದನು. ಅಷ್ಟರಲ್ಲಿಯೇ ಈತನು ಆಂಧ್ರ, ದ್ರವಿಡ, ಮಗಧ, ನೇಪಾಳ ದೇಶಗಳ ಅರಸರನ್ನು ಗೆದ್ದನೆಂದೂ ವಿದ್ವಾಂಸರಿಂದ ಹೊಗಳಲ್ಪಟ್ಟನೆಂದಳ ವರ್ಣನೆಯುಂಟು. ಸೋಮೇಶ್ವರನು ಸ್ವತಃ ಗ್ರಂಥಕರ್ತನು. ಈ ಸೋಮೇಶ್ವರನು ಸಂಸ್ಕೃತ ದಲ್ಲಿ ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿಯೆಂಬ ಒಂದು ರಾಜಕೀಯ ಗ್ರಂಥವನ್ನು ಬರೆದನು. ಅದರಲ್ಲಿ, ರಾಜ್ಯವನ್ನು ಹೇಗೆ ಗಳಿಸಬೇಕು, ಗೆದ್ದ ರಾಜ್ಯವನ್ನು ಹೇಗೆ ರಕ್ಷಿಸಿಕೊಳ್ಳಬೇಕು, ಅರ ಸರು ಎಂತೆಂತಹ ವಿಲಾಸಗಳನ್ನು ಉಪಭೋಗಿಸಬೇಕು, ಇವೇ ಮೊದ ಲಾದ ವಿಷಯಗಳೂ ಬೇಟೆ ಮುಂತಾದ ವಿಷಯಗಳೂ ಇರುತ್ತವೆ. ಈತನು ಬಹಳ ವಿದ್ವಾಂಸನಾದುದರಿಂದ ಈತನಿಗೆ 'ಸರ್ವಜ್ಞಭೂಪ' ನೆಂದು ಬಿರುದು.

ಈತನ ತರುವಾಯದ ಅರಸರು ನಿರ್ಬಲರಾಗಿದ್ದುದರಿಂದ

ಮಾಂಡಲಿಕ ರಾಜರೇ ಸ್ವತಂತ್ರರಾಗುತ್ತ ಬಂದರು. ೨ನೆಯ ತೈಲಪನ ಕಾಲಕ್ಕೆ ಮಾಂಡಲಿಕ ರಾಜನಾದ ಬಿಜ್ಜಣನೆಂಬವನು ಕೊಲ್ಹಾಪುರ, ಕಾಕತೀಯ ಮುಂತಾದ ಅರಸರ ಸಹಾಯದಿಂದ ಚಾಲುಕ್ಯರ ತೈಲಪನನ್ನು ತಳ್ಳಿದನು. ತೈಲಪನು ಕಲ್ಯಾಣವನ್ನು ಬಿಟ್ಟು ಅಣ್ಣಿಗೇರಿಯನ್ನು ರಾಜಧಾನಿಯನ್ನಾಗಿ ಮಾಡಿದನು. ಬಿಜ್ಜಳನು ಅಲ್ಲಿಂದಲೂ ತೈಲಪನನ್ನು ಓಡಿಸಿದುದರಿಂದ ಅವನು ಬನವಾಸಿಗೆ ಓಡಿದನು. ಚಾಲುಕ್ಯರ ಸಿಂಹಾಸನವನ್ನು ಬಿಜ್ಜಳನ ವಂಶದವರು ಆಕ್ರಮಿಸಿದರು. ಆದರೆ ಆ ವಂಶವು ಬಹಳ ದಿನ ಬಾಳಲಿಲ್ಲ. ಬೊಮ್ಮನೆಂಬ ಸರದಾರನ ಸಹಾಯದಿಂದ ೪ನೆಯ ಸೋಮೇಶ್ವರನು ಪುನಃ ಕೆಲವು ದಿವಸ ರಾಜ್ಯವಾಳಿದನು. ಆದರೆ ಹೊಯ್ಸಳರು ಪ್ರಬಲರಾಗಿ ಚಾಲುಕ್ಯರ ವಂಶವನ್ನು ಮುರಿದರು.

---

## ೧೦ನೆಯ ಪ್ರಕರಣ

# ಕಲಚೂರ್ಯ-ಯಾದವ ಮುಂತಾದವರು

## ( ೧೧೫೬-೧೧೮೩ )

### ಕಲಚೂರ್ಯರು

ಬಿಜ್ಜಳನು ಮೊದಲು ರಾಷ್ಟ್ರಕೂಟರ ಮಹಾಮಂಡಲೇಶ್ವರನಾಗಿ-ದ್ದಂತೆ ತೋರುತ್ತದೆ. ಈತನು ಚಾಲುಕ್ಯರ ಕೊನೆಯ ಅರಸನಾದ ತೈಲಪನನ್ನು ಓಡಿಸಿ ಸಾರ್ವಭೌಮನಾದ ಸಂಗತಿಯನ್ನು ಹೋದ ಪ್ರಕರಣದಲ್ಲಿ ಹೇಳಿರುವೆವಷ್ಟೇ ! ಆದರೆ ಬಿಜ್ಜಳನು ಈ ಸಾರ್ವಭೌಮ ಪದವಿಯನ್ನು ಬಹಳ ದಿನ ಅನುಭವಿಸಲಿಲ್ಲ. ಕಲ್ಯಾಣದಲ್ಲುಂಟಾದ ಧರ್ಮಕ್ರಾಂತಿಯ ಗೊಂದಲದಲ್ಲಿ ಅವನು ತನ್ನ ಜೀವಕ್ಕೆ ಎರವಾಗಬೇಕಾಯಿತು. ಈ ಧರ್ಮಕ್ರಾಂತಿಯ ವಿವರವನ್ನು ಕೆಳಗೆ ಕೊಟ್ಟಿದೆ.

ವಿಜಾಪುರ ಜಿಲ್ಲಾ ಬಾಗೇವಾಡಿಯಲ್ಲಿ ಮಂಡಿಗೆಯ ಮಾದಿರಾಜನೆಂಬೊಬ್ಬ ಆರಾಧ್ಯ ಬ್ರಾಹ್ಮಣನಿದ್ದನು. ಅವನ ಮಗನೇ ಬಸವನು. ಬಿಜ್ಜಳನ ಮಂತ್ರಿಯಾದ ಬಲದೇವನು ಈ ಬಸವನ ಸೋದರಮಾವನು. ಬಸವನು ಬಲದೇವನ ಮಗಳಾದ ಗಂಗಾಂಬಿಕೆ ಎಂಬವಳನ್ನು ಮದುವೆಯಾಗಿದ್ದನು. ಬಲದೇವನು ಮರಣಹೊಂದಿದ ಬಳಿಕ, ಬಿಜ್ಜಳನು ಬಸವನನ್ನು ತನ್ನ ಮಂತ್ರಿಯನ್ನಾಗಿ ನಿಯಮಿಸಿಕೊಂಡನು. ಬಸವನಿಗೆ ನಾಗಾಂಬಿಕಾ ಎಂಬೊಬ್ಬ ಅಕ್ಕನಿದ್ದಳು. ಇವಳ ಹೊಟ್ಟೆಯಿಂದ ಚೆನ್ನಬಸವೇಶನು ಹುಟ್ಟಿದನು. ಬಸವನು ಲಿಂಗಾಯತ ಧರ್ಮವನ್ನು ಬೆಳೆಯಿಸಿ, ಬಹುಜನ ಜೈನರನ್ನು ತನ್ನ ಮತಕ್ಕೆ ಸೇರಿಸಿಕೊಂಡದ್ದರಿಂದ

ಬಿಜ್ಜಳನಿಗೂ ಅವನಿಗೂ ಬೇಸರುಂಟಾಯಿತು. ಬಸವನ ಗುರುವಾ ಅಲ್ಲಮಪ್ರಭು ಶ್ರೀಶೈಲಕ್ಕೆ ಹೋಗಿ ಐಕ್ಯನಾಗಲು, ಬಸವನು ಸಹ ಕ್ಷ ಡಿಯ ಸಂಗಮನಾಥನಲ್ಲಿ ಐಕ್ಯಗೊಂಡನು. ಬಳಿಕ ಬಿಜ್ಜಳನು ಚನ್ನ ಬಸವೇಶನಿಗೆ ಮಂತ್ರಿಪದವಿಯನ್ನು ಕೊಟ್ಟನು. ಲಿಂಗಾಯತ ಮತಸ್ಥ ರಾದ ಹರಳಯ್ಯ, ಮಧುವಯ್ಯ ಎಂಬಿಬ್ಬರು ಬೇರೆ ಬೇರೆ ಕುಲದವ ಪರಸ್ಪರ ಬಾಂಧವ್ಯವನ್ನು ಬೆಳೆಸಿದರೆಂಬ ಕಾರಣದಿಂದ ಬಿಜ್ಜಳನು ಅ ರನ್ನು ಆನೆ ಕಾಲಿಗೆ ಕಟ್ಟಿ ಎಳೆಸಲು, ದೊರೆಯನ್ನು ಶಿಕ್ಷಿಸಬೇಕೆಂದು ಜಗದೇವ-ಬೊಮ್ಮಯ್ಯರು ಸಂಕಲ್ಪಿಸಿ, ಚೆನ್ನಬಸವೇಶನ ಅಪ್ಪಣೆಯನ್ನು ಪಡೆದು, ದೊರೆಯ ಬಳಿಯಲ್ಲಿ ದೀವಟಿಗೆಯ ಉದ್ಯೋಗವನ್ನು ಸ್ವೀಕ- ರಿಸಿದರು. ಮುಂದೆ ಹೊತ್ತು ಸಾಧಿಸಿ, ಜಗದೇವ-ಮಲ್ಲಯ್ಯ-ಬೊಮ್ಮ- ಯ್ಯರು ಅರಸನನ್ನು ಇರಿದು ಕೊಂದರು. ಇದರಿಂದ ಪಟ್ಟಣದಲ್ಲಿ ಹಾಹಾ ಕಾರವೆದ್ದಿತು. ಈ ಸುದ್ದಿಯನ್ನು ಕೇಳಿ, ಚನ್ನಬಸವನು ಇಲ್ಲಿರುವುದು ತಕ್ಕದ್ದಲ್ಲೆಂದೆಣಿಸಿ, ಶಿವಶರಣರೊಡನೆ ಉಳವಿಗೆ ಹೊರಟನು. ಅಳಿಯ ಬಿಜ್ಜಳನು ಮಹಾಸೇನೆಯೊಂದಿಗೆ ಬಂದು, ಅವರ ಮೇಲೆ ಬಿದ್ದು ಅಪಜ ಯಪಟ್ಟು ಹಿಂದಿರುಗಿದನು. ಬಳಿಕ ಚನ್ನಬಸವನು ತನ್ನ ಸಂಗಡಿಗರೊ ಡನೆ ಉಳವಿಯ ಮಹಾಮನೆಗೆ ಹೋಗಿ ಅಲ್ಲಿಯೇ ಬಯಲಾದನು.

ಜೈನರ ಕಥೆಯು ಇದರಿಂದ ಭಿನ್ನವಾಗಿದೆ. ಅವರು ಬಿಜ್ಜಳನನ್ನು ಕೊಂದ ದೋಷವನ್ನು ಬಸವನ ಮೇಲೆ ಹೊರಿಸುತ್ತಾರೆ. ಆದರೆ ಅದು ಏನೇ ಇರಲಿ, ಬಸವ, ಚನ್ನಬಸವೇಶರು ಧಾರ್ಮಿಕ ಗುರುಗಳಿದ್ದಂತೆಯೇ ರಾಜಕಾರಣಪಟುಗಳೂ ಇದ್ದರೆಂದು ಮಾತ್ರ ನಿರ್ವಿವಾದವಾಗಿ ಹೇಳಬಹುದು. ಸಮಾಜ ಸುಧಾರಣೆಯನ್ನು ಮಾಡಲಿಚ್ಛಿಸುವವರೆಲ್ಲರೂ ಲಿಂಗಾಯತ ಧರ್ಮದವರು ಸ್ವೀಕರಿಸಿದ ಪದ್ಧತಿಯನ್ನು ಸೂಕ್ಷ್ಮವಾಗಿಯೂ, ಕೂಲಂ ಕುಷವಾಗಿಯೂ ಅಭ್ಯಾಸ ಮಾಡುವಂತಿದೆ. ಧರ್ಮಕ್ಕೂ ರಾಜಕಾರಣಕ್ಕೂ ಹಾಕಿರುವ ಈ ತಳಕು ನಮ್ಮ ಕರ್ನಾಟಕ ಇತಿಹಾಸದಲ್ಲಿ ಪದೇ ಪದೇ ಕಾಣಬರುತ್ತದೆ.

ಬಿಜ್ಜಳನ ಮರಣದ ನಂತರ ಈ ಕಲಚೂರ್ಯ ವಂಶವು ಬಹಳ ದಿವಸ ಬಾಳಲಿಲ್ಲ.

## ದೇವಗಿರಿ ಯಾದವರ ವಂಶಾವಳಿ




## ದೇವಗಿರಿ ಯಾದವರು

### (೧೧೧೫-೧೩೧೮)

ಚಾಲುಕ್ಯರ ಅಳಿಗಾಲಕ್ಕೆ ಆರಂಭವಾದಾಗ, ಹೊಯ್ಸಳ ಯಾದವರ ಅಸರನಾದ ವಿಷ್ಣುವರ್ಧನನು, ಕೃಷ್ಣಾನದಿಯ ಹತ್ತಿರವಿರುವ ಚಾಲುಕ್ಯರ ಸೀಮೆಯನ್ನು ಕಿತ್ತುಕೊಳ್ಳಲಿಕ್ಕೆ ಪ್ರಯತ್ನಿಸಿದ್ದನು. ಆದರೆ ಆಗಿನ ಚಾಲುಕ್ಯರ ಅರಸನು ಪ್ರಬಲನಾಗಿದ್ದುದರಿಂದ ವಿಷ್ಣುವರ್ಧನನ ಆಟವು ಸಾಗಲಿಲ್ಲ. ಮುಂದೆ ಚಾಲುಕ್ಯವಂಶವು ಅಡಗಿ, ಕಲಚೂರಿ ವಂಶವು ಕೂಡ ನಷ್ಟವಾಗಿ, ರಾಜ್ಯದಲ್ಲಿ ಗೊಂದಲವೆದ್ದಾಗ, ವಿಷ್ಣುವರ್ಧನನ ಮೊಮ್ಮಗನಾದ ವೀರಬಲ್ಲಾಳನು ಬೊಮ್ಮನೊಡನೆ ಕಾಳಗ ಮಾಡಿ, ಕೆಲವು ಸೀಮೆಯನ್ನು ತೆಗೆದುಕೊಂಡನು. ಇದೇ ಸಂಧಿಯನ್ನು ಸಾಧಿಸಿ, ಉತ್ತರದಲ್ಲಿಯೂ ಯಾದವರು ಸುತ್ತುಮುತ್ತಲೂ ತಮ್ಮ ಕಾಲು ಚಾಚಿದರು. ಭಿಲ್ಲಮನು ರಾಜ್ಯವಿಸ್ತಾರವನ್ನು ಮಾಡಿ ಕಲ್ಯಾಣದ ಅರಸೊತ್ತಿಗೆಯನ್ನು ಹತ್ತಿ ಹಾಕಿದನು. ಆವನು ಕೃಷ್ಣೆಯ ಉತ್ತರ

ಕ್ಕಿರುವ ಸೀಮೆಗೆಲ್ಲಾ ಅರಸನಾಗಿ, ೧೧೮೭ನೆಯ ಇಸವಿಯಲ್ಲಿ ದೇವಗಿ ಪಟ್ಟಣವನ್ನು ಸ್ಥಾಪಿಸಿ ಅಲ್ಲಿ ಆಳತೊಡಗಿದನು. ಇತ್ತ ಹೊಯ್ಸಳ ಅರ ನಾದ ವೀರಬಲ್ಲಾಳನು ಉತ್ತರಕ್ಕೆ ಕೈಚಾಚುತ್ತಿದ್ದನು. ಈ ವೇಳೆ ಹೊಯ್ಸಳ ಯಾದವರಿಗೂ ದೇವಗಿರಿ ಯಾದವರಿಗೂ ಕೃಷ್ಣೆಯ ಹತ್ತಿ ವಿರುವ ಸೀಮೆಯ ಒಡೆತನಕ್ಕಾಗಿ ಮೇಲಿಂದ ಮೇಲೆ ಕಾಳಗಗಳೆದ್ದುವು. ಕೊನೆಗೆ ಲಕ್ಕುಂಡಿಯಲ್ಲಾದ ದೊಡ್ಡ ಕಾಳಗದಲ್ಲಿ ಹೊಯ್ಸಳ ಅರ ನಾದ ವೀರಬಲ್ಲಾಳನು ಭಿಲ್ಲಮನ ಮಗನಾದ ಜೈತ್ರಸಿಂಹನನ್ನು ಸಂಪೂ ರ್ಣವಾಗಿ ಸೋಲಿಸಿ, ಕುಂತಳ ದೇಶಕ್ಕೆ ಅಧಿಪತಿಯಾದನು. ಭಿಲ್ಲಮನ ತರುವಾಯ ೧೧೧೩ನೆಯ ಶಕದಲ್ಲಿ ಅವನ ಮಗನಾದ ಜೈತ್ರಪಾಲನು ಅಥವಾ ಜೈತುಗಿಯು ಪಟ್ಟವೇರಿದನು. ಪ್ರಸಿದ್ಧ ಜ್ಯೋತಿಷ್ಯನಾದ ಭಾಸ್ಕ ರಾಚಾರ್ಯನ ಮಗನಾದ ಲಕ್ಷ್ಮೀಧರನು ಈ ಜೈತ್ರಪಾಲನ ಆಸ್ಥಾನದಲ್ಲಿ ಪಂಡಿತನಾಗಿದ್ದನು.

ಅನಂತರ ಅವನ ಮಗನಾದ ಸಿಂಘಣನು ಅರಸನಾದನು. ದೇವಗಿ ಯಾದವರೊಳಗೆ ಇವನೇ ಶ್ರೇಷ್ಠನು. ಈತನು ಮಾಳವ ಮುಂತಾದ ಅರಸರನ್ನು ಗೆದ್ದನು. ಮಥುರೆಯ ಮತ್ತು ಕಾಶಿಯ ಅರಸರು ಇವ ನಿಂದ ಕೊಲ್ಲಲ್ಪಟ್ಟರು. ಈತನು ಹೊಯ್ಸಳರನ್ನು ಗೆದ್ದು ಉತ್ತರ ಸೀಮೆಯನ್ನು ಸೆಳೆದುಕೊಂಡನು. ಸಿಂಘಣನು ಗುಜರಾಥದ ಮೇಲೂ ಅನೇಕಾವರ್ತಿ ದಾಳಿಗಳನ್ನು ಮಾಡಿದನು. ಈ ಸಿಂಘಣನ ಮಗನಾದ ರಾಮನು, ಗುಜರಾಥದಲ್ಲಿ ಆಳುತ್ತಿರುವಾಗ ಒಂದು ಕಾಳಗದಲ್ಲಿ ಮಡಿ ದನು. ಆಗ ಅವನ ಮಗ ಚಿಕ್ಕವನಾಗಿದ್ದುದರಿಂದ ಅವನ ತಂಗಿಯಾದ, ಲಕ್ಷ್ಮಿಯು, ಆ ದೇಶವನ್ನು ಕೆಲವು ಕಾಲಪರ್ಯಂತ ಆಳಿದಳು. ಸಿಂಘ ಣನು 'ಚಿಕ್ಕ' ನೆಂಬವನ ಮಗನಾದ ಬಿಜ್ಜಣ್ಣನನ್ನು ದಕ್ಷಿಣ ದೇಶಕ್ಕೆ ಅಧಿ ಕಾರಿಯನ್ನಾಗಿ ನೇಮಿಸಿದ್ದನು. ಈ ಬಿಜ್ಜಣನು ರಟ್ಟರನ್ನೂ, ಕದಂಬ ರನ್ನೂ, ಗುತ್ತರನ್ನೂ ಪಾಂಡ್ಯರನ್ನೂ ಗೆದ್ದು, ಹೊಯ್ಸಳ ರಾಜ್ಯವನ್ನು ತೆಗೆದುಕೊಂಡು ಕಾವೇರಿ ನದಿಯ ದಡದಲ್ಲಿ ತನ್ನ ವಿಜಯಸ್ತಂಭವನ್ನೂ ರಿದನು. ಆದುದರಿಂದ ಈ ಸಿಂಘಣನ ಕಾಲದಲ್ಲಿ ಕೆಲವುಕಾಲ ರಾಜ್ಯದ ವಿಸ್ತಾರವು ಅತಿಶಯವಾಗಿ ಇದ್ದಂತೆ ತೋರುತ್ತದೆ. ಸಿಂಘಣನಿಗೆ ಪೃಥ್ವೀ

ವಲ್ಲಭನೆಂದು ಬಿರುದು ಇತ್ತು. ದೇವಗಿರಿ ಯಾದವರು ತಾವು ವಿಷ್ಣುವಂಶೋದ್ಭವರೆಂದೂ, ದ್ವಾರಾವತೀಪುರವರಾಧೀಶ್ವರರೆಂದೂ ಹೇಳಿಕೊಳ್ಳುವರು. ಭಾಸ್ಕರಾಚಾರ್ಯರ ಮೊಮ್ಮಗನಾದ ಚಂಗದೇವನು ಸಿಂಘಣನ ಆಸ್ಥಾನದಲ್ಲಿ ಜ್ಯೋತಿಷ್ಕನಾಗಿದ್ದನು.

ಆನಂತರದಲ್ಲಿ ಮಹಾದೇವನೇ ಹೆಸರಾದ ಅರಸನು. ಈತನು ತೆಲಂಗ, ಗುರ್ಜರ, ಕರ್ನಾಟಕ, ಕೊಂಕಣ ಮುಂತಾದ ಅರಸರನ್ನು ಗೆದ್ದನು. ಕರ್ನಾಟಕವೆಂದರೆ ಹೊಯ್ಸಳ ಅರಸರು.

ಈ ವಂಶದ ಕೊನೆಯ ಅರಸನು ರಾಮಚಂದ್ರನು. (೧೨೭೧-೧೩೦೯) ರಾಮಚಂದ್ರನ ರಾಜ್ಯವು ಮೈಸೂರಿನ ವರೆಗೆ ಹಬ್ಬಿತ್ತು. ಪ್ರಸಿದ್ಧ ಧರ್ಮಶಾಸ್ತ್ರಕಾರನಾದ ಹೇಮಾದ್ರಿಯು, ಮಹಾದೇವ ಮತ್ತು ರಾಮಚಂದ್ರ ಇವರ ಆಳಿಕೆಯಲ್ಲಿ ಮಂತ್ರಿಯಾಗಿದ್ದನು. ೧೨೯೬ನೆಯ ಇಸವಿಯಲ್ಲಿ ಅಲ್ಲಾವುದ್ದೀನ ಖಿಲಜಿಯು ರಾಮಚಂದ್ರನನ್ನು ಸೋಲಿಸಿದನು. ಅನಂತರ ಮಲೀಕಕಾಫರನು ರಾಮಚಂದ್ರನನ್ನು ಕೊಂದು ದೇವಗಿರಿಯನ್ನು ವಶಮಾಡಿಕೊಂಡನು.

---

## ಹೊಯ್ಸಳ ಯಾದವರು

ಸಳ, ಹೊಯ್ಸಳ (೧೦೦೬)
| *
ವಿನಯಾದಿತ್ಯ, ತ್ರಿಭುವನಮಲ್ಲ-ಹೊಯ್ಸಳ (೧೦೪೭-೧೧೦೦)
|
ಎರೆಯಂಗ (ಯುವರಾಜ ೧೦೬೩-೧೦೯೫)
|
ಬಲ್ಲಾಳ I (೧೧೦೧-೧೧೦೬) ಬಿಟ್ಟದೇವ, ವಿಷ್ಣುವರ್ಧನ (೧೧೧೧-೧೧೭೩)
|
ನರಸಿಂಹ I ಪ್ರತಾಪನರಸಿಂಹ (೧೧೪೧-೧೧೭೩)
|
ಬಲ್ಲಾಳ II, ವೀರಬಲ್ಲಾಳ
ಶನಿವಾರಸಿದ್ಧಿ, ಗಿರದುರ್ಗಮಲ್ಲ, ಯಾದವನಾರಾಯಣ
(೧೧೭೩-೧೨೨೦)
|
ನರಸಿಂಹ II, ವೀರಸಿಂಹ (೧೨೨೦-೧೨೩೫)
|
ಸೋಮೇಶ್ವರ, ವೀರಸೋಮೇಶ್ವರ (೧೨೩೩-೧೨೫೪)
|
ನರಸಿಂಹ III, ವೀರನರಸಿಂಹ (೧೨೫೪-೧೨೯೧)
|
ಬಲ್ಲಾಳ, III, ವೀರಬಲ್ಲಾಳ (೧೨೯೧-೧೩೪೨)
|
ಬಲ್ಲಾಳ IV, ೧೩೪೩.

---

*.... ಈಪ್ರಕಾರ ಚಿನ್ಹ ವಿದ್ದಲ್ಲಿ ಕೆಳಗಿನವರು ಸಾಕ್ಷಾತ್ ಮಗನಲ್ಲ. ವಂಶಜನೆಂದು ತಿಳಿಯಬೇಕು.

## ಹೊಯ್ಸಳ ಯಾದವರು

### ( ೧೧೧೬–೧೩೪೬ )

ಚೋಳರು ಗಂಗ ರಾಜ್ಯವನ್ನು ೧೦೦೪ರಲ್ಲಿ ಮುರಿದ ನಂತರ ಮೈಸೂರಿನ ಪಶ್ಚಿಮದಲ್ಲಿ ಹೊಯ್ಸಳರು ತಲೆಯೆತ್ತಿದರು. ಮುಂದೆ ಅವರು ೧೧೧೬ರಲ್ಲಿ ಚೋಳರನ್ನು ಚದರಿಸಿ ತಾವೇ ರಾಜರಾಗಿ ೧೪ನೆಯ ಶತಮಾನದ ವರೆಗೆ ಆಳಿದರು. ಈ ವಂಶದ ಮೂಲಪುರುಷನು ಸಳನೆಂಬವನು. ಈತನು ಸುದತ್ತನೆಂದೊಬ್ಬ ಬ್ರಾಹ್ಮಣ ಜಾತಿಯಲ್ಲಿ ವಿದ್ಯೆಯನ್ನು ಕಲಿಯುತ್ತಿದ್ದಾಗ, ಒಮ್ಮೆ ವಾಸಂತಿಕಾದೇವಿಯ ಗುಡಿಗೆ ಪೂಜೆಗೆ ಹೋಗಿದ್ದನು. ಆಗ ಅಲ್ಲಿ ಒಂದು ದೊಡ್ಡ ಹುಲಿಯು ಬಂದಿತು. ಕೂಡಲೆ ಆ ಯತಿಯು, ತನ್ನ ಕೈಯೊಳಗಿನ ಬೆತ್ತವನ್ನು ಅವನಿಗೆ ಕೊಟ್ಟು ಆ ಹುಲಿಯನ್ನು 'ಹೊಯ್ಯ' ಲಿಕ್ಕೆ ಹೇಳಿದನು. ಸಳನು ಆ ಮೇರೆಗೆ ಅದನ್ನು ಕೊಂದನು. ಅಂದಿನಿಂದ ಅವನ ವಂಶಕ್ಕೆ ಹೊಯ್ಸಳವೆಂದು ಹೆಸರು ಬಂತು. ಈ ಸಳನು ಹುಲಿ ಹೊಡೆಯುವ ಚಿತ್ರಗಳನ್ನೊಳಗೊಂಡ ಕಟ್ಟಡಗಳೆಲ್ಲವೂ ಈ ವಂಶದವವೇ.

ಕೆಳಗೆ ತಂಜಾವರದಿಂದ ಮೇಲ್ಗಡೆ ಸೊಲ್ಲಾಪುರದ ವರೆಗೆ ಈ ವಂಶದ ಲೇಖಗಳು ದೊರೆಯುತ್ತವೆ. ಹೊಯ್ಸಳರು ಮೊದಲು ಕಲ್ಯಾಣ ಚಾಲುಕ್ಯರ ಮಾಂಡಲಿಕರಾಗಿದ್ದರು. ಆದರೆ ಮುಂದೆ ವಿಷ್ಣುವರ್ಧನನ ಕಾಲದಲ್ಲಿ ಇವರು ಸ್ವತಂತ್ರರಾಗಿ ಆಳುತ್ತಿದ್ದರು. ಇವರ ರಾಜಧಾನಿಯು ಮೊದಲು ಬೇಲೂರು, ಅನಂತರ ಹಳೆಬೀಡು ಅಥವಾ ದ್ವಾರಸಮುದ್ರ.

ಈ ವಂಶದಲ್ಲಿ ವಿನಯಾದಿತ್ಯ, ವಿಷ್ಣುವರ್ಧನ, ವೀರಬಲ್ಲಾಳ ಇವರೇ ಬಲವಾದ ಅರಸರು.

ಬಿಟ್ಟಿದೇವ ಅಥವಾ ವಿಷ್ಣುವರ್ಧನನು ಈ ವಂಶಕ್ಕೆ ಮೊದಲು ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟವನು. ಇವನು ರಾಮಾನುಜಾಚಾರ್ಯರ ಉಪದೇಶದಿಂದ ಜೈನ ಮತವನ್ನು ಬಿಟ್ಟು ಶ್ರೀವೈಷ್ಣವ ಮತವನ್ನಂಗೀಕರಿಸಿದ ಸಂಗತಿಯು ಎಲ್ಲರಿಗೂ ತಿಳಿದೇ ಇದೆ. ಈತನು ಮೈಸೂರ ಪ್ರಾಂತದಿಂದ ಚೋಳರನ್ನು ಹೊಡೆದಟ್ಟಿದನು. ಈತನು ಶೂರನಾದ ಅರಸನಾಗಿ

ದ್ದನು. ತಳಕಾಡು, ಉಚ್ಚಂಗಿ, ಬನವಾಸಿ ಮುಂತಾದ ನಾಡುಗಳ ಅರಸರನ್ನು ಗೆದ್ದನು. ತಳಕಾಡು, ದ್ವಾರಸಮುದ್ರ, ಬಂಕಾಪುರ ಮುಂತಾದವುಗಳು ಬೇರೆ ಬೇರೆ ಕಾಲಕ್ಕೆ ಈತನ ರಾಜಧಾನಿಗಳಾಗಿದ್ದುವು.

೨ನೆಯ ಬಲ್ಲಾಳ ಅಥವಾ ವೀರಬಲ್ಲಾಳನೇ ಈತನ ತರುವಾಯದ ಪ್ರಸಿದ್ಧ ರಾಜನು. ಈತನು ೧೧೭೩ನೆಯ ಇಸವಿಯ ಜುಲೈ ೨೨ನೆಯ ದಿವಸ ದ್ವಾರಸಮುದ್ರದಲ್ಲಿ ಪಟ್ಟವೇರಿದನು. ಈತನು ಬಂಗಾಳ, ಉಚ್ಚಂಗಿಯ ಪಾಂಡ್ಯ ಕಲಚೂರ್ಯ ಮುಂತಾದ ಅರಸರನ್ನು ಸೋಲಿಸಿದನು. ಆದರೆ ಎಲ್ಲಕ್ಕೂ ಮೇಲಾದ ಈತನ ಶೂರತನದ ಕೃತ್ಯವಾವುದೆಂದರೆ, ಸೇವುಣ ಅಂದರೆ ದೇವಗಿರಿ ಯಾದವರ ದೊಡ್ಡ ಸೈನ್ಯವನ್ನು ಸೊರಟೂರಿನಲ್ಲಿ ಸೋಲಿಸಿದ್ದುದು. ಈ ಸೈನ್ಯದಲ್ಲಿ ಎರಡು ಲಕ್ಷ ಕಾಲಾಳುಗಳಿದ್ದವು. ೧೧೯೨ರಲ್ಲಿ ಇವನು ಲಕ್ಕುಂಡಿಯಲ್ಲಿ ವಾಸವಾಗಿದ್ದನು. ಆದರೆ ಮುಂದೆ ರಾಣಿಬೆನ್ನೂರ ತಾಲೂಕಿನಲ್ಲಿರುವ ಹುಲ್ಲೂರು ಪಟ್ಟಣವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನು. ಈತನು ೪೭ ವರ್ಷಗಳ ವರೆಗೆ ವೈಭವದಿಂದ ಆಳಿ ೧೨೨೦ರಲ್ಲಿ ಮಡಿದನು. ಈತನು ಮಡಿದ ಕೂಡಲೆ ಈತನ ಪರಮ ಭಕ್ತನಾದ ಲಕ್ಷ್ಮಣನೆಂಬವನೂ ಇವನ ಹೆಂಡತಿಯೂ ಒಂದು ಸಾವಿರ ಜನ ವೀರರೂ ಈತನ ಮೇಲಿನ ಪ್ರೇಮಾತಿಶಯದ ಮೂಲಕ ಆತ್ಮಹತ್ಯವನ್ನು ಮಾಡಿಕೊಂಡರು !

ಈತನ ತರುವಾಯದಲ್ಲಿ ಪಟ್ಟವೇರಿದ ೨ನೆಯ ನರಸಿಂಹನೂ ಪರಾಕ್ರಮಿಯಾದ ಅರಸನೇ. ಇವನು ಅನೇಕ ರಾಜ್ಯಗಳನ್ನು ಗೆದ್ದು ರಾಮೇಶ್ವರದಲ್ಲಿ ವಿಜಯಸ್ತಂಭವನ್ನೂರಿದನು. ಈತನು ದೇವಗಿರಿ ಯಾದವರನ್ನು ಸೋಲಿಸಿದನು.

ಈ ನರಸಿಂಹನ ಮಗನಾದ ಸೋಮೇಶ್ವರನೂ ಶೂರನೇ; ಆದರೆ ಈ ಸೋಮೇಶ್ವರನ ಮರಣದ ನಂತರ ಈ ರಾಜ್ಯಗಳಲ್ಲಿ ಎರಡು ವಿಭಾಗಗಳಾಗಿ ಕನ್ನಡ ರಾಜ್ಯವು ೩ನೆಯ ನರಸಿಂಹನ ಪಾಲಿಗೆ ಬಂದಿತು. ತಮಿಳು ರಾಜ್ಯವು ರಾಮನಾಥನೆಂಬ ಆವನ ತಮ್ಮನ ಪಾಲಿಗೆ ಹೋಯಿತು. ೩ನೆಯ ನರಸಿಂಹನು ದೇವಗಿರಿ ಯಾದವರನ್ನು ಬೆಳವಡಿಯಲ್ಲಿ ಸೋಲಿಸಿದನು. ಆದರೆ ಮುಂದೆ ೩ನೆಯ ಬಲ್ಲಾಳನ ಕಾಲಕ್ಕೆ ಇವರ ರಾಜ್ಯದಲ್ಲಿ ಮುಸಲ್ಮಾನರ ಪ್ರವೇಶವಾಗಿ ಇವರ ವಂಶವು ನಷ್ಟವಾಯಿತು.

## ಕೊಲ್ಲಾಪುರದ ಶಿಲಾಹಾರರು

ಇಲ್ಲಿಯ ವರೆಗೆ ನಾವು ಸ್ವತಂತ್ರ ರಾಜವಂಶಗಳನ್ನು ಹೇಳಿದೆವು. ಇನ್ನು ಮುಂದೆ ಸಾಗುವ ಮೊದಲು, ರಾಷ್ಟ್ರಕೂಟರ ಕಾಲಕ್ಕೂ ಚಾಲುಕ್ಯರ ಕಾಲಕ್ಕೂ ಪ್ರಾಬಲ್ಯಕ್ಕೆ ಬಂದ ಕೆಲವು ಮಾಂಡಲಿಕ ರಾಜವಂಶಗಳನ್ನು ಕುರಿತು ಹೇಳುವೆವು.

ಒಟ್ಟು ಶಿಲಾಹಾರ ಮನೆತನಗಳು ಮೂರು. ಅವೆಲ್ಲ ರಾಷ್ಟ್ರಕೂಟರ ಕಾಲದಲ್ಲಿ ತಲೆಯೆತ್ತಿದುವು. ಉತ್ತರಕೊಂಕಣದಲ್ಲಿ ೧೪೦೦ ಹಳ್ಳಿಗಳಿದ್ದುವು. ಪುರಿ ಎಂಬುದು ಈ ಉತ್ತರ ಕೊಂಕಣದ ಶಿಲಾಹಾರ ವಂಶದ ರಾಜಧಾನಿಯು. ರಾಷ್ಟ್ರಕೂಟರ ಅರಸನಾದ ಅಮೋಘವರ್ಷ ಅಥವಾ ನೃಪತುಂಗ (೮೧೫-೮೭೭) ನ ಕಾಲಕ್ಕೆ ಅಲ್ಲಿ ಫುಲ್ಲಶಕ್ತಿ ಎಂಬವನು ಅವನ ಮಾಂಡಲಿಕನಾಗಿ ಆಳುತ್ತಿದ್ದನು. ದಕ್ಷಿಣ ಕೊಂಕಣದ ಶಿಲಾಹಾರರ ರಾಜಧಾನಿಯು ಖಾರೆಪಟ್ಟಣವಾಗಿತ್ತು. ಈ ಶಿಲಾಹಾರರು ಅಷ್ಟು ಪ್ರಸಿದ್ಧರಾಗಿರಲಿಲ್ಲ. ಕೊಲ್ಲಾಪುರದ ಶಿಲಾಹಾರ ವಂಶವೇ ಮೂರನೆಯ ಶಿಲಾಹಾರ ವಂಶ. ಕೊಲ್ಲಾಪುರ, ಮಿರಜ, ಕರ್ಹಾಡ ಪ್ರಾಂತಗಳು ಇವರ ವಶದಲ್ಲಿದ್ದುವು. ಇದು ಎಲ್ಲಕ್ಕೂ ಈಚೆಯ ಮನೆತನವು. ರಾಷ್ಟ್ರಕೂಟ ವಂಶವು ಹಾಳಾಗುವ ಕೊನೆಕೊನೆಗೆ ಈ ಮನೆತನವು ಉದಯಕ್ಕೆ ಬಂದಿತು. ಇವರ ವಂಶಾವಳಿಯನ್ನು ಇಲ್ಲಿ ಕೊಟ್ಟಿದೆ.



ಗಂಡರಾದಿತ್ಯನೆಂಬವನು ಪ್ರಸಿದ್ಧ ರಾಜನು. ಮಿರಜ ಸಂಸ್ಥಾನದ. ಲ್ಲಿಯ ಇರಕೂಡಿಯಲ್ಲಿ 'ಗಂಡಸಮುದ್ರ' ವೆಂಬ ಸರೋವರವನ್ನು ಕಟ್ಟಿ-ಸಿದನು.

## ಸವದತ್ತಿಯ ರಟ್ಟರು

ರಾಷ್ಟ್ರಕೂಟರ ಕಾಲದಲ್ಲಿಯೂ ಚಾಲುಕ್ಯರ ಕಾಲದಲ್ಲಿಯೂ ರಟ್ಟರು ಮಾಂಡಲಿಕ ರಾಜರಾಗಿದ್ದರು. ಅವರು ಮುಂದೆ ಕೆಲವು ದಿವಸ ಸ್ವತಂತ್ರರಾಗಿ ಆಳಿದರು. ಅನಂತರ ದೇವಗಿರಿಯ ಯಾದವರಿಗೆ ತುತ್ತಾದರು. ಇವರ ರಾಜಧಾನಿಯು ಮೊದಲು ಸುಗಂಧವರ್ತಿ ಅಥವಾ ಸವದತ್ತಿಯಲ್ಲಿ ಇತ್ತು. ಮುಂದೆ ವೇಣುಗ್ರಾಮದ ಅಥವಾ ಬೆಳಗಾಂವಿಗೆ ಅದನ್ನು ನೂಕಿದರು. ಇವರ ಶಿಲಾಲೇಖಗಳು ಸೊಗಲ, ನೇಸರಗಿ, ಕೊಣ್ಣೂರು, ರಾಯಬಾಗ ಮುಂತಾದ ಊರುಗಳಲ್ಲಿ ದೊರೆಯುತ್ತವೆ. ಇವರು ಲತ್ತನೂರ ಪುರವರಾಧೀಶ್ವರರೆಂದು ಹೇಳಿಕೊಳ್ಳುತ್ತಾರೆ. ಇವರು ಜೈನರು. ಸುವರ್ಣಗರುಡ ಧ್ವಜವು ಇವರ ಪತಾಕೆಯು. ಇವರು ಸಿಂಧೂರ ಲಾಂಛನರು. ಇವರ ವಂಶಾವಳಿಯನ್ನು ಕೆಳಗೆ ಕಾಣಿಸಿದೆ.

ಪೃಥ್ವೀವರ್ಮ
|
ಶಾಂತಿವರ್ಮ
|
ಕಾರ್ತವೀರ್ಯ (೯೮೦)
|
ಅಂಕ (೧೦೪೯)
|
ಕಾರ್ತವೀರ್ಯ (೧೦೮೭)
|
ಸೇನ
|
ಕಾರ್ತವೀರ್ಯ
|
ಲಕ್ಷ್ಮೀದೇವ ೧೨೦೮)



ಈ ಬಗೆಯಾಗಿ ನಾವು ಈ ಪ್ರಕರಣದಲ್ಲಿ ಕಲಚೂರ್ಯ, ಯಾದವ ಮುಂತಾದ ಅನೇಕ ರಾಜವಂಶಗಳನ್ನು ಹೇಳಿದೆವು. ಕಲ್ಯಾಣ ಚಾಲುಕ್ಯರ ನಂತರ ಕಲಚೂರ್ಯರು ಅವರ ರಾಜ್ಯಕ್ಕೆ ಅರಸರಾಗಿ ಆಳಿದರೂ ಅವರು ಬಹಳ ದಿವಸ ಆಳಲಿಲ್ಲ. ಮುಂದೆ ಆ ರಾಜ್ಯವು ಎರಡು ತುಂಡಾಗಿ ಉತ್ತರದ ಅರ್ಧ ಭಾಗವು ದೇವಗಿರಿ ಯಾದವರ ವಶಕ್ಕೂ ದಕ್ಷಿಣದ ಅರ್ಧ ಭಾಗವು ಹೊಯ್ಸಳ ಯಾದವರ ವಶಕ್ಕೂ ಹೋಯಿತೆಂದು ಸ್ಥೂಲಮಾನದಿಂದ ಹೇಳಬಹುದು. ಮುಂದೆ ಇವುಗಳಲ್ಲಿ ಉತ್ತರ ಭಾಗವು ಹಿಂದೂ ಜನರ ಕೈಬಿಟ್ಟು ಹೋಯಿತು. ದಕ್ಷಿಣ ಭಾಗಕ್ಕೆ ವಿಜಯನಗರದ ಅರಸರು ಒಡೆಯರಾದರು. ಇರಲಿ. ಅವರ ಇತಿಹಾಸವನ್ನು ಮುಂದೆ ಕೊಡುವೆವು. ಸದ್ಯಕ್ಕೆ ಹೇಳುವುದೇನಂದರೆ, ಇವೆರಡೂ ವಂಶಗಳೂ ಸ್ವತಂತ್ರ ರಾಜವಂಶಗಳು. ಮಿಕ್ಕವುಗಳು ಎಂದರೆ ರಟ್ಟ, ಶಿಲಾಹಾರ, ಕದಂಬ ಮುಂತಾದವುಗಳು ಮಾಂಡಲಿಕ ರಾಜವಂಶಗಳೆಂಬುದನ್ನು ವಾಚಕರು ಮರೆಯಕೂಡದು. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಕದಂಬರಲ್ಲಿ ಎರಡು ಶಾಖೆಗಳಿದ್ದಂತೆ ಕಂಡುಬರುತ್ತದೆ. ಬನವಾಸಿ ಅಥವಾ ಹಾನಗಲ್ಲ ಕದಂಬರ ಶಾಖೆಯೇ ಮೊದಲನೆಯದು. ಗೋವೆ ಅಥವಾ ಹಲಸಗಿಯ ಕದಂಬರ ಶಾಖೆಯೇ ಎರಡನೆಯದು. ಮೊದಲನೆಯ ಶಾಖೆಯಲ್ಲಿ ಕೀರ್ತಿವರ್ಮ, ಶಾಂತಿವರ್ಮ, ಮಲ್ಲಿಕಾರ್ಜುನ, ಕಾಮದೇವ, ಸೋಮದೇವ ಮುಂತಾದ ಮಾಂಡಲಿಕ ರಾಜರು ಪ್ರಬಲರಾಗಿದ್ದು ಅವರು ಚಾಲುಕ್ಯರಿಗೆ ಅನೇಕ ಮಹತ್ವದ ಪ್ರಸಂಗಗಳಲ್ಲಿ ಸಹಾಯ ಮಾಡಿದ್ದಾರೆ. ಎರಡನೆಯ ಶಾಖೆಯ ರಾಜಧಾನಿಯು ಕೆಲವು ಕಾಲ ಗೋವೆಯಲ್ಲಿಯೂ ಕೆಲವು ಕಾಲ ಹಲಸಗಿಯಲ್ಲಿಯೂ ಇತ್ತು. ಇವರಲ್ಲಿಯೂ ವಿಜಯಾದಿತ್ಯ, ಜಯಕೇಶಿ ಮುಂತಾದವರು ಚಾಲುಕ್ಯರ ಮಾಂಡಲಿಕರಾಗಿ ಹೆಸರಿಗೆ ಬಂದರು.

ಸಾರಾಂಶ, ಈ ಪ್ರಕರಣದಲ್ಲಿ ಹೇಳಿದ ರಾಜವಂಶಗಳಲ್ಲಿ ಕಲಚೂರ್ಯ, ದೇವಗಿರಿ ಯಾದವ, ಮತ್ತು ಹೊಯ್ಸಳ ಯಾದವ ಈ ವಂಶಗಳು ಸ್ವತಂತ್ರವಾಗಿ ಆಳಿದ ವಂಶಗಳೆಂಬುದನ್ನೂ ಶಿಲಾಹಾರ, ರಟ್ಟ, ಕದಂಬ ಮುಂತಾದವುಗಳು ಮಾಂಡಲಿಕರಾಜರ ಮನೆತನಗಳೆಂಬುದನ್ನೂ ವಾಚಕರು ನೆನಪಿನಲ್ಲಿಡಬೇಕು.

## ೧೧ನೆಯ ಪ್ರಕರಣ

# ವಿಜಯನಗರದ ವಂಶಾವಳಿ

( ಮುಖ್ಯ ಹೆಸರುಗಳು )

## ಸಂಗಮವಂಶ

ಸಂಗಮ=ಕಾಮಾಂಬಿಕಾ













## ನರಸ ಮನೆತನ

(೧೨) ನರಸ, ನರಸಿಂಹ ೧೪೯೬-೧೫೦೩






## ೧೧ ನೆಯ ಪ್ರಕರಣ

## ವಿಜಯನಗರದ ಅರಸರು

ಕರ್ಣಾಟಲೋಕನಯನೋತ್ಸವಪೂರ್ಣಚಂದ್ರಃ ।
ಸಾಕಂ ತಯಾ ಹೃದಯಸಮ್ಮತಯಾ ನರೇಂದ್ರಃ ।
ಕಾಲೋಚಿತಾನ್ಯನುಭವನ್ ಕ್ರಮಶಃ ಸುಖಾನಿ ।
ವೀರಶ್ಚಿರಾಯ ವಿಜಯಾಪುರಮಧ್ಯವಾಸೀತ್ ॥

—ಗಂಗಾದೇವಿ

ಕರ್ಣಾಟಕದ ಕೊನೆಯ ರಾಜಮನೆತನವೇ ವಿಜಯನಗರವು. ಬಾದಾಮಿಯ ಚಾಲುಕ್ಯರನ್ನು ಕರ್ಣಾಟಕ–ಸಿಂಹಾಸನ ಸ್ಥಾಪನಾಚಾರ್ಯರೆಂದು ಕರೆಯಬಹುದು. ಏಕೆಂದರೆ ಚಾಲುಕ್ಯರಿಗಿಂತ ಮೊದಲು ಕದಂಬ, ಗಂಗ ಮುಂತಾದ ಬೇರೆ ಬೇರೆ ರಾಜ್ಯಗಳು ಕರ್ಣಾಟಕದಲ್ಲಿ ಆಳಿಹೋಗಿದ್ದರೂ, ಇಡೀ ಕರ್ಣಾಟಕವು ಒಬ್ಬನೇ ಅರಸನ ಏಕಛತ್ರಾಧಿಪತ್ಯಕ್ಕೆ ಬಾದಾಮಿಯ ಚಾಲುಕ್ಯರ ಕಾಲದಲ್ಲಿಯೇ ಒಳಪಟ್ಟಿತು. ಆಗ ಸ್ಥಾಪಿತವಾದ ಏಕಛತ್ರಾಧಿಪತ್ಯವು ರಾಷ್ಟ್ರಕೂಟರ ಕಾಲಕ್ಕೂ ಪುನಃ ಕಲ್ಯಾಣ ಚಾಲುಕ್ಯರ ಕಾಲಕ್ಕೂ ಅವಿಚ್ಛಿನ್ನವಾಗಿ ನಡೆಯಿತು. ಮುಂದೆ ಅದು ಎರಡು ಹೋಳುಗಳಾಗಿ, ಉತ್ತರದ ಅರ್ಧ ಭಾಗವು ಹೊಯ್ಸಳ ಯಾದವರ ವಶಕ್ಕೆ ಹೋಯಿತೆಂದೂ ಸ್ಥೂಲಮಾನದಿಂದ ಹೇಳಬಹುದು. ಮುಂದೆ ಮುಸಲ್ಮಾನರು ದೇವಗಿರಿ ಯಾದವರನ್ನು ಸೋಲಿಸಿ ಉತ್ತರದ ಅರ್ಧಭಾಗವನ್ನು ನುಂಗಿದರು. ದಕ್ಷಿಣದ ಅರ್ಧ ಭಾಗವನ್ನು ನುಂಗುವ ಹಂಚಿಕೆಯಲ್ಲಿದ್ದರು. ಮುಸಲ್ಮಾನರ ಮೊದಲನೆಯ ಪ್ರಹಾರವು ದೇವಗಿರಿ ಯಾದವರಿಗೂ ವರಂಗಲ್ಲ ಕಾಕತೇಯ ಅರಸರಿಗೂ ತಗಲಿತು. ಆ ಪೆಟ್ಟು ತಗಲುವವರೆಗೆ ಮಿಕ್ಕ ಅರಸರು ಎಚ್ಚರಗೊಳ್ಳಲಿಲ್ಲ. ಆದರೆ ಆ ಪೆಟ್ಟು ಬಿಡಿದ ಕೂಡಲೆ ದಕ್ಷಿಣ ಹಿಂದುಸ್ಥಾನದಲ್ಲಿ ಹಾಹಾಕಾರ ಎದ್ದಿತು. ಮುಸಲ್ಮಾನರು ಪ್ರಬಲರಾದ ಶತ್ರುಗಳಾದುದರಿಂದ, ಒಬ್ಬೊ-

ಬ್ಬರೇ ಅವರೆದುರಿಗೆ ನಿಂತರೆ ನಡೆಯಲಾರದೆಂದು ಬಗೆದು, ಎಲ್ಲರೂ ಒಕ್ಕಟ್ಟಾಗಿ ನಿಲ್ಲುವುದು ಅವಶ್ಯವೆಂಬ ಕಲ್ಪನೆಯು ಉದ್ಭವಿಸಿತು. ಈ ಕಲ್ಪನೆಯ ಮೂಲೋತ್ಪಾದಕರೇ ಶ್ರೀವಿದ್ಯಾರಣ್ಯರು. ಚದುರಿ ಹೋದ ಚಿಕ್ಕ ಚಿಕ್ಕ ರಾಜ್ಯಗಳನ್ನು ಒಟ್ಟುಗೂಡಿಸಿ, ಮುಸಲ್ಮಾನರಿದಿರು ಒಕ್ಕಟ್ಟಿನಿಂದ ನಿಲ್ಲುವಂತೆ ಮಾಡಿದುದೇ ಶ್ರೀವಿದ್ಯಾರಣ್ಯರು ಮಾಡಿದ ಮಹತ್ವದ ಕೆಲಸ. ಪರದೇಶೀಯ ಶತ್ರುಗಳಿಗೆ ಇದಿರಾಗಬೇಕಾದರೆ ನಾವು ನಮ್ಮ ಒಳಜಗಳಗಳೆಲ್ಲವನ್ನೂ ಮರೆತುಬಿಡಬೇಕೆಂಬ ತತ್ವ ವನ್ನು ಹಿಂದುಸ್ಥಾನದ ಇತಿಹಾಸದಲ್ಲಿ ಎಲ್ಲಕ್ಕೂ ಮೊದಲಿಗೆ ಶ್ರೀವಿದ್ಯಾ ರಣ್ಯರೇ ಕಲಿಸಿದರು. ಈ ತತ್ವವನ್ನರಿಯದ ಮೂಲಕವೇ ಉತ್ತರ ಹಿಂದುಸ್ಥಾನವು ಮುಸಲ್ಮಾನರ ಅಂಕಿತವಾಯಿತು. ಮುಂದೆ ಈ ತತ್ವವನ್ನು ಮರೆತ ಮುಸಲ್ಮಾನರು ವಿಜಯನಗರದ ಬಲಾಢ್ಯರಾದ ಅರಸರೊಡನೆ ಸುಮಾರು ಎರಡು ಶತಮಾನಗಳವರೆಗೆ ಎಡೆಬಿಡದೆ ಕಾದ ಬೇಕಾಯಿತು ಈ ತತ್ವವನ್ನು ಮುಸಲ್ಮಾನರು ಕಂಡುಹಿಡಿದು, ತಮ್ಮ ತಪ್ಪನ್ನು ತಿದ್ದಿಕೊಂಡು ಒಕ್ಕಟ್ಟಿನಿಂದ ಕಾದಿದುದರಿಂದಲೇ ಅವರಿಗೆ ವಿಜಯನಗರವನ್ನು ಪಾತಾಳಕ್ಕೆ ಮೆಟ್ಟುವುದಕ್ಕೆ ಸಾಧ್ಯವಾಯಿತು. ಇರಲಿ ! ಸುಮಾರು ಎರಡು ಶತಮಾನಗಳ ವರೆಗೆ ವಿಜಯನಗರದ ಅರ ಸರು ಮುಸಲ್ಮಾನರ ಪ್ರವಾಹವನ್ನು ಕೃಷ್ಣೆಯ ದಕ್ಷಿಣಕ್ಕೆ ಬರಗೊಡ ದಂತೆ ಹೇಗೆ ತಡೆದು ಹಿಡಿದರೆಂಬುದರ ಇತಿಹಾಸವು ಅತ್ಯಂತ ಮನೋ ರಂಜಕವಾಗಿದೆ. ಈ ದೃಷ್ಟಿಯಿಂದ ನೋಡಲು, ವಿಜಯನಗರ ರಾಜ್ಯವು ಹಿಂದಿನ ರಾಜ್ಯಗಳಷ್ಟು ವಿಸ್ತಾರವನ್ನು ಹೊಂದಿರದಿದ್ದರೂ ಅದಕ್ಕಿಂತ ಹೆಚ್ಚು ಮಹತ್ವವುಳ್ಳದ್ದಾಗಿದೆ. ಏಕೆಂದರೆ ದಕ್ಷಿಣ ಹಿಂದುಸ್ಥಾನಕ್ಕೆ ಅತ್ಯಂತ ದುರ್ಘಟವಾದ ಸಂಕಟ ಕಾಲವೊದಗಿದಾಗ ಅದನ್ನು ರಕ್ಷಿಸಿ ದ್ದೇನೂ ಕಡಿಮೆಯ ಕಾರ್ಯವಲ್ಲ. ವಿಜಯನಗರದ ಅರಸರು ತಮ್ಮ ಪೂರ್ವ ವೈಭವವನ್ನು ಅಚ್ಚಳಿಯದೆ ಕಾಯ್ದುಕೊಂಡರೆಂಬುದು ಕರ್ನಾಟಕಸ್ಥರಿಗೆ ನಿಜವಾಗಿಯೂ ಅತ್ಯಂತ ಗೌರವಾಸ್ಪದವಾದ ಸಂಗತಿ ಯಾಗಿದೆ.

ಶ್ರೀವಿದ್ಯಾರಣ್ಯರು ಹುಕ್ಕಬುಕ್ಕರನ್ನು ಪ್ರೋತ್ಸಾಹಿಸಿ, ಈ ಸ್ವರಾಜ್ಯ

ಸ್ಥಾಪನೆಯ ಕಾರ್ಯವನ್ನು ಕೊನೆಗಾಣಿಸಿದರು. ಶ್ರೀ ವಿದ್ಯಾರಣ್ಯರು ಆಗ ಶೃಂಗೇರಿಯಲ್ಲಿ ಶಂಕರಾಚಾರ್ಯರ ಸ್ಥಾನಾಪನ್ನರಾಗಿದ್ದರು. ಆದರೆ ದೇಶಕ್ಕೆ ಇಂಥ ವಿಪತ್ತು ಬಂದೊದಗಿದಾಗ ಸುಮ್ಮನೆ ಮೂಗು ಹಿಡಿದು ಕೊಂಡು ಕುಳ್ಳಿರುವುದು ಮಾತ್ರವೇ ತಮ್ಮ ಕರ್ತವ್ಯವಲ್ಲವೆಂದೂ ಆ ತಮ್ಮ ಧರ್ಮರಕ್ಷಣಾರ್ಥವಾಗಿಯೇ ಸ್ವರಾಜ್ಯವನ್ನು ಸ್ಥಾಪಿಸುವುದು ತಮ್ಮ ಕರ್ತವ್ಯವೆಂದೂ ಆಲೋಚಿಸಿ, ಅವರು ವಿಜಯನಗರದಲ್ಲಿ ರಾಜ್ಯವನ್ನು ಸ್ಥಾಪಿಸಿದರು.

**ಸಂಗಮ ವಂಶ** (೧೩೩೬-೧೪೭೮) :— ವಿಜಯನಗರದಲ್ಲಿ ಒಟ್ಟು ಮೂರು ವಂಶಗಳು ರಾಜ್ಯವಾಳಿದವು. ಮೊದಲನೆಯ ವಂಶವು ಸಂಗಮ ವಂಶವು. ಇದರಲ್ಲಿ ಒಂಬತ್ತು ಜನ ಅರಸರು ಆಗಿಹೋದರು. ಇವರು ಯಾದವರು. ಇವರ ಕುಲದೇವತೆ ವಿರೂಪಾಕ್ಷನು. ಬುಕ್ಕರಾಯನೇ ಈ ವಂಶದಲ್ಲಿ ಪ್ರಬಲನಾದ ಮೊದಲನೆಯ ರಾಜನು (೧೩೫೪-೧೩೭೭). ವಿಜಯನಗರದಲ್ಲಿಯ ಕೋಟೆ ಕೊತ್ತಳಗಳನ್ನು ಕಟ್ಟಿಸಿದವನು ಇವನೇ. ಇವನಿಗೆ "ಭಾಷೆಗೆ ತಪ್ಪುವ ರಾಯರ ಗಂಡ " " ಪೂರ್ವ—ಪಶ್ಚಿಮ—ದಕ್ಷಿಣ ಸಮುದ್ರಾಧೀಶ್ವರ " ಎಂಬ ಬಿರುದುಗಳಿದ್ದವು. ೧೩೬೮ನೆಯ ಇಸವಿಯಲ್ಲಿ ಈತನು ಜೈನರಿಗೂ ಶ್ರೀವೈಷ್ಣವರಿಗೂ ಉಂಟಾದ ಜಗಳವನ್ನು ತೀರಿಸಿದ ಕಥೆಯು ಮನೋವೇಧಕವಾಗಿದೆ. ( ೧೪ನೆಯ ಪ್ರಕರಣ ನೋಡಿರಿ ). ಅದರಿಂದ ಈ ಅರಸನು ಧರ್ಮವಿಷಯದಲ್ಲಿ ಎಷ್ಟು ಸಮಬುದ್ಧಿಯುಳ್ಳವ ನಿದ್ದನೆಂಬುದು ಗೊತ್ತಾಗುತ್ತದೆ. ಈ ಬುಕ್ಕರಾಯನ ಸೊಸೆಯಾದ ಗಂಗಾದೇವಿಯೆಂಬವಳು, " ವೀರಕಂಪಣರಾಯ ಚರಿತ " ವೆಂಬ ಅತ್ಯಂತ ಸರಸವಾದ ಸಂಸ್ಕೃತ ಕಾವ್ಯವೊಂದನ್ನು ರಚಿಸಿದ್ದಾಳೆ. ಅದು ಮುದ್ರಿತ ವಾಗಿದೆ. ಬುಕ್ಕರಾಯಪಟ್ಟಣ ಮುಂತಾದ ಇವನ ಹೆಸರಿನ ಊರು ಗಳೂ ಈಗಲೂ ಪ್ರಸಿದ್ಧವಿರುತ್ತವೆ. ಇವನ ಮಗನಾದ ಹರಿಹರನು ವಿದ್ವಾಂಸರಿಗೆ ಬಹಳ ಆಶ್ರಯಕೊಡುತ್ತಿದ್ದನು. ಈ ೨ನೆಯ ಹರಿಹರ ರಾಯನನ್ನು " ಕರ್ನಾಟಕ ವಿದ್ಯಾವಿಲಾಸ " ನೆಂದು ಕರೆಯುತ್ತಿದ್ದರು. ಈ ಹರಿಹರನ ಕಾಲದಲ್ಲಿ ಗುಂಡನೆಂಬ ಸೇನಾನಾಯಕನು ಅನೇಕ ಶೂರಕೃತ್ಯಗಳನ್ನು ಮಾಡಿದನು. ಹರಿಹರನು ೩೦-೮-೧೪೦೪ ನೆಯ

ಇಸವಿಯಲ್ಲಿ ಮರಣ ಹೊಂದಿದನು.

ಎರಡನೆಯ ದೇವರಾಯನಿಗೆ ಪ್ರೌಢರಾಯನೆಂದೂ ಹೆಸರುಂಟು. ಈತನು ಧೂರ್ತವಿಚಾರವಾಡಿ ತನ್ನ ಸೈನ್ಯದಲ್ಲಿ ಮುಸಲ್ಮಾನರನ್ನಿಟ್ಟು ಕೊಂಡು ತನ್ನ ಸೈನಿಕರಿಗೆ ಯುದ್ಧ ಕಲೆಯನ್ನು ಕಲಿಸಿದನು. ಈತನು ೨೪-೫-೧೪೪೬ರಲ್ಲಿ ಸತ್ತನು. ಇವನ ತರುವಾಯ ಸಂಗಮವಂಶವು ಕುಗ್ಗಿತು. ಮುಂದೆ ವಿಜಯನಗರದ ೨ನೆಯ ವಂಶವು ಎದ್ದಿತು.

**ಸಾಳ್ವ ಮನೆತನ** ( ೧೪೭೮-೧೪೯೬ ) :— ಸಂಗಮ ಮನೆತನದ ಕೊನೆಯ ಅರಸನಾದ ವಿರೂಪಾಕ್ಷನ ಮುಖ್ಯ ಸರದಾರನಾದ ಸಾಳ್ವ ನರಸಿಂಹನು ವಿಜಯನಗರದ ಪಟ್ಟವನ್ನು ಸೆಳೆದುಕೊಂಡು ಅರಸನಾದನು. ಮುಸಲ್ಮಾನರಿಗೂ, ವಿಜಯನಗರದ ಅರಸರಿಗೂ ಕೃಷ್ಣಾ ತುಂಗಭದ್ರಾ ನದಿಗಳ ನಡುವಿನ ಸೀಮೆಗಾಗಿ ಆಗಾಗ ಯುದ್ಧಗಳಾಗುತ್ತಿದ್ದುವು. ಈ ಯುದ್ಧಗಳಲ್ಲಿ ಸಾಳ್ವ ನರಸಿಂಹನು ಪರಾಕ್ರಮವನ್ನು ತೋರಿಸಿ ಅತ್ಯಂತ ಪ್ರಬಲನಾಗಿದ್ದನು. ಆದುದರಿಂದಲೇ ಇವನಿಗೆ ಸಿಂಹಾಸನವನ್ನು ಏರಿ ಹಾಕುವುದಕ್ಕೆ ಸಾಧ್ಯವಾಯಿತು. ಆದರೆ ಈತನ ವಂಶಜರು ಬಹಳ ದಿವಸ ಆಳಲಿಲ್ಲ. ಈತನ ಮಗನಾದ ಇಮ್ಮಡಿ ನರಸಿಂಹನನ್ನು ನರಸ ಅಥವಾ ನರಸಿಂಗನೆಂಬ ಆವನ ಸೇನಾಪತಿಯು ೧೪೯೬ನೆಯ ಇಸ್ವಿಯಲ್ಲಿ ಕೊಂದು ಹಾಕಿದಂತೆ ತೋರುತ್ತದೆ.

**ನರಸ ಮನೆತನ** (೧೪೯೬-೧೫೬೭)— ಈ ನರಸನು ತುಳುವನು; ಬಲು ಶೂರನು. ಈತನು ಚೇರ-ಚೋಳ-ಪಾಂಡ್ಯ ದೇಶಗಳನ್ನು ಗೆದ್ದನು. ಈತನ ತರುವಾಯ ಈತನ ಮೂರೂ ಮಂದಿ ಮಕ್ಕಳು ಒಬ್ಬರ ಹಿಂದೊಬ್ಬರು ಪಟ್ಟವೇರಿದರು. ಆದರೆ ಅವರಲ್ಲಿ ೨ನೆಯವನಾದ ಕೃಷ್ಣದೇವರಾಯನೇ ಅತ್ಯಂತ ಪ್ರತಾಪಶಾಲಿಯು. ಈತನು ಪಟ್ಟವೇರಿದ ಕೂಡಲೆ ಮುಸಲ್ಮಾನರೊಡನೆ ಕಾಳಗಕ್ಕೆ ನಿಂತನು. ಈತನ ಆಳಿಕೆಯಲ್ಲಿ ಮುಸಲ್ಮಾನರು ಇವನೊಡನೆ ಅನೇಕ ಕಾಳಗಗಳನ್ನು ಮಾಡಿದರೂ, ಅವರಿಗೆ ಒಂದರಲ್ಲಿಯೂ ಜಯವು ಸಿಕ್ಕಲಿಲ್ಲ. ಕೃಷ್ಣರಾಯನು ಮಹಾ ಪರಾಕ್ರಮಿಯಾಗಿದ್ದುದಲ್ಲದೆ, ವಿದ್ಯೆ-ಕಲಾಕೌಶಲ್ಯ-ಔದಾರ್ಯಗಳಲ್ಲಿಯೂ ಬಹು ವಿಖ್ಯಾತನಾಗಿದ್ದನು. ಈತನು ಸ್ವತಃ ತೆಲುಗು ಭಾಷೆಯಲ್ಲಿ ಗ್ರಂಥ

ವನ್ನು ಬರೆದಿರುವನು. ಇವನಿಗೆ ಆಂಧ್ರಭೋಜನೆಂದು ಕರೆಯುತ್ತಿದ್ದರು. ಇವನು ತೆಲುಗು ಮನುಷ್ಯನೆಂದು ಕೆಲವರ ಕಲ್ಪನೆ. ಆದರೆ ಇದು ತಪ್ಪೆಂದು ತೋರುತ್ತದೆ. ಇವನು ತೆಲುಗು ಭಾಷೆಯಲ್ಲಿ 'ಅಮುಕ್ತಮಾಲ್ಯದ' ಅಥವಾ 'ವಿಷ್ಣುಚಿತ್ತೀಯ' ಎಂಬ ಗ್ರಂಥವನ್ನು ರಚಿಸಿರುವನೆಂಬುದರಿಂದ ಇವನು ತೆಲುಗು ಮನುಷ್ಯನೆಂದು ಜನರು ಊಹಿಸುವಂತೆ ತೋರುತ್ತದೆ. ಆದರೆ ಆ ಪುಸ್ತಕವು ಏಕೆ ಬರೆಯಲ್ಪಟ್ಟಿತೆಂಬುದಕ್ಕೆ ಅದರ ಪ್ರಾರಂಭದಲ್ಲಿ ಕೊಟ್ಟ ಕಥೆಯನ್ನು ಓದಿದರೆ ಅವನು ನಿಜವಾಗಿಯೇ ಕನ್ನಡ ಮನುಷ್ಯನೆಂದು ಹೇಳಲಿಕ್ಕೆ ಆಸ್ಪದ ಇದೆ. ಅದು ಹೀಗೆ ಇದೆ.

ಕೃಷ್ಣರಾಯನು ಶ್ರೀಕುಲವೆಂಬ ಆಂಧ್ರ ಗ್ರಾಮಕ್ಕೆ ಹೋದಾಗ ಅಲ್ಲಿಯ ವಿಷ್ಣುದೇವನು ಏಕಾದಸಿಯ ದಿವಸ ಆ ರಾಜನ ಕನಸಿನಲ್ಲಿ ಬಂದು, ಆತನಿಗೆ ತೆಲಗು ಭಾಷೆಯಲ್ಲಿ ಒಂದು ಕಾವ್ಯವನ್ನು ಬರೆದು ಅದನ್ನು ತಿರುಪತಿಯ ಶ್ರೀ ವೆಂಕಟರಮಣ ದೇವರಿಗೆ ಸಮರ್ಪಿಸಲಿಕ್ಕೆ ಹೇಳಿದನಂತೆ! ಆಗ ತೆಲುಗು ಭಾಷೆಯಲ್ಲಿಯೇ ಈ 'ಕನ್ನಡರಾಯ'ನು ಏಕೆ ಗ್ರಂಥವನ್ನು ಬರೆಯಬೇಕೆಂಬುದಕ್ಕೆ ಆ ದೇವರು ಕೆಲವು ಕಾರಣಗಳನ್ನು ಹೇಳಿದನು. ಅವು ಯಾವುವೆಂದರೆ:— (೧) ಇದು ತೆಲುಗು ದೇಶ, (೨) ನಾನು ತೆಲುಗು ದೇವರು, (೩) ತೆಲುಗು ಭಾಷೆ ಸಾಮಾನ್ಯ ಭಾಷೆಯಲ್ಲ, (೪) ಅನೇಕ ದೇಶಭಾಷೆಗಳನ್ನು ಬಲ್ಲವನಾದ ನಿನಗೆ ತೆಲುಗು ಭಾಷೆಯೂ ಲೇಸಾದ ಭಾಷೆಯೆಂಬುದು ಗೊತ್ತುಂಟು." ಆದರೆ, ಇಷ್ಟರಿಂದ ಆತನ ಮಾತೃಭಾಷೆಯು ತೆಲುಗು ಆಗಿತ್ತೆಂದು ಊಹಿಸಲಾಗದು. ತದ್ವಿರುದ್ಧವಾಗಿ (೧) ಆ ತೆಲುಗು ದೇವರು ಆತನಿಗೆ 'ಕನ್ನಡರಾಯ'ನೆಂದು ಕರೆದಿರುವನು. (೨) ಕೃಷ್ಣರಾಯನು ತೆಲುಗು ಭಾಷೆಯವನೇ ಆಗಿದ್ದರೆ ಆತನಿಗೆ ತೆಲುಗು ಭಾಷೆಯಲ್ಲಿಯೇ ಗ್ರಂಥವನ್ನು ಬರೆಯಬೇಕೆಂದು ಬೇರೆ ಹೇಳುವ ಪ್ರಯೋಜನವಿರಲಿಲ್ಲ. (೩) ವಿಜಯನಗರದ ರಾಜ್ಯವು ಬಹುತರವಾಗಿ ಕನ್ನಡ ರಾಜ್ಯ. (೪) ರಾಜಧಾನಿಯಾದ ವಿಜಯನಗರ ಪಟ್ಟಣದ ಮುಖ್ಯ ಭಾಷೆ ಕನ್ನಡ. (೫) ಕೃಷ್ಣರಾಯನಿಗೆ "ಕನ್ನಡರಾಜ್ಯರಮಾರಮಣ" ಎಂದು ಬಿರು

ದಿತ್ತು. ಇವೇ ಮುಂತಾದ ಕಾರಣಗಳ ಮೂಲಕ ರಾಯನ ಮಾತೃಭಾಷೆಯು ಕನ್ನಡವೇ ಆಗಿತ್ತೆಂದು ಊಹಿಸಲಿಕ್ಕೆ ಬಲವಾದ ಆಸ್ಪದವುಂಟಾಗಿದೆ. ಇರಲಿ.

ಶ್ರೀವಿದ್ಯಾರಣ್ಯರಂತೆಯೇ ಧರ್ಮ ಮತ್ತು ರಾಜಕಾರಣಗಳೆಂಬ ಉಭಯ ವಿಷಯಗಳಲ್ಲಿಯೂ ಅತ್ಯಂತ ನಿಷ್ಣಾತರಾದ ಶ್ರೀವ್ಯಾಸರಾಯಸ್ವಾಮಿಗಳು ಈ ನರಸ ಮನೆತನದ ಕುಲಗುರುಗಳು. ಶ್ರೀವ್ಯಾಸರಾಯರು ಬಾಲ್ಯದಲ್ಲಿಯೇ ಸನ್ಯಾಸ ಸ್ವೀಕರಿಸಿದರು. ತಮ್ಮ ಗುರುಗಳಾದ ಶ್ರೀಪಾದರಾಯರ ಅಪ್ಪಣೆಯ ಮೇರೆಗೆ ಅವರು ಲೋಕೋಪಕಾರಕ್ಕೋಸ್ಕರ ರಾಜಸಭೆಯನ್ನಲಂಕರಿಸಿದರು. ವಿಜಯನಗರದಲ್ಲಿ ಅವರ ವರ್ಚಸ್ಸು ವಿಶೇಷವಾಗಿತ್ತು. ಕೃಷ್ಣದೇವರಾಯನು ಅವರನ್ನು ಬಂಗಾರದ ಪೀಠದಲ್ಲಿ ಕುಳ್ಳಿರಿಸಿ, ಅವರಿಗೆ ಮುತ್ತು ಮಾಣಿಕ್ಯಗಳಿಂದ ಅಭಿಷೇಕ ಮಾಡಿದನು. ಅವನು ಅವರಿಗೆ ತನ್ನ ಕುಲದೇವತೆಯೆಂದು ಕರೆಯುತ್ತಿದ್ದನು. ಬಂಗಾಲ ಆಸಾಮುಗಳ ತುಂಬ ಹಬ್ಬಿರುವ ಚೈತನ್ಯ ಪಂಥಕ್ಕೆ ಈ ವ್ಯಾಸಯೋಗಿಗಳೇ ಕಾರಣರು. ಅವರು ೧೪೪೭ನೆಯ ಇಸ್ವಿಯಲ್ಲಿ ಹುಟ್ಟಿ ೧೫೩೯ರಲ್ಲಿ ಮಡಿದರು. ಅಂದರೆ ೯೨ ವರ್ಷ ಬಾಳಿದರು. ಇವರ ಸಹಾಯದಿಂದಲೇ ನರಸನು ವಿಜಯನಗರದಲ್ಲಿ ಸಿಂಹಾಸನವನ್ನು ಸ್ಥಾಪಿಸಿದನು. ಇವರು ಒಂದು ಕಠಿಣ ಪ್ರಸಂಗದಲ್ಲಿ ಸಿಂಹಾಸನವನ್ನೇರಿ ಪ್ರತ್ಯಕ್ಷ ಆಳಿದರೆಂದೂ ನಂಬಿಗೆಯುಂಟು. ಅದಕ್ಕನುಸಾರವಾಗಿ ಶ್ರೀನಿವಾಸರಾಯರ ಮಠದಲ್ಲಿ ಪ್ರತಿನಿತ್ಯ ರಾಜಸಭೆಯು ನೆರೆಯಿಸಲ್ಪಟ್ಟು, ಈ ಪೀಠದ ಸ್ವಾಮಿಗಳಿಗೆ "ಕರ್ನಾಟಕ ಸಿಂಹಾಸನಗತಪ್ರಭೋ" ಎಂದು 'ಪರಾಕು' ಹೇಳಲ್ಪಡುತ್ತದೆ. ಇರಲಿ.

ಕೃಷ್ಣದೇವರಾಯನ ಕಾಲಕ್ಕೆ ವಿಜಯನಗರ ಸಾಮ್ರಾಜ್ಯವು ಪರಮಾವಧಿಯ ಘನತೆಗೇರಿತ್ತು. ಆದರೆ ನಮ್ಮ ಮಿಕ್ಕ ರಾಜ್ಯಗಳಂತೆ ಇದಕ್ಕೂ ಮುಂದೆ ಬಲಾಢ್ಯರಾದ ರಾಜರು ದೊರೆಯದುದರಿಂದ, ಇದು ಒಮ್ಮೆಲೆ ನೆಲಕ್ಕೆ ಕುಕ್ಕರಿಸಿತು. ಇರಲಿ. ಈ ಕೃಷ್ಣರಾಯನು ಅತ್ಯಂತ ಉದಾತ್ತಗುಣಗಳುಳ್ಳವನಾದುದರಿಂದ ತನ್ನ ದೇಶದಲ್ಲಿಯ ಮುಸಲ್ಮಾನ ಪ್ರಜೆಗಳನ್ನು ಎಷ್ಟು ಸಮಭಾವನೆಯಿಂದ ನೋಡುತ್ತಿದ್ದನೆಂದರೆ,

ಮುಸಲ್ಮಾನರ ಸಲುವಾಗಿ ಒಂದು ಕುರಾನವನ್ನಿಟ್ಟು ಅದಕ್ಕೇನೇ ಸಲಾಂ ಮಾಡಲಿಕ್ಕೆ ಹೇಳುತ್ತಿದ್ದನು. ಈತನ ದರಬಾರಿನಲ್ಲಿ ಅಷ್ಟದಿಗ್ಗಜಗಳೆಂಬ ಎಂಟು ಮಂದಿ ಮಹಾಪಂಡಿತರಿದ್ದರು. ತೆನ್ನಾಲ ರಾಮಕೃಷ್ಣನೂ ಅಪ್ಪಯ್ಯ ದೀಕ್ಷಿತರೂ ಅವರೊಳಗಿನವರೇ. ಈತನ ಕಾಲಕ್ಕೆ ಪರದೇಶೀಯ ಪ್ರವಾಸಿಕರು ವಿಜಯನಗರದ ವೈಭವವನ್ನು ಬಲು ಸುಂದರವಾಗಿ ವರ್ಣಿಸಿದ್ದಾರೆ.

(ಮುಂದೆ ೧೨ನೆಯ ಪ್ರಕರಣದಲ್ಲಿ ನೋಡಿರಿ.)

ಅಚ್ಯುತರಾಯನೆಂಬ ಮುಂದಿನ ಅರಸನು ೧೫೩೪ನೆಯ ಇಸವಿಯಲ್ಲಿ "ಆನಂದನಿಧಿ"ಯೆಂಬ ದೊಡ್ಡ ದಾನವನ್ನು ಮಾಡಿದನು.

ಆದರೆ ಅವನ ತರುವಾಯ ವಿಜಯನಗರದ ರಾಜ್ಯವು ಬಹಳ ದಿವಸ ಬಾಳಲಿಲ್ಲ. ಕಡೆಯಲ್ಲಿ ಸದಾಶಿವರಾಯನ ಆಳಿಕೆಯಲ್ಲಿ ಕೃಷ್ಣದೇವರಾಯನ ಅಳಿಯನಾದ ರಾಮರಾಜನೆಂಬವನ ಕೈಯಲ್ಲಿ ರಾಜ್ಯಸೂತ್ರಗಳಿದ್ದುವು. ವಿಜಾಪುರ, ಗೋವಳಕೊಂಡ, ಅಹಮ್ಮದನಗರ, ಬೀದರ ಈ ನಾಲ್ಕು ರಾಜ್ಯಗಳ ಬಾದಶಹರೂ ಒಕ್ಕಟ್ಟಾಗಿ ಒಳಸಂಚು ಮಾಡಿ ಅವನೊಡನೆ ಯುದ್ಧಕ್ಕೆ ಅನುವಾದರು. ರಾಮರಾಜನು ಅತ್ಯಂತ ಶೂರನಾಗಿದ್ದನು. ಅವನಿಗೆ ಆಗ ೯೬ ವರ್ಷವಾಗಿತ್ತು. ಇಂಥ ಮುಪ್ಪಿನ ಮುದುಕನಾದರೂ ಅವನು ೩೦ ವರ್ಷದ ತರುಣನಂತೆ ಉತ್ಸಾಹವುಳ್ಳವನಾಗಿದ್ದನಂತೆ ! ಅವನು ತನ್ನ ದೊಡ್ಡ ಸೈನ್ಯದೊಂದಿಗೆ ರಕ್ಕಸ–ತಂಗಡಗಿ ಎಂಬ ಗ್ರಾಮಗಳ ಹತ್ತಿರ ಮುಸಲ್ಮಾನರ ಮಹಾಸೈನ್ಯಕ್ಕೆ ಇದಿರಾದನು. ಅಲ್ಲಿ ೧೫೬೫ನೆಯ ಇಸವಿಯ ಜನೆವರಿ ೨೩ರಲ್ಲಿ ಅತ್ಯಂತ ತುಮುಲ ಕಾಳಗವೆನಿಸಿತು. ರಾಮರಾಜನ ಪಕ್ಷದ ವೆಂಕಟಾದ್ರಿಯೂ, ಇಳೋತ್ತಮ ರಾಜನೂ ಬಹು ಪರಾಕ್ರಮದಿಂದ ಹೋರಾಡಿ ಹಗೆಗಳನ್ನು ಓಡಿಸುವ ಸಂಧಿಯಲ್ಲಿ, ರಾಮರಾಜನು ತಾನು ಮೇಣೆಯಲ್ಲಿ ಕುಳಿತು ತನ್ನ ಸೈನ್ಯದವರಿಗೆ ಧೈರ್ಯ ಕೊಡುವುದಕ್ಕಾಗಿ ತಿರುಗಾಡುತ್ತಿದ್ದನು. ಅಷ್ಟರೊಳಗೆ ಶತ್ರುಗಳ ಮದ್ದಾನೆ ಮೈಮೇಲೆ ಬಿದ್ದುದನ್ನು ನೋಡಿ ಭೋಯಿಗಳು ಅಂಜಿ ತಮ್ಮ ಜೀವದಾಸೆಯಿಂದ ಮೇಣೆಯನ್ನು ಚೆಲ್ಲಿ ಓಡಿಹೋಗಲಾಗಿ ನಿಜಾಮಶಹನು ರಾಮರಾಜನನ್ನು ಸೆರೆಹಿಡಿದು ಅಲ್ಲಿಯೇ

ಅವನ ತಲೆಯನ್ನು ಕೊಯ್ದು ಭಲ್ಯಕ್ಕೆ ಚುಚ್ಚಿ ಸೈನ್ಯದೊಳಗೆ ತಿರುಗಿ
ಸಿದನು. ಅದನ್ನು ನೋಡಿ ವಿಜಯನಗರದ ದಂಡಿನವರು ಧೈರ್ಯಗುಂದಿ
ಬೆನ್ನು ತೋರಿಸಿದರು. ಆಗ ಮುಸಲ್ಮಾನರು ಮಾಡಿದ ಕೊಲೆಗೆ ಅ
ವಿಲ್ಲ; ರಕ್ತದ ಕಾಲುವೆಗಳು ಹರಿದುವು. ಈ ಮೇರೆಗೆ ಜಯವಾ
ಕೂಡಲೆ ಮುಸಲ್ಮಾನರು ನೆಟ್ಟಗೆ ವಿಜಯನಗರಕ್ಕೆ ಸಾಗಿ, ತಮಗೆ
ಜಯ ಸಿಕ್ಕೇಸಿಕ್ಕುವದೆಂಬ ಭರವಸದಿಂದ ಮೈಮರೆತಿದ್ದ ಪಟ್ಟಣದ ನಿವಾ
ಸಿಗಳನ್ನೆಲ್ಲ ಕೈಗೆ ಸಿಕ್ಕಿದಂತೆ ಕೊಂದು, ಪಟ್ಟಣವನ್ನು ಯಥೇಷ್ಟವಾಗಿ
ಸುಲಿಗೆ ಮಾಡಿದರು.

ಈ ಮೇರೆಗೆ ಸುಮಾರು ೨೩೧ ವರ್ಷ ಘನತೆಯಿಂದ ಮೆರೆದ ವೈಭವ
ಸಂಪನ್ನ ರಾಜ್ಯವು ಆಕಸ್ಮಿಕ ಕಾರಣದಿಂದ ಅರ್ಧ ನಿಮಿಷದಲ್ಲಿ ಮಾಯ
ವಾಯಿತು. ತೀರಿತು. ಅಂದಿನ ಕರ್ನಾಟಕದ ವೈಭವಕ್ಕೆ ಕೊನೆಯಾ
ಯಿತು ! ಕರ್ನಾಟಕ ದೇವಿಯ ಹಣೆಯ ಕುಂಕುಮವು ಅಳಿಸಿತು.
ಕೊರಳ ಮಂಗಳಸೂತ್ರವು ಹೆಚ್ಚಿತು ! ಕರ್ನಾಟಕದ ಸಂಪತ್ತಿಯು
ಸಮಾಧಿ ಹೊಂದಿತು ! ಕರ್ನಾಟಕದ ವಿದ್ಯಾನಿಧಿಯು ಅಡಗಿಹೋಯಿತು!
ಕರ್ನಾಟಕದ ಪ್ರತಾಪ ಸೂರ್ಯನು ಅಸ್ತನಾದನು. ಸಾರಾಂಶವೇನೆಂದರೆ,
ಅಂದಿನಿಂದ ಇಂದಿನವರೆಗೆ ಕರ್ನಾಟಕರಾದ ನಾವು ಇತಿಹಾಸದಿಂದ ನಾಮ
ಶೇಷರಾಗಿ ಹೋಗಿರುವೆವು ! ಕರ್ನಾಟಕರೇ, ನಾವು ಪೂರ್ವ ವೈಭವವನ್ನು
ಪಡೆಯಲು ಪ್ರಯತ್ನಿಸುವ ಕಾಲವು ಇನ್ನೂ ಪ್ರಾಪ್ತವಾಗಿಲ್ಲವೋ ? ವಿಚಾರ
ಮಾಡಿರಿ.

---

೧೨ನೆಯ ಪ್ರಕರಣ

## ವೈಭವ ವರ್ಣನೆ

ಹಿಂದಿನ ಕೆಲವು ಪ್ರಕರಣಗಳಲ್ಲಿ ಕರ್ನಾಟಕದ ಇತಿಹಾಸದೊಳಗಿನ ಮಹತ್ವದ ಸಂಗತಿಗಳನ್ನು ಸಂಕ್ಷೇಪವಾಗಿ ಹೇಳಿರುವೆವಷ್ಟೆ. ಇನ್ನು ಈ ಪ್ರಕರಣದಲ್ಲಿ ನಾವು ನಮ್ಮ ಕರ್ನಾಟಕ ದೇಶವನ್ನೂ ರಾಜಧಾನಿಗಳನ್ನೂ ವರ್ಣಿಸುವೆವು. ನಾವು ನಮ್ಮ ಸ್ವಕಪೋಲಕಲ್ಪಿತವಾದ ವರ್ಣನೆಗಳನ್ನು ಇಲ್ಲಿ ಕೊಡುವುದಿಲ್ಲ. ನಮ್ಮ ಕರ್ನಾಟಕದ ರಾಜರನ್ನೂ, ಪಟ್ಟಣಗಳನ್ನೂ ಕುರಿತು ಪರದೇಶೀಯ ಪ್ರವಾಸಿಕರೂ ಪ್ರಾಚೀನ ಕಾಲದ ಕವಿಗಳೂ ಮಾಡಿದ ವರ್ಣನೆಗಳನ್ನು ಮಾತ್ರವೇ ಇಲ್ಲಿ ಕೊಡುವೆವು.

ಕರ್ನಾಟಕದಲ್ಲಿ ಎಲ್ಲಕ್ಕೂ ಹಳೆಯ ಅರಸುಮನೆತನವು ಕದಂಬರದು. ಇವರ ರಾಜಧಾನಿ ಬನವಾಸಿ. ಕದಂಬರಾಳಿದ ದೇಶವನ್ನು ಬನವಾಸಿ ದೇಶವೆಂದೂ ಕರೆಯುತ್ತಿದ್ದರು. ಈ ಬನವಾಸಿ ದೇಶವನ್ನು ಕನ್ನಡ ಭಾಷೆಯ ಪ್ರಖ್ಯಾತ ಕವಿಯಾದ ಆದಿಪಂಪನು ತನ್ನ ಭಾರತದಲ್ಲಿ ಈ ಬಗೆಯಾಗಿ ವರ್ಣಿಸಿರುವನು :

> ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ವಗೇ।
> ಯಂ ಕಿವಿವೊಕ್ಕಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ॥
> ಪಂ ಕೆಳೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ ।
> ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿದೇಶಮಂ ॥

"ದಕ್ಷಿಣದ ಮಲಯ ಮಾರುತವು ನನ್ನ ಮೈಗೆ ಸುಳಿದರೂ, ಉತ್ತಮವಾದ ಸ್ತೋತ್ರಮಿಶ್ರಿತವಾದ ಸುಭಾಷಿತಗಳನ್ನು ಶ್ರವಣ ಮಾಡಿದರೂ, ಇಂಪಾದ ಗಾಯನವು ಕಿವಿಗೆ ಬಿದ್ದರೂ, ಅದೇ :ಆಗ ಅರಳಿದ ಮಲ್ಲಿಗೆಯ ಮೊಗ್ಗೆಗಳನ್ನು ಕಂಡರೂ ಕಾಂತಾಸಮಾಗಮದ ಸಂತೋಷ

ವುಂಟಾದರೂ, ವಸಂತೋತ್ಸವವನ್ನು ಅನುಭವಿಸಿದರೂ (ಮುಖ್ಯವಾ[illegible] ಎಂಥ ಸುಖಗಳನ್ನು ಅನುಭವಿಸುತ್ತಿದ್ದಾಗ್ಯೂ, ಯಾರು ಎಷ್ಟೇ ಪ್ರ[illegible]ಬಂಧ ಮಾಡಿದರೂ ನನ್ನ ಮನಸ್ಸು ಆ ಬನವಾಸಿ ದೇಶವನ್ನು ಸ್ಮರಿಸದೆ ನಿಲ್ಲದು.

ಬಾದಾಮಿಯ ಚಾಲುಕ್ಯವಂಶದ ಪ್ರಖ್ಯಾತ ರಾಜನಾದ ೨ನೇ ಪುಲಿಕೇಶಿಯ ಆಳಿಕೆಯಲ್ಲಿ ಹುಎನ್‌ತ್ಸಾಂಗ ಎಂದೊಬ್ಬ ಚೀನ ಪ್ರವಾಸಿಯು ೬೨೯ರಿಂದ ೬೪೫ ನೆಯ ಇಸವಿಯ ವರೆಗೆ ಹಿಂದುಸ್ಥಾನದಲ್ಲೆಲ್ಲಾ ಸಂಚರಿಸಿದನು. ಆತನು ಪುಲಿಕೇಶಿಯ ರಾಜ್ಯವನ್ನೂ ಪ್ರಜೆಗಳನ್ನು ಕುರಿತು ಬರೆದಿರುವುದೇನಂದರೆ—

ಈ ಮಹಾರಾಷ್ಟ್ರ ( ದೊಡ್ಡ ರಾಷ್ಟ್ರ ) ದ ರಾಜ್ಯದ ಸುತ್ತಳತೆಯು ಸುಮಾರು ೬೦೦೦ ಲಾಯಿ (೧೨೦೦ ಮೈಲು) ಉಂಟು. ರಾಜಧಾನಿಯು ಪಶ್ಚಿಮ ಭಾಗದಲ್ಲಿ ಒಂದು ದೊಡ್ಡ ಹೊಳೆಯ ಸಮೀಪದಲ್ಲಿ ಇರುತ್ತದೆ ( ಇದು ಬಾದಾಮಿಯೇ ಎಂದು ಡಾ. ಬರ್ಗೆಸ ಇವರು ಅಭಿಪ್ರಾಯ ಪಟ್ಟಿರುತ್ತಾರೆ. ಮಲಪ್ರಭೆಯೇ ಆ ಹೊಳೆ ). ಇದರ ಸುತ್ತಳತೆ ಸುಮಾರು ೬೦ ಲಾಯಿ. ಭೂಮಿಯು ಕಸುವುಳ್ಳದ್ದೂ ಫಲವತ್ತಾಗಿಯೂ ಇದ್ದು ಅದರಲ್ಲಿ ಧಾನ್ಯಗಳು ವಿಪುಲವಾಗಿ ಬೆಳೆಯುತ್ತವೆ. ಹವೆಯು ಉಷ್ಣ; ಜನರು ನಿಷ್ಕಪಟಿಗಳೂ ಸಜ್ಜನರೂ ಸತ್ಯವಂತರೂ ಆಗಿರುತ್ತಾರೆ; ಇವ[illegible] ನಿಲುವಿಕೆ ಎತ್ತರ; ನಡತೆಯಲ್ಲಿ ಛಲವೂ ಅಭಿಮಾನವೂ ಹೆಚ್ಚು; ಮಾಡಿ[illegible] ಉಪಕಾರವನ್ನೆಂದಿಗೂ ಮರೆಯರು; ಅಪಕಾರ ಮಾಡಿದವರನ್ನು ಮಾತ್ರ ಮೆಟ್ಟದೆ ಬಿಡರು. ಅಪಮಾನವನ್ನು ಪರಿಹರಿಸುವುದಕ್ಕಾಗಿ ತಮ್ಮ ಜೀವವನ್ನೂ ಲೆಕ್ಕಿಸರು. ಸಂಕಟ ಕಾಲದಲ್ಲಿ ಮರೆಹೊಕ್ಕವರನ್ನು ಸಂರಕ್ಷಿಸುವುದಕ್ಕಾಗಿ ಯತ್ನಿಸುವಾಗ ಇವರು ತಮ್ಮನ್ನೂ ಕೂಡ ಮರೆತುಬಿಡುವರು. ಹಗೆ ತೀರಿಸುವುದಿದ್ದಾಗ ಇವರು ಮೊದಲು ಆ ಹಗೆಗೆ ಸೂಚನೆಯನ್ನು ಕೊಡಲಿಕ್ಕೆ ಎಂದೂ ಮರೆಯುವುದಿಲ್ಲ. ಆ ಸೂಚನೆಯನ್ನು ಕೊಟ್ಟ ಇಬ್ಬರೂ ಜಗಳಾಡತಕ್ಕವರು. ಥಾಲು-ಭಾ[illegible]ಗಳನ್ನು ತೆಗೆದುಕೊಂಡು ಜಗಳಕ್ಕೆ ಹೊರಡುವರು. ರಣಭೂಮಿಯಿಂದ ಓಡಿ ಹೋಗುವವರನ್ನು ಇವರು ಬೆನ್ನಟ್ಟುವರು. ಆದರೆ ಮರೆಹೊಕ್ಕವ[illegible]



ಹಳೆಬೀಡು ಅಥವಾ ದ್ವಾರಸಮುದ್ರದ
ಒಂದು ಗುಡಿಯಲ್ಲಿಯ ಕಲ್ಲನ ಮೂರ್ತಿಯು

ರನ್ನು ಕಡಿಯುವುದಿಲ್ಲ. ದಳವಾಯಿಯು ಯುದ್ಧದಲ್ಲಿ ಸೋತು ಬಂದರೆ ಅರಸನು ಅವನಿಗೆ ದೇಹದಂಡನೆಯನ್ನು ಮಾಡುವದಿಲ್ಲ; ಸೀರೆಯನ್ನುಡಿಸಿ ಮೆರೆಸುವನು. ಆದರಿಂದ ಆ ಸೋತ ದಳವಾಯಿಯು ತಾನಾಗಿಯೇ ಪ್ರಾಣ ಕೊಡುವನು. ಈ ಸಂಸ್ಥಾನದಲ್ಲಿ ಎದೆಗುಂದದ ವೀರಾಳುಗಳು ಸಾವಿರಾರು ಮಂದಿಯುಂಟು. ಇವರು ಮುಂಭಾಗದಲ್ಲಿಯ ರಣಭೇರಿಯ ನಾದವನ್ನನುಸರಿಸಿ ಹೆಜ್ಜೆಯಿಕ್ಕುವರು. ಸಾವಿರಾರು ಮದ್ದಾನೆಗಳಿಂದಲೂ ಕಾಲಾಳುಗಳಿಂದಲೂ ಕೂಡಿದ ಈ ಸೇನಾ ಸಮೂಹವನ್ನು ಇದಿರಿಸುವ ಎದೆ ಯಾರಿಗುಂಟು? ಇಂಥ ಅನುಪಮವಾದ ಸೇನಾಬಲವೂ ಗಜಬಲವೂ ಉಳ್ಳ ಈ ಅರಸರು ದರ್ಪದಿಂದ ನೆರೆಹೊರೆಯ ರಾಜರನ್ನೆಲ್ಲಾ ಧಿಕ್ಕರಿಸುವುದರಲ್ಲಿ ಸೋಜಿಗವೇನು? ಈ ಅರಸರು ಕ್ಷತ್ರಿಯ ಕುಲದವನು. ಈತನ ಹೆಸರು ಪುಲಿಕೇಶಿ. ಇವನ ವಿಚಾರಗಳು ಉದಾತ್ತ ಮತ್ತು ಗಂಭೀರವಾದವುಗಳು; ಪ್ರಜೆಗಳ ಮೇಲೆ ಇವನಿಗೆ ಬಲು ಪ್ರೀತಿ. ಇವನು ಕೊಡುಗೈದೊರೆ ಎಂದು ಹೆಸರುಗೊಂಡಿರುವನು; ಈತನ ಪ್ರಜೆಗಳು ಅತ್ಯಂತ ರಾಜನಿಷ್ಠರಾಗಿ ಈತನ ಸೇವೆಯಲ್ಲಿ ತತ್ಪರರಾಗಿರುವರು. ಚಕ್ರವರ್ತಿಯಾದ ಹರ್ಷವರ್ಧನನು ಅನೇಕ ರಾಜ್ಯಗಳನ್ನು ಗೆದ್ದಿರುವನು; ನೆರೆಹೊರೆಯವರೂ ದೂರದೂರಿನ ದೇಶದವರೂ ಈ ಹರ್ಷವರ್ಧನನಿಗೆ ಅಂಜಿ ನಡುಗುವರು. ಆದರೆ ಈ ಪುಲಿಕೇಶಿಯ ಪ್ರಜೆಗಳು ಮಾತ್ರ ಆತನನ್ನು ಲೆಕ್ಕಿಸಿರುವುದಿಲ್ಲ. ಆ ಹರ್ಷವರ್ಧನನು ಇವರನ್ನು ಸೋಲಿಸುವುದಕ್ಕಾಗಿ ಪಂಚನದಗಳ ಎಲ್ಲ ಸೈನ್ಯವನ್ನೂ ಕಲೆ ಹಾಕಿದ್ದಾನೆ. ತನ್ನ ರಾಜ್ಯದೊಳಗಿನ ಅತಿರಥ ಮಹರಥಿಗಳನ್ನೆಲ್ಲ ಕರೆಯಿಸಿಕೊಂಡಿದ್ದಾನೆ; ಇಷ್ಟೆಲ್ಲ ಬಲವಾದ ಸೇನಾಸಾಮಗ್ರಿಗಳನ್ನಳವಡಿಸಿಕೊಂಡು ಹರ್ಷವರ್ಧನನು ತಾನೇ ಸ್ವತಃ ಇವನ ಮೇಲೆ ದಂಡೆತ್ತಿ ಬಂದಿದ್ದಾನೆ. ಆದರೂ ಇವರನ್ನು ಮುರಿಯಬಡೆಯುವುದು ಅವನಿಂದಾಗಲಿಲ್ಲ. ಇದರ ಮೆಲಿಂದ ಈ ನಾಡಿನ ಜನರ ಕ್ಷಾತ್ರತೇಜವು ಎಷ್ಟೆಂಬುದು ಗೊತ್ತಾಗುವುದು. ಜನರು ವಿದ್ಯಾವಂತರು. ಇವರಲ್ಲಿ ನಾಸ್ತಿಕರೂ ಆಸ್ತಿಕರೂ ಇರುವರು. ಈ ರಾಜ್ಯದಲ್ಲಿ ನೂರು ಮಠಗಳುಂಟು. ಅದರೊಳಗೆ ಸುಮಾರು ೫೦೦೦

ಬೌದ್ಧ ಭಿಕ್ಷುಕರಿದ್ದಾರೆ. ಅವರೊಳಗೆ ಮಹಾಯಾನ ಪಂಥದವರು ಇರುವರು.

ವಾಚಕರೇ ! ಈ ರೀತಿಯಾಗಿ ಇನ್ನೂ ಹೆಚ್ಚಿಗೆ ವರ್ಣನೆಯಿರುವದು, ವಿಸ್ತಾರಭಯದಿಂದ ನಾವು ಅದನ್ನು ಇಲ್ಲಿ ಕೊಟ್ಟಿಲ್ಲ. ಕರ್ನಾಟಕಸ್ಥರೇ, ಈ ಮೇಲಿನ ವರ್ಣನೆಯನ್ನು ಓದಿ ಯಾವ ಕರ್ನಾಟಸ್ಥನಿಗೆ ತನ್ನ ಪೂರ್ವಜರ ಬಗ್ಗೆ ಸಕೌತುಕವಾದ ಅಭಿಮಾನವುಂಟಾಗುವದಿಲ್ಲ ? ಕನ್ನಡಿಗರೇ, ನಿಮ್ಮ ಪೂರ್ವಜರ ಆ ಧೀರೋದಾತ್ತವಾದ ಸ್ವಭಾವಕ್ಕೆ ಈಗಿನ ನಿಬ್ಬಲ ಸ್ವಭಾವವನ್ನು ಹೋಲಿಸಿ ನೋಡಿರಿ.

ಇನ್ನು ಚಾಲುಕ್ಯರ ಅನಂತರದಲ್ಲಿ ರಾಷ್ಟ್ರಕೂಟ ವಂಶದ ರಾಜಧಾನಿಯಾದ ಮಳಖೇಡ ಪಟ್ಟಣದ ವರ್ಣನೆಯನ್ನು ಇಲ್ಲಿ ಕೊಡುವೆವು. ವರ್ಧಾ ಮತ್ತು ಕರ್ಹಾಡಗಳಲ್ಲಿ ಸಿಕ್ಕಿದ ತಾಮ್ರಶಾಸನಗಳಲ್ಲಿ ಈ ಕೆಳಗಿನ ಶ್ಲೋಕವು ದೊರೆಯುತ್ತದೆ.

> ತತ್ಸೂನುರಾನತನೃಪೋ ನೃಪತುಂಗದೇವಃ ।
> ಸೋಭೂತ್ ಸ್ವಸೈನ್ಯಭರಭಂಗುರಿತಾಹಿರಾಜಃ ।
> ಯೋ ಮಾನ್ಯಖೇಟಮಮರೇಂದ್ರಪುರೋಪಹಾಸಿ ।
> ಗೀರ್ವಾಣಗರ್ವಮಿವ ಖರ್ವಯಿತುಂ ವ್ಯಧತ್ತ ॥
>
> —ವರ್ಧಾ ಮತ್ತು ಕರ್ಹಾಡ ತಾಮ್ರಶಾಸನ

“ ತನ್ನ ಮಹಾ ಸೈನ್ಯದಿಂದ ಅಹಿರಾಜನನ್ನು ಹಣ್ಣಿಗೆ ತಂದಂಥ ಮತ್ತು ನೃಪತಿಗಳಿಂದ ನಮಿಸಲ್ಪಡುವಂಥ ಆವನ ಮಗನಾದ ನೃಪತುಂಗದೇವನು ದೇವತೆಗಳ ಗರ್ವವನ್ನು ಖಂಡಿಸುವ ಉದ್ದೇಶದಿಂದಲೋ ಏನೋ ತನ್ನ ರಾಜಧಾನಿಯಾದ ( ಮಾನ್ಯಖೇಟ ) ಮಳಖೇಡಪುರವನ್ನು ದೇವತೆಗಳ ಅಮರಾವತಿಯ ಪಟ್ಟಣವನ್ನು ಕೂಡ ನಾಚಿಸುವಂತೆ ಬೆಳಸಿದನು ” ಎಂಬುದಾಗಿ ಇದರಲ್ಲಿ ವರ್ಣಿಸುತ್ತದೆ.

ಸಾಲೋಟಗಿಯ ಶಿಲಾಲೇಖದಲ್ಲಿ, ಈ ಪಟ್ಟಣವು ಸುಂದರವಾದ ಭವ್ಯ ಮಂದಿರಗಳಿಂದ ತುಂಬಿತ್ತೆಂದೂ ನದಿಯ ದಂಡೆಯ ಮೇಲೆ ವೀರಾಂಗನೆಯರ ಮುಖಕಮಲಗಳೇ ಕಾಣುತ್ತಿದ್ದವೆಂದೂ ವರ್ಣನೆಯುಂಟು.

ಇನ್ನು, ನಾವು ಕರ್ನಾಟಕದ ಅರಸರೆಲ್ಲರೊಳಗೆ ಶ್ರೇಷ್ಠನಾದ ಚಾಲುಕ್ಯ ವಿಕ್ರಮಭೂಪತಿಯ ವರ್ಣನೆಯನ್ನು ಕೊಡುವೆವು. ಕವಿವರನಾದ ಬಿಲ್ಹಣನು ಈ ವಿಕ್ರಮದೇವನ ಚರಿತ್ರೆಯ ಬಗ್ಗೆ ಸ್ವತಂತ್ರವಾದ ಒಂದು ಸಂಸ್ಕೃತ ಕಾವ್ಯವನ್ನೇ ರಚಿಸಿರುವನು, ಅದರೊಳಗೆ ಒಂದೇ ಶ್ಲೋಕವನ್ನು ಇಲ್ಲಿ ಉದ್ಧರಿಸುತ್ತೇವೆ.

ಜನೈರವಜ್ಞಾತಕವಾಟಮುದ್ರಣೈಃ ಕ್ಷಪಾಸುರಕ್ಷಾವಿಮುಖೈರಸುಪ್ಯತ ।
ಕರಾ ವಿಶಂತಿ ಸ್ವಗವಾಕ್ಷವರ್ತ್ಮಸು ಕ್ಷಪಾಪತೇಶ್ಛಿದ್ರಪಥೈರ್ನತಸ್ಕರಾಃ ।

—ವಿಕ್ರಮಾಂಕದೇವ ಚರಿತ ೧೭-೭

ಎಂದರೆ ಜನರು ರಾತ್ರಿಯಲ್ಲಿ ತಮ್ಮ ಬಾಗಿಲುಗಳನ್ನು ಕೂಡ ಮುಚ್ಚುತ್ತಿರಲಿಲ್ಲ; ಅವರಿಗೆ ಕಳ್ಳರ ಭೀತಿಯೇ ಇಲ್ಲ. ಕಳ್ಳರಿಗೆ ಬದಲು ಚಂದ್ರಕಿರಣಗಳು ಅವರ ಗೃಹಗಳನ್ನು ಪ್ರವೇಶಿಸುತ್ತಿದ್ದವು. ಸಾರಾಂಶ, ಈಗ ರಾಮೇಶ್ವರದಿಂದ ಕಾಶಿಯವರೆಗೆ, ಕೋಲಿಗೆ ಬಂಗಾರ ತೂಗಹಾಕಿಕೊಂಡು ಹೋದರೂ ಅಂಜಿಕೆಯಿಲ್ಲವೆಂದು ಜನರು ನುಡಿಯುವಂತೆ ಆಗ ಚಾಲುಕ್ಯವಿಕ್ರಮನ ಕಾಲದಲ್ಲಿ ಶಾಂತತೆಯು ಪೂರ್ಣವಾಗಿ ನೆಲೆಗೊಂಡಿತ್ತೆಂಬುದನ್ನು ಮೇಲೆ ಹೇಳಿದಂತೆ ವರ್ಣಿಸುತ್ತಿದ್ದರು. ಹಿಂದೆ ನಮ್ಮ ದೇಶದಲ್ಲಿ ಶಾಂತತೆಯೇ ಇರಲಿಲ್ಲ; ಎಲ್ಲಿ ನೋಡಿದಲ್ಲಿ ಅರಾಜಕತೆಯೇ ಇತ್ತು ಎಂದು ತಲೆಯೊಳಗೆ ತಪ್ಪು ಕಲ್ಪನೆಯನ್ನು ಹಾಕಿಕೊಂಡಿರುವ ನಮ್ಮ ಸುರಕ್ಷಿತರ ತಲೆಯೊಳಗೂ ಮೇಲಿನ ವಾಕ್ಯದಿಂದ ಪ್ರಕಾಶಕಿರಣಗಳು ಬೀಳುವುವೆಂದು ಆಶೆಯಿದೆ. ಬಿಲ್ಹಣನು ಬರೆದುದು ಕೇವಲ ಕವಿಕಲ್ಪನೆಯಲ್ಲವೆಂದು ಚಾಲುಕ್ಯವಿಕ್ರಮನ ಮಿಕ್ಕ ಇತಿಹಾಸವನ್ನೋದಿದರೆ ಮನವರಿಕೆಯಾಗುವದು. ಆತನು ಪಟ್ಟವೇರುವ ಪೂರ್ವದಲ್ಲಿಯೇ ಅನೇಕಾನೇಕ ರಾಜ್ಯಗಳನ್ನು ಗೆದ್ದನು. ಪಟ್ಟವೇರಿದ ನಂತರ ೫೦ ವರ್ಷಗಳ ವರೆಗೆ ಅವನ ರಾಜ್ಯದಲ್ಲಿ ಪೂರ್ಣ ಶಾಂತತೆಯು ನೆಲೆಗೊಂಡಿತ್ತು. ಅವನ ಕಾಲಕ್ಕೆ ಆಗಿ ಹೋದ ಗ್ರಂಥಗಳನ್ನು ನೋಡಲು, ಅಂಥ ಗ್ರಂಥಗಳು ಪೂರ್ಣ ಶಾಂತತೆಯು ನೆಲೆಗೊಂಡ ಕಾಲದಲ್ಲಲ್ಲದೆ ಮಿಕ್ಕ ಕಾಲಕ್ಕೆ ಆಗುವುದು ಶಕ್ಯವಿಲ್ಲವೆಂದೂ ಗೊತ್ತಾಗುವುದು. ಅದೇ ಕಾಲದ ಮತ್ತೊಬ್ಬ ಪಂಡಿತನು ನಮ್ಮ ಈ ಕರ್ನಾಟಕದ ಅರಸರನ್ನು ವರ್ಣಿ

ಸುವುದನ್ನು ಆಲಿಸಿರಿ. ವಿಜ್ಞಾನೇಶ್ವರನು ತನ್ನ ಪ್ರಸಿದ್ಧ ಪುಸ್ತಕವಾದ 'ಮಿತಾಕ್ಷರಾ' ಎಂಬ ಧರ್ಮಶಾಸ್ತ್ರ ಗ್ರಂಥದ ಕೊನೆಗೆ ಬರೆದಿರುವು ವೇನಂದರೆ—

ನಾಸೀದಸ್ತಿ ಭವಿಷ್ಯತಿ ಕ್ಷಿತಿತಲೇ ಕಲ್ಯಾಣಕಲ್ಪಂ ಪುರಂ।
ನೋ ದೃಷ್ಟಃ ಶ್ರುತ ಏವ ವಾ ಕ್ಷಿತಿಪತೀ ಶ್ರೀವಿಕ್ರಮಾರ್ಕೋಪಮಃ।
ವಿಜ್ಞಾನೇಶ್ವರ ಪಂಡಿತೋ ನ ಭವತೇ ಕಿಂಚಾನ್ಯದನ್ಯೋಪಮಂ।
ಆಕಲ್ಪಂ ಸ್ಥಿರಮಸ್ತು ಕಲ್ಪಲತಿಕಾಕಲ್ಪಂ ತದೇತತ್ರಯಂ॥

"ಪೃಥ್ವಿಯ ಮೇಲೆ ಕಲ್ಯಾಣದಂಥ ಮತ್ತೊಂದು ಪಟ್ಟಣವು ಹಿಂದೆ ಇದ್ದಿಲ್ಲ. ಈಗಲೂ ಇಲ್ಲ, ಮುಂದೆಯೂ ಹುಟ್ಟುವುದಿಲ್ಲ; ವಿಕ್ರಮಾರ್ಕನಂಥ ಪ್ರತಾಪಶಾಲಿಯಾದ ಅರಸನು ಜಗತ್ತಿನೊಳಗೆ ಬೇರೊಬ್ಬರೂ ಇಲ್ಲ"— ಮುಂತಾಗಿ ವರ್ಣಿಸಿದುದೇನು ಸಾಮಾನ್ಯ ವರ್ಣನೆಯೇ? ಕನ್ನಡಿಗರೇ, ನಿಮ್ಮ ಅರಸನ ಸ್ತುತಿಯನ್ನು ನಿತ್ಯದಲ್ಲಿ ಪಾರಾಯಣ ಮಾಡಿ ಪುಣ್ಯ ಕಟ್ಟಿಕೊಳ್ಳಿರಿ.

ಆದರೆ ನಮ್ಮ ಅರಸರ ವರ್ಣನೆಗಳನ್ನು ಆದ್ಯಂತವಾಗಿ ಕೊಡುವುದು ನಮ್ಮ ಉದ್ದೇಶವಲ್ಲ. ಕನ್ನಡಿಗರಲ್ಲಿ ಬೇರೂರಿದ ಕೆಲವು ಭ್ರಾಮಕ ಕಲ್ಪನೆಗಳನ್ನು ಹೊಡೆದೋಡಿಸಲಿಕ್ಕೆ ದಿಗ್ದರ್ಶನಾರ್ಥವಾಗಿ ನಾವು ಇವನ್ನು ಇಲ್ಲಿ ಕೊಟ್ಟಿರುವೆವು.

ಇನ್ನು, ಕನ್ನಡಿಗರ ಕೊನೆಯ ರಾಜಧಾನಿಯಾದ ವಿಜಯನಗರದ ವೈಭವವನ್ನು ಸಂಗ್ರಹವಾಗಿ ವರ್ಣಿಸುವೆವು. ಇರಾಣದ ರಾಯಭಾರಿಗಳೂ ಯುರೋಪೀಯ ಪ್ರವಾಸಿಗಳೂ ವಿಜಯನಗರದ ರಾಜ್ಯಕ್ಕೆ ಬಂದು ಆ ಪಟ್ಟಣವನ್ನು ನೋಡಿ ಬೆರಗಾಗಿ ಬೆರಳು ಕಚ್ಚಿರುವರು.

ನಿಕೊಲಿಸಕೊಂಟಿ ಎಂದೊಬ್ಬ ಇಟಲಿದೇಶದ ಪ್ರವಾಸಿಯು ೧೪೨೦ ನೆಯ ಇಸವಿಯಲ್ಲಿ ಈ ಪಟ್ಟಣಕ್ಕೆ ಬಂದಿದ್ದನು. ಅವನು ಹೇಳಿದ ವರ್ಣನೆಯ ಸಾರಾಂಶವನ್ನು ಕೊಡುತ್ತೇವೆ—

"ಈ ಪಟ್ಟಣದ ಸುತ್ತಳತೆಯು ೬೦ ಮೈಲು ಇರುತ್ತದೆ. ಈ ಒಂದೇ ಪಟ್ಟಣದಲ್ಲಿ ೯೦,೦೦೦ ಸೈನಿಕರಿರುವರು. ಈ ಪಟ್ಟಣಕ್ಕೆ ಪ್ರಚಂಡವಾದ ಅಗಸೆ ಬಾಗಿಲುಗಳುಳ್ಳ ಏಳು ಸುತ್ತಿನ ಭದ್ರವಾದ ಕೋಟೆಯಿರುವುದು. ನೀರಿನ ವಿಪುಲತೆಯಿರುವುದರಿಂದ ಎಲ್ಲಿ ನೋಡಿದರೂ ಸುಂದರ

ವಾದ ಬನಗಳೂ ಭತ್ತದ ಮತ್ತು ಕಬ್ಬಿನ ತೋಟಗಳೂ ಕಂಗೊಳಿಸುವವು. ಅಲ್ಲಲ್ಲಿ ಭವ್ಯವಾದ ಸುಂದರ ದೇವಾಲಯಗಳೂ ಅವಕ್ಕೆ ಹೊಂದಿ ಮಹಾ ಪಾಠಶಾಲೆಗಳೂ ವಿದ್ಯಾಲಯಗಳೂ ತುಂಬಿವೆ, "

ಅಬ್ದುಲರಜಕನೆಂಬ ಇರಾಣದ ರಾಯಭಾರಿಯು ೧೪೪೨ನೆಯ ಇಸ್ವಿಯಲ್ಲಿ ಇಲ್ಲಿಗೆ ಬಂದಿದ್ದನು. ಆತನು ಈ ಪಟ್ಟಣವನ್ನು ಬಲು ಸುಂದರವಾಗಿ ಬಣ್ಣಿಸಿರುವನು. ಅದೇನೆಂದರೆ—

ಈ ವಿಜಯನಗರದ *ರಾಯನ ಕಾಲದಲ್ಲಿ ೩೦೦ ಬಂದರಗಳುಂಟು. ಎಡೆಬಿಡದೆ ಮೂರು ತಿಂಗಳು ಪ್ರವಾಸ ಮಾಡುವಷ್ಟು ಈ ರಾಜ್ಯವಿಸ್ತಾರವಿದೆ. ಈ ರಾಜನ ಹತ್ತರ ೧೧ ಲಕ್ಷ ಸೈನ್ಯವಿರುತ್ತದೆ. ಇಂಥ ವೈಭವ ಸಂಪನ್ನನಾದ ಬೇರೆ ಅರಸನನ್ನು ಕಾಣುವುದು ದುರ್ಲಭ. ಈ ವಿಜಯನಗರಕ್ಕೆ ಸರಿಗಟ್ಟುವ ಪಟ್ಟಣವನ್ನು ಕಣ್ಣುಗಳು ನೋಡಿಲ್ಲ, ಕಿವಿಗಳು ಕೇಳಿಲ್ಲ. ಅರಮನೆಯ ಮಗ್ಗಲಿಗೆ ಪಗಡಿಯ ಪಟದಂತೆ ಇದಿರು ಬದುರಾಗಿ ನಾಲ್ಕು ಪೇಟೆಯ ಸಾಲುಗಳಿರುತ್ತವೆ. ಉತ್ತರಕ್ಕೆ ರಾಯನ ಅರಮನೆಯ ಮುಖಮಂಟಪವಿರುತ್ತದೆ. ಅರಮನೆಯ ಎರಡೂ ಮಗ್ಗಲಿಗೂ ಭವ್ಯವೂ ಎತ್ತರವೂ ಆದ ಉಪ್ಪರಿಗೆಯ ಸಾಲುಗಳು ಕಂಗೊಳಿಸುತ್ತವೆ. ಅರಮನೆಯ ಸಭಾಮಂಟಪವು ಇವೆಲ್ಲಕ್ಕೂ ಎತ್ತರವಾಗಿ ಭವ್ಯವಾಗಿರುತ್ತದೆ. ಪೇಟೆಯ ಬೀದಿಗಳು ಅತ್ಯಂತ ವಿಶಾಲವಾದವೂ ಉದ್ದವಾದವೂ ಇರುತ್ತವೆ. ಈ ಪಟ್ಟಣದಲ್ಲಿ ಎಲ್ಲಿ ನೋಡಿದರೂ ಗುಲಾಬೀ ಹೂಗಳ ಸುಗ್ಗಿ. ಇಲ್ಲಿಯ ಜನರಿಗೆ ಅವುಗಳ ಮೇಲೆ ಬಲು ಪ್ರೀತಿ. ಊಟವಿಲ್ಲದಿದ್ದರೂ ಅವರಿಗೆ ಸಾಗೀತು, ಆದರೆ ಈ ಹೂವುಗಳಿಲ್ಲದೆ ಸಾಗುವುದಿಲ್ಲ. ಮುತ್ತು–ರತ್ನ–ಪಚ್ಚ–ವಜ್ರಗಳ ವ್ಯಾಪಾರವು ಪ್ರತಿನಿತ್ಯವೂ ನಡೆಯುತ್ತದೆ. ಎಲ್ಲಿ ನೋಡಿದರೂ, ಅಂದವಾದ ಕಲ್ಲು–

---

* ಆಗ ವಿಜಯನಗರದ ಅರಸರಿಗೆ 'ರಾಯ' ರೆಂದು ಪ್ರಸಿದ್ಧಿಯಿತ್ತು. ಈಗ ನಾವೂ ರಾಯರೇ ನೀವೂ ರಾಯರೇ ! ರಾಜ, ರಾಯ, ರಾವ ಈ ಅನುಕ್ರಮವಾಗಿ ರೂಪಗಳಲ್ಲಿ ಬದಲಾಗುತ್ತ ಬಂದಿರುತ್ತದೆ.

ಕಲ್ಲುಗಳಿಂದ ಕಟ್ಟಲ್ಪಟ್ಟ ನೀರು-ಕಾಲುವೆಗಳು ಜುಳುಜುಳು ಹರಿಯುತ್ತವೆ. ಅರಮನೆಯಲ್ಲಿ ಅನೇಕ ನೆಲಮನೆಗಳುಂಟು. ಅವೆಲ್ಲವುಗಳಲ್ಲಿ ನಾಣ್ಯದ ಬೊಕ್ಕಸಗಳು ತುಂಬಿವೆ. ದಿವಾಣಖಾನೆಯ ಇದಿರಿಗೆ ಆನೆಯ ಸಾಲುಗಳು ಉಂಟು. ಪ್ರತಿಯೊಂದು ಆನೆಗೆ ನಿಲ್ಲಲಿಕ್ಕೆ ಒಂದು ದೊಡ್ಡ ಕಟ್ಟಡ ಇರುತ್ತದೆ. ಟಂಕಶಾಲೆಯ ಮುಂದೆ ಪಟ್ಟಣದ ಮುಖ್ಯಾಧಿಕಾರಸ್ಥನ ಮನೆಯುಂಟು, ಅಲ್ಲಿ ೧೨೦೦೦ ಕಾವಲುಗಾರರಿದ್ದಾರೆ.

ಈ ಅಬ್ದುಲರಜಕನು ಪಟ್ಟಣದಲ್ಲಿ ಒಮ್ಮೆ ಉತ್ಸವ ನಡೆದುದನ್ನು ನೋಡಿ, ಈ ರೀತಿಯಾಗಿ ವರ್ಣಿಸಿರುವನು.

ರಾಯನ ಅಪ್ಪಣೆಯ ಮೇರೆಗೆ ರಾಜ್ಯದೊಳಗಿನ ಮುಖ್ಯ ಮುಖ್ಯ ಸರದಾರರೂ, ರಾಜಪುತ್ರರೂ, ಜಕಜಕಿಸುವ ಅಂಬಾರೆಗಳನ್ನೊಳಗೊಂಡ ಸಾವಿರಾರು ಆನೆಗಳನ್ನೇರಿ ಅರಮನೆಗೆ ಬಂದಿರುವರು. ಕೆಳಗಿನಿಂದ ಮೇಲ್ತುದಿಯ ವರೆಗೆ ಸುಂದರವಾದ ಚಿತ್ರಗಳಿಂದ ಮುಚ್ಚಿದ ಅಂತಸ್ತುಗಳುಳ್ಳ ಡೇರೆಗಳಲ್ಲಿ ಇವರು ಇಳಿದುಕೊಂಡಿರುವರು. ಆ ಡೇರೆಗಳಲ್ಲಿ ಹಲವು ಡೇರೆಗಳು ತಿರುಗಿದತ್ತ ತಿರುಗುತ್ತವೆ. ಆ ಡೇರೆಯಲ್ಲಿ ಪ್ರತಿಯೊಂದು ಕ್ಷಣಕ್ಕೂ ಹೊಸ ಸಭಾಮಂಟಪಗಳು ದೃಷ್ಟಿಗೆ ಬೀಳುತ್ತಿದ್ದುವು. ಇವೆಲ್ಲವುಗಳ ಮುಂದೆ ೯ ಅಂತಸ್ತುಗಳುಳ್ಳ ಸುಂದರವಾದ ಒಂದು ದೊಡ್ಡ ಡೇರೆಯುಂಟು. ಈ ಡೇರೆಯಲ್ಲಿ ೯ ನೆಯ ಉಪ್ಪರಿಗೆಯಲ್ಲಿ ರಾಯನ ರತ್ನ ಖಚಿತವಾದ ಬಂಗಾರದ ಸಿಂಹಾಸನವು ಕಂಗೊಳಿಸುತ್ತದೆ. ೧೦ ಜನ (೩೦ ಚಚ್ಚೌಕ ಫೂಟು) ಉದ್ದಗಲವುಳ್ಳ ನಡುವಿನ ಸಭಾಮಂಟಪಕ್ಕೆ ನನ್ನನ್ನು ಕರೆದೊಯ್ದರು. ಆ ಸಭಾಮಂಟಪದ ಗೋಡೆಗಳೂ ಮೇಬ್ಬದಿಯೂ ಬೆಲೆಯುಳ್ಳ ಮುತ್ತು ರತ್ನಗಳಿಂದ ಕೆತ್ತಲ್ಪಟ್ಟ ಬಂಗಾರದ ನಕ್ಷತ್ರಗಳಿಂದ ತುಂಬಾ ಮುಚ್ಚಲ್ಪಟ್ಟಿದ್ದುವು. ಅದರ ತಗಡುಗಳು ಕತ್ತಿಯ ಅಲಗಿನಷ್ಟು ದಪ್ಪವಾಗಿ ಬಂಗಾರದ ಮೊಳೆಗಳಿಂದ ಗಟ್ಟಿಯಾಗಿ ಕೂಡಿಸಲ್ಪಟ್ಟಿದ್ದುವು.

"ದುಯಾರ್ತ ಬಾರ್ಬೋಸಾ" ಎಂಬ ಪೋರ್ತುಗೀಸ್ ಪ್ರವಾಸಿಯು ೧೫೩೪ರಲ್ಲಿ ಇಲ್ಲಿಗೆ ಬಂದಿದ್ದನು. ಅವನೂ ಹೀಗೆಯೇ ಬಣ್ಣಿಸಿರುವನು.

" ಈ ಪಟ್ಟಣದಲ್ಲಿ ಅಸಂಖ್ಯಾತ ಜನರುಂಟು. ಅರಮನೆಗಳೂ ಅಸಂಖ್ಯಾತವಾಗಿವೆ; ಇಲ್ಲಿ ಎಲ್ಲ ತರದ ಜನಾಂಗಗಳ ಮತ್ತು ಜಾತಿಗಳ ಜನರ ಮುಖಗಳನ್ನು ನೋಡಬಹುದು. ಇಲ್ಲಿಗೆ ಪೇಗೂ ಮತ್ತು ಸಿಂಹಲ ದ್ವೀಪದಿಂದ ವಜ್ರಗಳು ಬರುತ್ತವೆ. "

ನನಿಝುನೆಂಬ ಮತ್ತೊಬ್ಬ ಪೋರ್ತುಗೀಸ್ ಪ್ರವಾಸಿಯೂ ಹೀಗೆಯೇ ವರ್ಣಿಸಿರುವನು.

ಪೇಮುಸನೆಂಬ ಪೋರ್ತುಗೀಸ್ ಪ್ರವಾಸಿಯು ೧೫೨೦ ರಲ್ಲಿ ಎಂದರೆ ಈ ವೈಭವದ ಪರಮಾವಧಿಯ ಕಾಲದಲ್ಲಿ ಇಲ್ಲಿಗೆ ಬಂದಿದ್ದನು. ಅವನು ವಿಜಯನಗರ ಪಟ್ಟಣವನ್ನು ಅತಿ ವಿಸ್ತಾರವಾಗಿ ವರ್ಣಿಸಿರುವನು. ಅದರಿಂದ ಇಂಥ ಪೇಟೆಯು ಇಂಥ ಕಡೆಯೇ ಇತ್ತೆಂದೂ- ಇಂಥ ಗುಡಿಯು ಇಲ್ಲಿಯೇ ಇತ್ತೆಂದೂ ಈಗಲೂ ಗೊತ್ತುಹಿಡಿಯಬಹುದು. ಅದರ ಸ್ವಲ್ಪ ಸಾರಾಂಶವನ್ನು ಇಲ್ಲಿ ಕೊಡದಿರಲಾರೆವು.

ಈ ಪಟ್ಟಣದ ವಿಸ್ತಾರವನ್ನು ನಾನು ಏನೆಂದು ಬಣ್ಣಿಸಲಿ ! ಒಮ್ಮೆಯೇ ಇಡೀ ಪಟ್ಟಣವನ್ನು ಕಂಡರಷ್ಟೇ. ಇದನ್ನು ನಾನು ಚೆನ್ನಾಗಿ ಬಣ್ಣಿಸಲಾದೀತು ! ಆದರೂ ನಾನು ಒಂದು ಗುಡ್ಡವನ್ನೇರಿ ನೋಡಿದೆನು. ಆಗ ನನ್ನ ಕಣ್ಣಿಗೆ ಬಿದ್ದ ಭಾಗವೇ ರೋಮ್ ಪಟ್ಟಣದಷ್ಟು ವಿಶಾಲವೂ ಅತ್ಯಂತ ಮನೋಹರವೂ ಆಗಿದೆ. ಅಲ್ಲಿ ನಿಬಿಡವಾದ ಗಿಡಗಳ ಸಾಲುಗಳು ಅಂದವಾಗಿ ಕಂಡವು. ಅಲ್ಲಲ್ಲಿಗೆ ಅನೇಕ ಸರೋವರಗಳು ಕಂಗೊಳಿಸುತ್ತವೆ. ಅರಮನೆಯ ಸಮೀಪದಲ್ಲಿಯೇ ತೆಂಗಿನ ಬನಗಳೂ ಫಲಭರಿತವಾದ ತೋಟಗಳೂ ತುಂಬಿವೆ. ಅಲ್ಲಲ್ಲಿಗೆ ನಿರ್ಮಲವಾಗಿ ಹರಿಯುವ ಝರಿಗಳಿಂದಲೂ ಹಸರು ಬಳ್ಳಿಗಳಿಂದಲೂ ಲಿಂಬಿ, ದ್ರಾಕ್ಷೆ, ಕಿತ್ತಳೆ, ಅಂಜೀರು ಮುಂತಾದ ಫಲವೃಕ್ಷಗಳಿಂದಲೂ ಈ ಪಟ್ಟಣವು ಬಹು ಶೋಭಾಯಮಾನವಾಗಿದೆ. ಈ ಪಟ್ಟಣದಲ್ಲಿ ಜನಸಂಖ್ಯೆಯು ಅಪರಿಮಿತವಾಗಿದೆ. ವರ್ತಕರು ಮುತ್ತು-ರತ್ನ-ಹವಳ-ಮಾಣಿಕ-ವಜ್ರಗಳ ವ್ಯಾಪಾರವನ್ನು ಮಿತಿಮೀರಿ ಮಾಡುತ್ತಾರೆ. ಪ್ರತಿ ಶುಕ್ರವಾರಕ್ಕೊಮ್ಮೆ ದೊಡ್ಡ ಸಂತೆಯಾಗುತ್ತದೆ. ಆದರೆ ಪ್ರತಿಯೊಂದು ದಿನವೂ ಬೇರೆ ಬೇರೆ ಬೀದಿಗಳಲ್ಲಿ ಸಂತೆಗಳು ಕೂಡಿಯೇ ಕೂಡುತ್ತವೆ. ಈ ಪಟ್ಟಣದಲ್ಲಿ ಇಂಥ

ಸರಕುಗಳು ಸಿಕ್ಕುವುದಿಲ್ಲವೆಂದಿಲ್ಲ. ಹಣ್ಣು—ಹಂಪಲ ಕಾಯಿಪಲ್ಯಗಳ ರಾಶಿಯನ್ನು ನೋಡಿದರೆ ಕಣ್ಣು ತಿರುಗುತ್ತವೆ. ಅಂಗಡಿ ಮುಂತಾದವುಗಳಲ್ಲದೆ, ಜನರು ವಾಸಿಸುವ ಮನೆಗಳೇ ಈ ಪಟ್ಟಣದಲ್ಲಿ ಒಂದು ಲಕ್ಷ ಇವೆ. ಈ ರಾಯನು ೨೦ ಲಕ್ಷ ಸೈನ್ಯವನ್ನು ಕೂಡಿಸಬಲ್ಲನು. ಇವನ ಸೈನಿಕರನ್ನು ನಾನು ನೋಡಿದೆನು. ಆ ಸೈನಿಕರಲ್ಲಿ ಹೇಡಿಯೊಬ್ಬನೂ ನನಗೆ ಕಾಣಬರಲಿಲ್ಲ.

ವಾಚಕರೇ, ದಕ್ಷಿಣೋತ್ತರ ೧೪ ಮೈಲು, ಪೂರ್ವಪಶ್ಚಿಮ ೧೦ ಮೈಲು ವಿಸ್ತಾರವುಳ್ಳ ಈ ಪಟ್ಟಣದ ವೈಭವನ್ನು ಸಾಕಾದಷ್ಟು ಬಣ್ಣಿಸುವುದೆಂತು ! ಅಲ್ಲಿಯ ಪ್ರತಿಯೊಂದು ಬೀದಿಯು ಮುಂಬಯಿಯಲ್ಲಿರುವ ಎಲ್ಲಕ್ಕೂ ದೊಡ್ಡ ಬೀದಿಗಿಂತ ಅಗಲವೂ ಸರಳವೂ ಚೆಂದವೂ ಆಗಿದೆ. ಪ್ರತಿಯೊಂದರ ಮಗ್ಗಲಿಗೆ ಒಂದು ಸುಂದರವಾದ ಸರೋವರವಿತ್ತು. ಈಗಲೂ ಈ ಹಾಳು ಪಟ್ಟಣದ ಕುರುಹುಗಳನ್ನು ಕಾಣಬಹುದು. ಅದುದರಿಂದ ಅದನ್ನು ಪ್ರತಿಯೊಬ್ಬ ಕನ್ನಡಿಗನೂ ಸ್ವತಃ ನೋಡಿಯೇ ತೃಪ್ತಿಗೊಂಡು ಸ್ಫೂರ್ತಿಗೊಳ್ಳಬೇಕು. ಈ ಪಟ್ಟಣನನ್ನು ನೋಡಿದವನು ಕನ್ನಡಿಗನೇ ಅಲ್ಲವೆಂದು ಹೇಳಬಹುದು.

ಈ ಪಟ್ಟಣಗಳಲ್ಲದೆ ಇನ್ನೂ ಅನೇಕ ಪಟ್ಟಣಗಳ ವರ್ಣನೆಯನ್ನೂ ಕೊಡಬಹುದು. ಹಳೇಬೀಡು ಅಥವಾ ದ್ವಾರಸಮುದ್ರವು ೫ ಮೈಲು ಉದ್ದವಿತ್ತು; ಅದೊಂದೇ ಪಟ್ಟಣದಲ್ಲಿ ೭೭೦ ಗುಡಿಗಳಿದ್ದವಂತೆ. ಐಹೊಳೆಯು ವ್ಯಾಪಾರದ ಪಡಮೂಲೆಯಿತ್ತೆಂದು ವರ್ಣನೆಗಳಿವೆ. ಬಳ್ಳಿಗಾವಿ, ದೇವಗಿರಿ, ತೇರದಾಳ, ಪಟ್ಟದಕಲ್ಲು ಮುಂತಾದ ಅನೇಕ ಪಟ್ಟಣಗಳ ವರ್ಣನೆಯನ್ನು ನಾವು ಪುಸ್ತಕಗಳಲ್ಲಿ ಓದಬಹುದು. ಕನ್ನಡಿಗರೇ, ಅವನ್ನು ಓದಿ ಆನಂದಪಡೆಯಿರಿ.

———

## ೧೩ ನೆಯ ಪ್ರಕರಣ

## ಕರ್ನಾಟಕದ ಕಟ್ಟಡಗಳು

Imp

" Nothing is more admirable in the great movements in India than the consummate skill and imagination with which, inspite of the extraordinary wealth of detail, every part of the whole is perfectly adjusted in its place and so balanced that aesthetical unity is always perfectly observed. "

Mr. HAVELL

ಸಾರಾಂಶ:— ಹಿಂದೂದೇಶದ ಕಟ್ಟಡಗಳಲ್ಲಿ ವಿಶೇಷವಾಗಿ ಆಶ್ಚರ್ಯ ಪಡತಕ್ಕ ಸಂಗತಿಯೇನಂದರೆ— ಚಿತ್ರಗಳಲ್ಲಿ ಅತಿಸೂಕ್ಷ್ಮವಾದ ಕೆತ್ತಿಗೆಯ ಕೆಲಸವು ಕಂಡುಬರುತ್ತದೆ. ಆದರೆ ಈ ಕೆತ್ತಿಗೆ ಕೆಲಸವು ಆಯಾ ಚಿತ್ರಕ್ಕೆ ಒಪ್ಪುವಂತೆ, ಯೋಗ್ಯವಾದ ಸ್ಥಳದಲ್ಲಿಯೇ ಕೊರೆಯಲ್ಪಟ್ಟಿರುವುದರಿಂದ ಆ ಚಿತ್ರದ ಒಟ್ಟು ಸೌಂದರ್ಯಕ್ಕೆ ಅದರಿಂದ ಶಿಲಪ್ರಾಯವೂ ಕುಂದುಂಟಾಗಿರುವುದಿಲ್ಲ. ಹೀಗೆ ಮಾಡುವದರಲ್ಲಿ ಅವರು ತೋರಿಸಿದ ಚಾತುರ್ಯವೂ ಕಲ್ಪಕತೆಯೂ ಉತ್ತಮವಾಗಿದೆ.

ಹ್ಯಾವೆಲ್

" All architecture is but he expression of the national life and character. "

RUSKIN.

ಶಿಲ್ಪಕಲೆಯೆಲ್ಲವೂ ರಾಷ್ಟ್ರೀಯ ಜೀವನದ ಮತ್ತು ರಾಷ್ಟ್ರಸ್ವಭಾವದ ಆದರ್ಶವೇ ಆಗಿರುತ್ತದೆ.

ರಸ್ಕಿನ್

" The craft traditions of South India form a priceless record of great civilization, to which the whole world is deeply indebted. No civilization ancient or modern has produced a higher culture, no other has succeeded better in making religion the philosophy of life, and no other has contributed so much to human knowledge. "

Mr. HAVELL

ಸಾರಾಂಶ— ದಕ್ಷಿಣ ಹಿಂದುಸ್ಥಾನದಲ್ಲಿಯ ಪರಂಪರಾಗತವಾದ ಕೈಗಾರಿಕೆಯ ಕೆಲಸಗಳು ಉಚ್ಚ ಸುಧಾರಣೆಯ ಉತ್ತಮವಾದ ಸಾಕ್ಷಿಗಳಾಗಿವೆ. ಆ ಬಗ್ಗೆ ಇಡೀ ಜಗತ್ತೇ ಅವುಗಳಿಗೆ ಅತ್ಯಂತ ಋಣಿಯಾಗಿದೆ. ಪ್ರಾಚೀನ ಸುಧಾರಣೆಯಲ್ಲಿಯೇ ಆಗಲಿ, ಅರ್ವಾಚೀನ ಸುಧಾರಣೆಯಲ್ಲಿಯೇ ಆಗಲಿ, ಆಷ್ಟೊಂದು ಉನ್ನತವಾದ ಸಂಸ್ಕೃತಿಯನ್ನು ಬೇರಾವುದೂ ಹುಟ್ಟಿಸಿರುವುದಿಲ್ಲ; ಧರ್ಮವನ್ನು ಆಯುಷ್ಯದ ಇತಿಕರ್ತವ್ಯತೆಯಾಗಿ ಮಾಡುವುದರಲ್ಲಿ ಆದರಷ್ಟು ಸಿದ್ಧಿಯನ್ನು ಬೇರಾವ ಸುಧಾರಣೆಯೂ ಪಡೆದಿರುವುದಿಲ್ಲ; ಅಲ್ಲದೆ, ಮಾನವ ಜ್ಞಾನಭಾಂಡಾರಕ್ಕೆ ಅದರಿಂದಾದಷ್ಟು ಸಹಾಯವು ಬೇರಾವುದರಿಂದಲೂ ಆಗಿರುವುದಿಲ್ಲ.

ಹ್ಯಾವೆಲ್

ಅತಿ ಪ್ರಾಚೀನ ಕಾಲದಿಂದ ಇಂದಿನವರೆಗಿನ ಇತಿಹಾಸವನ್ನು ನೋಡಿದರೆ, ಉನ್ನತ ಶಿಖರವನ್ನು ತಲ್ಪಿದ ಪ್ರತಿಯೊಂದು ರಾಷ್ಟ್ರವೂ ಶಿಲ್ಪಕಲೆಯಲ್ಲಿ ತನ್ನ ಪ್ರಾವೀಣ್ಯವನ್ನು ತೋರಿಸಿರುತ್ತದೆಂದು ಕಂಡುಬರುವದು. ಮಿಕ್ಕ ಕಲೆಗಳ ಕುರುಹುಗಳು ಕಾಲನಿಂದ ಸ್ವಲ್ಪಾವಧಿಯಲ್ಲಿ ಅಳಿಸಿಹೋಗುವಂತೆ ಈ ಕಲೆಯ ಪರಿಣಾಮಗಳು ಅಳಿಸಿಹೋಗುವದಿಲ್ಲ. ಆದುದರಿಂದ ಶಿಲ್ಪಕಲೆಯು ಇತಿಹಾಸಕ್ಕೆ ಪ್ರಧಾನವಾದ ಅಂಗವಾಗಿದೆ. ನಮ್ಮ ಕರ್ನಾಟಕದ ವೈಭವವು ಈಗ ಹಾಳಾಗಿ ಹೋಗಿರುವುದರಿಂದ ಅದನ್ನು ಈಗ ಒಂದು ಸ್ಮಶಾನಕ್ಕೆ ಹೋಲಿಸ-

ಬಹುದು. ಇಲ್ಲಿ ನಮ್ಮ ಹಿಂದಿನ ವೈಭವವೆಲ್ಲವೂ ತಾಳೀಕೋಟೆಯ ಕಾಳಗ ದಲ್ಲಿ ಸುಟ್ಟು ಬೂದಿಯಾಗಿ ಹೋಗಿದೆ. ಎಲ್ಲಿ ನೋಡಿದರೂ ಹಾಳು ಸುರಿ ಯುತ್ತದೆ. ಇಂಥ ಸ್ಥಿತಿಯಲ್ಲಿ ಸ್ಮಶಾನಭೂಮಿಯಲ್ಲಿ ದೊರೆಯುವ ಎಲುಬು ಮುಂತಾದ ಅವಶೇಷಗಳಿಂದಲೇ ಅಲ್ಲಿ ಸುಟ್ಟು ಬೂದಿಯಾಗಿ ಹೋದ ಜನರ ಮೈಕಟ್ಟು, ನಿಲುವಿಕೆ ಮುಂತಾದವುಗಳ ಬಗ್ಗೆ ಕಲ್ಪನೆಗ ಳನ್ನು ಮಾಡುವಂತೆ ನಾವು ನಮ್ಮ ಪೂರ್ವವೈಭವದ ಅವಶೇಷಗಳಾದ ಈ ಕಟ್ಟಡಗಳಿಂದಲೇ ನಮ್ಮ ಪೂರ್ವಜರ ಸಾಮರ್ಥ್ಯದ ಕಲ್ಪನೆಯನ್ನು ಮಾಡಬೇಕಾಗಿದೆ. ಆದುದರಿಂದ ನಮ್ಮ ಕರ್ನಾಟಕ ಶಿಲ್ಪಕಲೆಯ ಇತಿ ಹಾಸವನ್ನು ಇಲ್ಲಿ ಸಂಕ್ಷೇಪವಾಗಿ ವರ್ಣಿಸುವೆವು.

ಜೈನ ಮತ್ತು ಬುದ್ಧರ ಕಾಲದಲ್ಲಿ ವಿಹಾರಗಳನ್ನೂ ಚೈತ್ಯಾಲಯ ಗಳನ್ನೂ ಕಲ್ಲುಗಳಲ್ಲಿ ಕೊರೆಯುವ ಸಂಪ್ರದಾಯವಿತ್ತು. ಈ ಕೊರೆದ ಕಲ್ಲುಗುಡಿಗಳು ನಮ್ಮ ದೇಶದಲ್ಲಿವಿಪುಲವಾಗಿರುವವು. ಹಿಂದುಸ್ಥಾನದಲ್ಲಿರುವ ಈ ತರದ ಗುಡಿಗಳಲ್ಲಿ ಹತ್ತರಲ್ಲಿ ಒಂಬತ್ತು ಪಾಲು ಗುಡಿಗಳು ಈ ಪಶ್ಚಿಮ ಹಿಂದುಸ್ಥಾನದಲ್ಲಿಯೇ ಇರುವವು. ಪಶ್ಚಿಮ ಘಟ್ಟದ ಮಾರ್ಗಗಳ ನೆರೆ ಯಲ್ಲಿಯ ಗುಡ್ಡದ ಸಾಲುಗಳಲ್ಲಿ ಇಂಥ ಗುಡಿಗಳು ನೂರಾರು ಇರುವವು. ನಾಸಿಕ, ಕಾರ್ಲೆ, ಅಜಂತಾ, ಕಾನ್ಹೇರಿ, ಭಾಜಾ, ನಾನಘಾಟ, ಕೂಡ, ಜುನ್ನರ ಮುಂತಾದ ಸ್ಥಳಗಳಲ್ಲಿ ಈ ಮಾದರಿಯ ಗುಡಿಗಳು ತುಂಬಿವೆ. ಈ ತರದ ಹಲವು ಕೊರೆದ ಕಲ್ಗುಡಿಗಳಲ್ಲಿ ಲಿಪಿಗಳೂ ಇರುತ್ತವೆ. ಕಾರ್ಲೆ ಮತ್ತು ನಾಸಿಕ ಗುಡಿಗಳೇ ಅತ್ಯಂತ ಪ್ರಾಚೀನವಾದವುಗಳು.

ಇವುಗಳ ತರುವಾಯದ ಗುಡಿಗಳೆಂದರೆ, ಇವೇ ಗವಿಗಳ ಮಾದ ರಿಯ ಮೇಲೆ ಕಟ್ಟಿದ ಗುಡಿಗಳು. ಈ ತರದ ಗುಡಿಗಳು ಐಹೊಳೆ, ಪಟ್ಟದಕಲ್ಲು ಬಾದಾಮಿಗಳಲ್ಲಿ ದೊರೆಯುತ್ತವೆ. ಇವು ಪೂರ್ಣ ಗುಡಿಗಳೂ ಅಲ್ಲ; ಗವಿಗಳೂ ಅಲ್ಲ.

ಈ ಅಖಂಡವಾದ ಕಲ್ಲುಗುಡಿಗಳಲ್ಲಿ ಕಾರ್ಲೆ, ಕಾನ್ಹೇರಿ, ಅಜಂತಾ ಇವುಗಳಲ್ಲಿಯ ಹಲವು ಗುಡಿಗಳು ನಮ್ಮ ಕರ್ನಾಟಕ ರಾಜರ ಆಳಿಕೆ ಯಲ್ಲಿಯೇ ಕೊರೆಯಲ್ಪಟ್ಟಿವೆ ಎಂಬ ಸಂಗತಿಯು ನೆನಪಿನಲ್ಲಿಡತಕ್ಕು

ದಾಗಿದೆ. ಕಾರ್ಲೆಯೊಳಗಿನ ದೊಡ್ಡ ಸುಂದರವಾದ ಚೈತ್ಯಾಲಯವನ್ನು ಕದಂಬ ಅರಸರ ಆಳಿಕೆಯಲ್ಲಿ ಧನಶೆಟ್ಟಿಯೆಂದೊಬ್ಬ ಧನವಂತನು ಕಟ್ಟಿಸಿದನಂತೆ. ಕಾನ್ಹೇರಿಯಲ್ಲಿ ನೂರಾರು ವಿಹಾರಗಳನ್ನು ರಾಷ್ಟ್ರಕೂಟ ಅರಸನಾದ ಅಮೋಘವರ್ಷ ಅಥವಾ ನೃಪತುಂಗನು ಸಾರ್ವಭೌಮ ಚಕ್ರವರ್ತಿಯಾಗಿದ್ದಾಗ ಅವನ ಮಾಂಡಲಿಕ ಅರಸರಾದ ಶಿಲಾಹಾರರು ಕಟ್ಟಿಸಿದರೆಂದು ಆ ಗವಿಗಳಲ್ಲಿ ಉಲ್ಲೇಖವಿದೆ. ಅಜಂತೆಯಲ್ಲಿಯ ಗುಡಿಗಳೂ ಅವುಗಳೊಳಗಿನ ಅತ್ಯಂತ ಸುಂದರವಾದ ಚಿತ್ರಗಳೂ ಬಹುತರವಾಗಿ ಬಾದಾಮಿಯ ಚಾಲುಕ್ಯರೊಳಗೆ ಅತ್ಯಂತ ಪ್ರಸಿದ್ಧನಾದ ೨ನೆಯ ಪುಲಿಕೇಶಿಯ ಕಾಲದಲ್ಲಿ ಹುಟ್ಟಿರುತ್ತವೆ.

ಬಾದಾಮಿಯ ಪ್ರಸಿದ್ಧ ವೈಷ್ಣವ ಗವಿಯನ್ನು ೨ನೆಯ ಪುಲಿಕೇಶಿಯ ಕಕ್ಕನಾದ ಮಂಗಲೀಶನೆಂಬವನು ೫೦೦ ನೆಯ ಶತಕದಲ್ಲಿ ಕಟ್ಟಿಸಿದನು. ಈ ಗುಡಿಯೊಳಗಿನ ಚಿತ್ರಗಳು ಬಲು ಸುಂದರವಾಗಿವೆ. ಐಹೊಳೆಯಲ್ಲಿ ಚಿಕ್ಕ ದೊಡ್ಡ ಸುಂದರವಾದ ದೇವಾಲಗಳು ತುಂಬಿರುತ್ತವೆ. ಇದೇ ಐಹೊಳೆಯಲ್ಲಿಯ ಒಂದು ಜೈನ ಗುಡಿಯಲ್ಲಿ ಅತ್ಯಂತ ಪ್ರಸಿದ್ಧವಾದ ದೊಡ್ಡ ಶಿಲಾಲಿಪಿಯು ಇಂದಿಗೂ ಅಚ್ಚಳಿಯದೆ ಉಳಿದಿರುತ್ತದೆ. ಇದರಿಂದ ದೊರೆತಷ್ಟು ಐತಿಹಾಸಿಕ ಮಾಹಿತಿಯು ಮಿಕ್ಕ ಯಾವ ಶಿಲಾಲಿಪಿಯಿಂದಲೂ ದೊರೆತಿಲ್ಲ. ೨ನೆಯ ಪುಲಿಕೇಶಿಯು ಮತ್ತು ಅವನ ಪೂರ್ವಜರ ವಿಷಯಕ್ಕೆ ಆ ಲಿಪಿಯು ಮಹತ್ವದ ಸಂಗತಿಯನ್ನು ವಿವರಿಸುತ್ತದೆ. ಪಟ್ಟದಕಲ್ಲೊಳಗೆ ಒಂದೇ ಕಡೆಗೆ ಸಾಲಾಗಿ ೮-೯ ಒಂದಕ್ಕಿಂತ ಒಂದು ಸುಂದರವಾದ ದೇವಾಲಯಗಳು ನೋಡತಕ್ಕವಾಗಿವೆ. ಅವುಗಳಲ್ಲೆಲ್ಲ ವಿರೂಪಾಕ್ಷ ದೇವಾಲಯವು ದೊಡ್ಡದು. ಇದನ್ನು ೨ನೆಯ ಪುಲಿಕೇಶಿಯ ವಂಶಜನಾದ ವಿಕ್ರಮಾದಿತ್ಯನೆಂಬವನ ಹೆಂಡತಿಯಾದ ಲೋಕಮಹಾದೇವಿಯು ೬೫೬ ನೆಯ ಶಕದಲ್ಲಿ ತನ್ನ ಗಂಡನು ಪಲ್ಲವರನ್ನು ಸೋಲಿಸಿದ್ದರ ಸೂಚನಾರ್ಥವಾಗಿ ಕಟ್ಟಿಸಿದಳು. ಈ ದೇವಾಲಯಗಳಲ್ಲದೆ ಇಟಗಿ, ಲಕ್ಕುಂಡಿ, ಲಕ್ಷ್ಮೇಶ್ವರ, ಹಾನಗಲ್ಲ, ಕುಕನೂರ ಮುಂತಾದ ಅನೇಕ ಸ್ಥಳಗಳಲ್ಲಿಯೂ ದೇವಾಲಯಗಳು ನೋಡತಕ್ಕವಾಗಿವೆ. ಈ ತರದ ಗುಡಿಗಳಿಗೆ ಚಾಲುಕ್ಯ ಪದ್ಧತಿಯು ಕಟ್ಟಡಗಳೆಂದು

ಕರೆಯು ವಾಡಿಕೆಯುಂಟು. ಈ ಪದ್ಧತಿಯ ಗುಡಿಗಳ ವಿಷಯವಾಗಿ ಪ್ರಸಿದ್ಧ ಶಿಲ್ಪಶಾಸ್ತ್ರಜ್ಞನಾದ ಡಾ. ಫರ್ಗ್ಯುಸನ್ ಎಂಬವನು ಹೇಳುವುದೇನಂದರೆ—

The area over which the style extended includes Mysore and all the Kanarese Country is birthplace in the west-eastwards its southern limit was the Tungabhadra and Krishna rivers; and on North it perhaps extended to a line drawn from the South end of the Chilka lake towards Nagpur and thence Westwards and Southwards to the coast.

The Dharwar District may be regarded as the cradle of the style.

ಸಾರಾಂಶ— ಈ ಚಾಲುಕ್ಯ ಪದ್ಧತಿಯ ಗುಡಿಗಳು ಅವುಗಳ ಉಗಮಸ್ಥಾನಗಳಾದ ಮೈಸೂರು ಪ್ರಾಂತದಲ್ಲಿಯೂ ಮಿಕ್ಕ ಕರ್ನಾಟಕದಲ್ಲಿಯೂ ವಿಶೇಷವಾಗಿ ಕಂಡುಬರುತ್ತವೆ. ಪೂರ್ವದಿಕ್ಕಿಗೆ ತುಂಗಭದ್ರಾ ಮತ್ತು ಕೃಷ್ಣಾ ನದಿಗಳೇ ಅವುಗಳ ದಕ್ಷಿಣ ಗುಡಿಯು. ಚಿಲ್ಕಾ ಸರೋವರದ ದಕ್ಷಿಣ ತುದಿಯಿಂದ ಮೇಲೆ ಉತ್ತರಕ್ಕೆ ನಾಗಪುರದವರೆಗೂ ಅಲ್ಲಿಂದ ಪಶ್ಚಿಮಕ್ಕೂ ದಕ್ಷಿಣಕ್ಕೂ ಸಮುದ್ರ ತೀರದ ವರೆಗೂ ಈ ಗುಡಿಗಳು ತುಂಬಿರುತ್ತವೆ.

ಧಾರವಾಡ ಜಿಲ್ಲೆಯಂತೂ ಇಂಥ ಗುಡಿಗಳ ಹುಟ್ಟುಭೂಮಿಯೇ ಆಗಿದೆ.

ಕರ್ನಾಟಕ ರಾಜರ್ರು ಆಳಿದ ಪ್ರದೇಶವೆಲ್ಲವೂ ಈ ಚಾಲುಕ್ಯ ಪದ್ಧತಿಯ ಗುಡಿಗಳಿಂದ ತುಂಬಿದೆ. ಆದುದರಿಂದ ಕರ್ನಾಟಕವು ಇಂಥ ಗುಡಿಗಳ ಆಗರವೆಂದೂ ಧಾರವಾಡ ಜಿಲ್ಲೆಯು ತವರುಮನೆಯೆಂದೂ ಹೇಳಬಹುದು. ಈ ಪದ್ಧತಿಗೆ ಚಾಲುಕ್ಯ ಪದ್ಧತಿಯೆನ್ನಬೇಕೋ ಬೇಡವೋ ಎಂಬ ವಾದದಲ್ಲಿ ನಾವು ಪ್ರವರ್ತಿಸುವದಿಲ್ಲ. ಚಾಲುಕ್ಯರೂ ರಾಷ್ಟ್ರಕೂಟ

ದವರೂ ಹೊಸ ಚಾಲುಕ್ಯರೂ ಹೊಯ್ಸಳರೂ ಕರ್ನಾಟಕರೇ ಆಗಿರು ವುದರಿಂದ ಅವರು ಕಟ್ಟಿದ ಗುಡಿಗಳ ಪದ್ಧತಿಗೆ ಇತಿಹಾಸ ದೃಷ್ಟಿಯಿಂದ ಕರ್ನಾಟಕ ಪದ್ಧತಿಯೆಂದೇ ಕರೆಯಬಹುದು.

ಈ ನಮ್ಮ ಕಟ್ಟಡಗಳಲ್ಲಿ ಅತ್ಯಂತ ಪ್ರಸಿದ್ಧವಾದ ಕೆಲವು ದೇವಾಲಯಗಳ ವರ್ಣನೆಯನ್ನು ನಾವು ಇದರಡಿ ಕೊಡುತ್ತೇವೆ.

ಜಗತ್ತಿನೊಳಗೆಲ್ಲ ಅತ್ಯಂತ ಅದ್ಭುತ ಕೃತ್ಯವೆಂದು ಹೆಸರುಗೊಂಡು, ಪರದೇಶೀಯ ಪ್ರವಾಸಿಕರನ್ನೂ ಶಿಲ್ಪಜ್ಞರನ್ನೂ ತನ್ನ ಕಡೆಗೆ ಎಡೆಬಿಡದೆ ಎಳೆದುಕೊಂಡು ಬರುವ ದೇವಾಲಯವಾವುದೆಂದರೆ, ನಾಸಿಕದ ಉತ್ತರದಲ್ಲಿ ಮೊಗಲಾಯಿಯೊಳಗೆ 'ಕನ್ನಡ' ವೆಂಬ ತಾಲೂಕಿನಲ್ಲಿ ವೇರೂಳ ವೆಂಬ ಗ್ರಾಮದೊಳಗಿನ ಕೈಲಾಸವೆಂಬ ದೇವಾಲಯವು. ಒಂದು ದೊಡ್ಡ ಗುಡ್ಡವನ್ನೇ ಪೂರ್ಣವಾಗಿ ಕೊರೆದು ವಿಸ್ತೀರ್ಣವಾಗಿರುವ ಈ ಅಖಂಡವಾದ ಸುಂದರ ದೇವಾಲಯವನ್ನು ನಿರ್ಮಿಸಿರುತ್ತಾರೆ. ದೂರದಿಂದ ನೋಡಿದರೆ ಕಟ್ಟಿಸಿದ ಗುಡಿಯೆಂದೇ ಭಾಸವಾಗುತ್ತದೆ. ವೇರೂಳ ಗುಡ್ಡದಲ್ಲಿ ಸಾಲಾಗಿ ಸುಮಾರು ೩೪ ದೊಡ್ಡ ದೊಡ್ಡ ಕೊರೆದ ಗುಡಿಗಳುಂಟು. ಇಷ್ಟು ವಿಸ್ತೀರ್ಣವಾದ ಸಭಾಮಂಟಪಗಳನ್ನು ಕರ್ನಾಟಕದ ಶಿಲ್ಪಿಗರು ಹೇಗೆ ಕಡಿದರೆಂಬುದೇ ಅತ್ಯಂತ ಆಶ್ಚರ್ಯಜನಕವಾದ ಸಂಗತಿಯಾಗಿದೆ. ಕೊರೆದು ತೆಗೆದ ಒಳಗಿನ ಕಲ್ಲುಬಂಡೆಗಳು ಒಂದು ದೊಡ್ಡ ಗುಡ್ಡವೇ ಆಗಬಹುದು. ಅವೆಲ್ಲವನ್ನೂ ಹೇಗೆ ತೆಗೆದರೋ ಅವು ಈಗ ಎಲ್ಲಿವೆಯೋ ಮುಂತಾದ ಸಂಗತಿಗಳು ಊಹಿಸಲವಶಕ್ಯವಾಗಿವೆ. ಈ ೩೪ ಗುಡಿಗಳಲ್ಲಿ ಕೈಲಾಸ ಗುಡಿಯೇ ಅತ್ಯಂತ ಸುಂದರವಾದದ್ದೂ ಭವ್ಯವಾದದ್ದೂ ಆಗಿದೆ. ಇದನ್ನು ನಮ್ಮ ರಾಷ್ಟ್ರಕೂಟ ಅರಸನಾದ ಕೃಷ್ಣ (೭೫೩-೭೭೫) ನೆಂಬವನು ಕೊರೆಸಿದನು. ಬಡೋದೆಯಲ್ಲಿ ಸಿಕ್ಕಿದ ತಾಮ್ರಪಟಗಳಲ್ಲಿ ಈ ಗುಡಿಯ ವರ್ಣನೆಯು ದೊರೆಯುತ್ತದೆ. "ಈ ಗುಡಿಯು 'ಸ್ವಯಂಭೂ' ಗುಡಿಯೇ ಸರಿ, ಇದು ಮನುಷ್ಯಕೃತಿಯಾಗಿರಲಾರದು. ಮಾನವರಿಗೆ ಇಂಥ ಅದ್ಭುತ ಗುಡಿಯನ್ನು ಕಟ್ಟುವ ಶಕ್ತಿಯೆಲ್ಲಿ?" ಎಂದು ಅಲ್ಲಿ ವರ್ಣನೆಯುಂಟು. ವಿಶ್ವಕರ್ಮನೆಂಬ ಶಿಲ್ಪಿಗನು ಇದನ್ನು ಕೊರೆದನಂತೆ. ಈ ಗುಡಿಯನ್ನು ಕೊರೆದ ಮೇಲೆ ಅವ

ನಿಗೆ ಅತ್ಯಂತ ಆನಂದವಾಗಿ, ಇಂಥ ಗುಡಿಯನ್ನು ತಾನು ಹೇಗೆ ರಚಿಸಿದೆ ನೆಂಬುದು ತನಗೆ ತಿಳಿಯದಷ್ಟು ಆಶ್ಚರ್ಯವಾಯಿತಂತೆ !

ಈ ದೇವಾಲಯವನ್ನು ನೋಡಿದ ಕೂಡಲೆ, ಮನುಷ್ಯನ ಮನಸ್ಸು ಮೊದಲು ದಂಗುಬಡೆದು, ಆಶ್ಚರ್ಯ ಆನಂದಾದಿ ಮನೋವೃತ್ತಿಗಳು ಅಲ್ಲಿ ಉಕ್ಕೇರಿ, ನೋಡುವವನು ನೋಡುವದನ್ನು ಬಿಟ್ಟು ಸ್ವಸ್ಥವಾಗಿ ನಿಲ್ಲುತ್ತಾನೆ. ಮತ್ತು ನಿಂತಲ್ಲಿಯೇ ನಿಂತು, ಮೇಲೆ ಕೆಳಗೆ ಹಿಂದು-ಮುಂದೆ ನೋಡಿ "ಅಬಬ, ಇದು ಏನು ಅದ್ಭುತ ಕೃತಿ !" ಎಂದು ಉದ್ಗಾರ ತೆಗೆಯುತ್ತಾನೆ. ಕೆಲವು ಹೊತ್ತಿನ ಮೇಲೆ ಅವನು ಅದನ್ನು ನೋಡಲಿಕ್ಕೆ ಮುಂದಕ್ಕೆ ಒಂದೊಂದೇ ಹೆಜ್ಜೆಯನ್ನಿಕ್ಕುತ್ತಾನೆ. ಆ ದೇವಾಲಯದ ಶೋಭೆಯನ್ನೂ ಭವ್ಯತೆಯನ್ನೂ ವಿಶಾಲತೆಯನ್ನೂ ನೋಡಿ ಅವನ ಮನಸ್ಸಿನಲ್ಲಿ ಅದನ್ನು ಕಟ್ಟಿದ ಕುಶಲ ಶಿಲ್ಪಿಗರ ವಿಷಯ ದಲ್ಲಿ ಪೂಜ್ಯ ಬುದ್ಧಿಯೂ ಆದರವೂ ಪ್ರತಿ ಕ್ಷಣಕ್ಕೆ ಬೆಳೆಯುತ್ತ ಹೋಗು ತ್ತವೆ. ಈ ದೇವಾಲಯದಲ್ಲಿ ಒಳಗಡೆ, ಮೇಲ್ಛದಿಯಲ್ಲಿ ಅಲ್ಲಲ್ಲಿ ಸುಂದ ರವಾದ ಬಣ್ಣವು ಇಂದಿಗೂ ಅಚ್ಚಳಿಯದೆ ಉಳಿದಿರುತ್ತದೆ. ಈ ಗುಡಿಯು ಹುಟ್ಟಿ ಈಗ ಸುಮಾರು ೧೨೦೦ ವರ್ಷಗಳಾದವು. ಅಂದ ಮೇಲೆ ಅಷ್ಟು ಹಿಂದಿನ ಬಣ್ಣವನ್ನು ನೋಡಿ ಕರ್ನಾಟಕದವರಿಗೆ ಆನಂದ ವಾಗಲಿಕ್ಕಿಲ್ಲವೋ ? ಮನೆಯಲ್ಲಿ ಕುಳಿತು ನೀವು ಎಷ್ಟೇ ಅದ್ಭುತ ದೇವಾಲಯವನ್ನು ಹುಟ್ಟಿಸಬೇಕೆಂದು ಮನಸ್ಸಿನಲ್ಲಿ ಮಂಡಿಗೆ ಮಾಡಿ ದರೂ ಇಂಥ ಅದ್ಭುತ ಮಂಡಿಗೆಯನ್ನು ಮಾಡಲಾರಿರಿ. ಒಬ್ಬ ಗಣಿತ ಜ್ಞನು ಈ ಕೈಲಾಸ ಮತ್ತು ಅದರ ಹತ್ತಿರಿರುವ ಗುಡಿಗಳನ್ನು ನೋಡಿ ಲೆಕ್ಕ ಹಾಕಿ, ಈ ಗುಡಿಗಳನ್ನು ಕೊರೆಯಲಿಕ್ಕೆ ೪೮ ಲಕ್ಷ ಜನರು ಒಂದೇ ಸಮನಾಗಿ ೨೧ ವರುಷಗಳ ವರೆಗೆ ಕೆಲಸ ಮಾಡಬೇಕಾದೀತು ಎಂದೆನ್ನು ತ್ತಾನೆ ! ಇರಲಿ.

ಕೃಷ್ಣರಾಜನು ಸ್ವತಃ ತಾನೇ ಅಲ್ಲಿಯ ಲಿಂಗವನ್ನು ಮಾಣಿಕ-ರತ್ನ ಮುಂತಾದ ಅಸಂಖ್ಯಾತವಾದ ಆಭರಣಗಳಿಂದ ಅಲಂಕರಿಸಿದನಂತೆ. ಸಾರಾಂಶ— ಈ ಗುಡಿಯ ವರ್ಣನೆಯನ್ನು ಬಾಯಿಯಿಂದ ಹೇಳು ವುದು ಅಥವಾ ಲೆಕ್ಕಣಿಕೆಯಿಂದ ವರ್ಣಿಸುವದು ಶಕ್ಯವಿಲ್ಲ. ಅದನ್ನು

ಕಣ್ಣಿನಿಂದ ನೋಡಬೇಕು. ಎಷ್ಟು ನೋಡಿದರೂ ಕಣ್ಣುಗಳಿಗೆ ತೃಪ್ತಿಯಾಗುವದಿಲ್ಲ. ಇದೇ ಗುಡಿಯನ್ನು ನೋಡಲಿಕ್ಕೆ ನಾನು ಹೋದಾಗ, ಈ ಗುಡಿಗಳ ಸಾಲಿನಲ್ಲಿರುವ ಒಂದು ಗುಡಿಯಲ್ಲಿ ನಮ್ಮ ಕಣ್ಣಿಗೆ ಕನ್ನಡ ಶಿಲಾಲೇಖವೊಂದು ದೃಷ್ಟಿಗೆ ಬಿದ್ದಿರುವ ಸಂಗತಿಯನ್ನು ಹಿಂದೆ ಉಲ್ಲೇಖಿಸಿದ್ದೇನೆ. ಕನ್ನಡಿಗರೇ, ಈ ಕೈಲಾಸವನ್ನು ಕಣ್ಣಿನಿಂದ ನೋಡಿ ಧನ್ಯರಾಗಬಾರದೇ ?

ಅದೇ ಮೇರೆಗೆ ಅಜಂತೆಯಲ್ಲಿಯ ಗುಡಿಗಳೂ ನೋಡತಕ್ಕವಾಗಿವೆ. ಆದರೆ ನಾವು ಇನ್ನೂ ಇವುಗಳನ್ನು ನೋಡಿಲ್ಲ. ಆದುದರಿಂದ ಆ ವಿಷಯಕ್ಕೆ ಹೆಚ್ಚಿಗೆ ಹೇಳುವದಿಲ್ಲ. ಈ ವಿಷಯವಾಗಿ ಹೇಳಿರುವುದೇನಂದರೆ—

"In the architecture of the various caves is to be read a remarkably extended record of the history of the development of the art, during deipor a of from five to eight centuries."

"ಆ ಕೊರಿದ ಗವಿಗಳಲ್ಲಿಯ ಶಿಲ್ಪದಲ್ಲಿ ಐದನೆಯ ಶತಮಾನದಿಂದ ಎಂಟನೆಯ ಶತಮಾನದ ವರೆಗೆ ಶಿಲ್ಪಕಲೆಯು ಹೇಗೆ ಅಭಿವೃದ್ಧಿಯನ್ನು ಹೊಂದಿತೆಂಬುದು ಚೆನ್ನಾಗಿ ಗೊತ್ತಾಗುತ್ತದೆ."

೨ನೆಯ ಪುಲಿಕೇಶಿಯ ಚಿತ್ರವು ದೊರೆತುದು ಇವೇ ಗುಡಿಗಳಲ್ಲಿಯೇ.

ಇನ್ನು, ಪಶ್ಚಿಮಚಾಲುಕ್ಯರ ಕಾಲಕ್ಕೆ ಕಟ್ಟಲ್ಪಟ್ಟ ಒಂದು ಗುಡಿಯನ್ನು ವರ್ಣಿಸುವೆವು. ಚಾಲುಕ್ಯವಿಕ್ರಮನ ಕಾಲಕ್ಕೆ ಇಟಗಿಯಲ್ಲಿ ಆವನ ಮಹಾಪ್ರಧಾನನೂ ದಂಡನಾಯಕನೂ "ಕನ್ನಡಸಂಧಿವಿಗ್ರಹಿ"ಯೂ ಆದ ಮಹಾದೇವನೆಂಬವನು ಸುಂದರವಾದ ಮಹಾದೇವರ ಗುಡಿಯೊಂದನ್ನು ಕಟ್ಟಿಸಿ ಇಟಗಿಯೊಳಗಿನ ನಾಲ್ಕುನೂರು ಮಹಾಜನರಿಗೆ ಭೂಮಿಗಳನ್ನು ದಾನವಾಗಿ ಕೊಟ್ಟನು. ಈ ಗುಡಿಯಲ್ಲಿಯ ಶಿಲಾಲೇಖದಲ್ಲಿ ಈ ಗುಡಿಗೆ 'ದೇವಾಲಯ ಚಕ್ರವರ್ತಿ' ಎಂಬ ಹೆಸರಿದೆ. ಈ ಗುಡಿಯ ವಿಷಯದಲ್ಲಿ ಫರ್ಗ್ಯುಸನ್ನನು ಹೇಳಿರುವುದೇನಂದರೆ—

"Must be regarded as one of the most highly finished and architecturally perfect of the Chalukyan shrines, that have come down to us. In the opinion of the late Meadows Taylor the carving of the some of the pillars and of the lintels and architraves of the doors is quite beyond description. No chased work in silver and gold possibly be finer."

ಸಾರಾಂಶ—ಸಂಪೂರ್ಣವಾಗಿಯೂ ಶಿಲ್ಪಶಾಸ್ತ್ರದೃಷ್ಟಿಯಿಂದ ಅತ್ಯಂತ ಸುಂದರವಾಗಿಯೂ ಕಟ್ಟಲ್ಪಟ್ಟ ಚಾಲುಕ್ಯಪದ್ಧತಿಯ ಗುಡಿಗಳಲ್ಲಿ ಇದನ್ನು ಗಣನೆ ಮಾಡಬೇಕು. ಕೆಲವು ಕಂಬಗಳ ಛಾವಣಿಗಳ ಮತ್ತು ಬೋದುಗೆಗಳ ಕೆತ್ತಿಗೆಯಂತೂ ಮಿ. ಮಿಡೋ ಟೇಲರ್ ಇವರು ಹೇಳುವಂತೆ ವರ್ಣಿಸಲಳವಲ್ಲದಷ್ಟು ಅಪ್ರತಿಮವಾಗಿದೆ. ಬೆಳ್ಳಿ ಬಂಗಾರ ಗಳಲ್ಲಿ ಕೂಡ ಅಷ್ಟು ಸುಂದರವಾದ ಕೆತ್ತಿಗೆಯನ್ನು ಕೆತ್ತುವುದು ಅಸಾಧ್ಯವು.

ಡಾ. ಫರ್ಗ್ಯುಸನ್ನನಂಥ ಶಿಲ್ಪಶಾಸ್ತ್ರಜ್ಞನು ಈ ಗುಡಿಯು ಶಿಲ್ಪ-ಕಲೆಯು ಪೂರ್ಣತ್ವವನ್ನು ಹೊಂದಿರುತ್ತದೆಂದೂ, ಮಿ. ಮಿಡೋ ಟೇಲರನಂಥವರು ಬೆಳ್ಳಿ ಬಂಗಾರಗಳಲ್ಲಿ ಕೂಡ ಇಷ್ಟು ಕುಸುರಿನ ಕೆಲಸ ವನ್ನು ಕೆತ್ತುವುದು ಅಶಕ್ಯವೆಂದೂ ವರ್ಣಿಸುವಂಥ ಗುಡಿಯನ್ನು ನಮ್ಮ ಕರ್ನಾಟಕಸ್ಥನೊಬ್ಬನು ಕಟ್ಟಿಸಿರಲು ಅದರ ಅಭಿಮಾನವು ನಮಗೆ ಏನೂ ಇರಬೇಡವೆ?

ಪೂರ್ವಚಾಲುಕ್ಯರು ಪ್ರಾರಂಭಿಸಿದ ಶಿಲ್ಪಶಾಸ್ತ್ರವು ಹೊಯ್ಸಳ ಬಲ್ಲಾಳರ ಕಾಲಕ್ಕೆ ಪರಿಣತಿಯನ್ನು ಹೊಂದಿತೆಂದು ಹೇಳಬಹುದು. ಹಳೇಬೀಡು ಅಥವಾ ದ್ವಾರಸಮುದ್ರ ಮತ್ತು ಬೇಲೂರಿನಲ್ಲಿಯ ದೇವಾಲ ಯಗಳೆಂದರೆ ಇಡೀ ಹಿಂದುಸ್ಥಾನದಲ್ಲಿ ಇರುವ ಯಾವತ್ತು ಗುಡಿಗಳಲ್ಲಿ ಅತ್ಯಂತ ಸುಂದರವಾದವುಗಳೆಂದು ಹೇಳಬಹುದು. ಅಷ್ಟೇಕೆ? ಪೃಥ್ವಿ ಯಲ್ಲಿಯ ಅತ್ಯಂತ ಸುಂದರವಾದ ಗುಡಿಗಳಲ್ಲಿಯೇ ಇವು ಎಣಿಸಲ್ಪಟ್ಟಿವೆ.

ಡಾ. ಫರ್ಗ್ಯುಸನ್ನನು ಇವುಗಳ ವಿಷಯವಾಗಿ ಬರೆದಿರುವುದೇನೆಂದರೆ, "There are many buildings in India, which are unsurpassed for delicacy of detail, by any in the world; but the temples at Belur and Halebid surpass even these, for freedom of handling and richness of fancy. The amount of labour which each facet, of this porch ( Belur ) displays is such as I believe never was bestowed on any surface of equal extent in any building in the world."

ಇದರ ಸಾರಾಂಶವೇನೆಂದರೆ— ಹಿಂದುಸ್ಥಾನದಲ್ಲಿ ಪೃಥ್ವಿಯಲ್ಲಿಯ ಮಿಕ್ಕ ಗುಡಿಗಳನ್ನು ಅತ್ಯಂತ ಸೂಕ್ಷ್ಮವಾದ ಕೆಲಸದಲ್ಲಿ ಮೀರಿಸುವಂಥ ಅನೇಕ ಗುಡಿಗಳುಂಟು. ಅವುಗಳಲ್ಲಿಯೂ ಬೇಲೂರ ಮತ್ತು ಹಳೇಬೀಡುಗಳಲ್ಲಿಯ ಗುಡಿಗಳೇ ಶ್ರೇಷ್ಠವಾದವುಗಳು. ಇಷ್ಟು ಕುಸುರಿನ ಕೆಲಸವು ಪೃಥ್ವಿಯಲ್ಲಿಯ ಮಿಕ್ಕ ಯಾವ ಗುಡಿಯಲ್ಲಿಯೂ ಕಂಡು ಬರುವದಿಲ್ಲ. ಹಳೇಬೀಡಿನ ಗುಡಿಯ ವಿಷಯವಾಗಿ ಅವನು ಹೇಳುವುದೇನೆಂದರೆ—

"It may probably be considered, as one of the most marvellous exhibitions of human labour to be found even in the patient east. No. two facets of the temples are the same, every convolution of every seroll is different. No two canopics in the whole building are alike; and every part exhibits joyous exuberence of fancy scorning every mechanical restraint.

ಸಾರಾಂಶ— "ಮಾನವಕೃತಿಗಳಲ್ಲಿ ಇದೊಂದು ಆಶ್ಚರ್ಯಜನಕವಾದ ಕೃತಿಯೆಂದೇ ಹೇಳಬಹುದು. ಗುಡಿಗಳಲ್ಲಿ ಒಂದು ಚಿತ್ರದ ಹೋಲ್ಕೆಯಂತೆ ಮತ್ತೊಂದು ಚಿತ್ರದ ಹೋಲ್ಕೆಯಿರುವುದಿಲ್ಲ; ಪ್ರತಿಯೊಂದು ಸುಳುವಿನ ತಿರುವುಗಳು ಬೇರೆ ಬೇರೆ ಇರುತ್ತವೆ. ಒಂದರಂತೆ ಒಂದು ಗುಮ್ಮಟವಿಲ್ಲ. ಕೈವಾಡದವರು ಪ್ರತಿಯೊಂದು ಕಡೆಗೂ

ಕೈ ಬಿಗಿಹಿಡಿಯದೆ ಕೆಲಸ ಮಾಡಿರುವುದರಿಂದ ಎಲ್ಲಿ ನೋಡಿದರೂ ಸುಂದರವಾದ ಶಿಲ್ಪಕಲೆಯ ಸುಗ್ಗಿಯೇ ದೃಷ್ಟಿಗೋಚರವಾಗುತ್ತದೆ" ಎಂದು ಮುಂತಾಗಿ ಮಾಡಿದ ವರ್ಣನೆಯನ್ನು ಕನ್ನಡಿಗರು ಮರೆಯುವದು ಹೇಗೆ?

ಹಳೇಬೀಡಿನ ಹೊಯ್ಸಳೇಶ್ವರನ ಮತ್ತು ಕೇದಾರೇಶ್ವರನ ಗುಡಿಗಳ ವಿಷಯವಾಗಿ ಅವನು ಮತ್ತೂ ಬರೆದಿರುವುದೇನಂದರೆ—

"The great temple, had it been completed, is one of the buildings on which the advocate of Hindu architeeture would desire to take his stand.... and if carved out with the richness of detail, exhibited in Kedareshwar, would be made up a whole, which would be difficult to rival anywhere. The Kedareshwar temple is "one of the most exquisite specimens of Chalukyan architecture in existence, and one of the most typical."

ಸಾರಾಂಶ:— ಈ ಗುಡಿಯು ಪೂರ್ಣವಾಗಿ ಕಟ್ಟಲ್ಪಟ್ಟಿದ್ದರೆ, ಹಿಂದೂ ಶಿಲ್ಪಕಲೆಯ ಪುರಸ್ಕರ್ತರು ಆಧಾರಭೂತವಾಗಿ ತೆಗೆದುಕೊಳ್ಳುವ ಗುಡಿಗಳಲ್ಲಿ ಇದು ಒಂದಾಗುತ್ತಿತ್ತು. ಮತ್ತು ಕೇದಾರೇಶ್ವರ ಗುಡಿಯಲ್ಲಿಯಂತೆ ಇಲ್ಲಿಯೂ ಅತ್ಯಂತ ಸೂಕ್ಷ್ಮವಾದ ಕೆಲಸವು ಮಾಡಲ್ಪಟ್ಟಿದ್ದರಂತೂ ಈ ಗುಡಿಯಂಥ ಸುಂದರವಾದ ಮತ್ತೊಂದು ಗುಡಿಯನ್ನು ಜಗತ್ತಿನಲ್ಲಿ ಕಾಣುವುದೇ ದುರ್ಲಭವಾಗುತ್ತಿತ್ತು. ಕೇದಾರೇಶ್ವರ ಗುಡಿಯು ಚಾಲುಕ್ಯಪದ್ಧತಿಯ ಗುಡಿಗಳಲ್ಲಿ ಅತ್ಯಂತ ಸುಂದರವಾದುದೆಂದು ಹೇಳಬಹುದು.

ಹೊಯ್ಸಳೇಶ್ವರ ಗುಡಿಯನ್ನು ಕಟ್ಟುವ ಕೆಲಸವು ೮೬ ವರ್ಷಗಳ ವರೆಗೆ ಒಂದೇ ಸಮನಾಗಿ ನಡೆದಿತ್ತಂತೆ! ಆದರೂ ಅದು ಮುಗಿದಿರುವದಿಲ್ಲ. ಈ ಗುಡಿಯು ಮುಗಿದಿದ್ದರೆ, ಇಂಥ ಗುಡಿಯು ಜಗತ್ತಿನಲ್ಲಿ ಮತ್ತೊಂದು ಇರುತ್ತಿರಲಿಲ್ಲವೆಂದು ನಿರ್ವಿವಾದವಾಗಿ ಹೇಳಬಹುದಾ

ಗಿತ್ತು. ಕರ್ನಾಟಕರೆ ! ಈ ನಿಮ್ಮ ಪೂರ್ವಜರ ವೈಭವವನ್ನು ಕೇಳಿ ನಿಮಗೆ ಆನಂದವುಂಟಾಗದೋ? ಇಂಥ ಮಹತ್ಕೃತ್ಯಗಳು ಶಾಂತತೆ ಯಿಲ್ಲದೆ ಜರಗುವವೇನು ? ಆದರೂ ಬ್ರಿಟಿಷ ರಾಜರು ಬರುವ ಮೊದಲು ದೇಶದಲ್ಲಿ ಶಾಂತತೆಯಿರಲಿಲ್ಲ. ಎಲ್ಲಿ ನೋಡಿದರೂ ಅರಾಜಕತೆಯಿ-ತ್ತೆಂದು ನಮಗೆ ಆಗದವರು ಹೇಳುತ್ತಾರೆ. ನಾವು ಬಾಯಿಮುಚ್ಚಿ-ಕೊಂಡು ಕೇಳುತ್ತೇವೆ. ಇಂಥ ದುರ್ಬಲತನಕ್ಕೇನನ್ನಬೇಕು ?

ಈ ಬಗೆಯಾಗಿ ಹಳೆಯ ಚಾಲುಕ್ಯ, ರಾಷ್ಟ್ರಕೂಟ, ಹೊಸಚಾಲುಕ್ಯ, ಹೊಯ್ಸಳ ಮುಂತಾದ ಅರಸರ ಕಾಲದ ಒಂದೊಂದೇ ವರ್ಣನೆಯನ್ನು ಕೊಟ್ಟಿದ್ದಾಯಿತು. ಇನ್ನು ಕೊನೆಯ ವಂಶವಾದ ವಿಜಯನಗರದ ಕಾಲದಲ್ಲಿಯ ಕಟ್ಟಡವೊಂದನ್ನು ಕುರಿತು ತುಸು ಹೇಳಿ ಈ ಬೇರೆ ಪ್ರಕರಣವನ್ನು ಮುಗಿಸುವೆವು.

ಹಂಪೆ ಅಥವಾ ವಿಜಯನಗರವನ್ನು ನೋಡುವುದಕ್ಕೆ ಎರಡು ಕಣ್ಣುಗಳು ಸಾಲವು. ಅಲ್ಲಿ ಸುಮಾರು ೨೦೦೦ ಗುಡಿಗಳಿದ್ದುವಂತೆ! ಆ ಪಟ್ಟಣದೊಳಗಿನ ಅತ್ಯಂತ ಪ್ರಸಿದ್ಧವಾದ ವಿಜಯವಿಠ್ಠಲನ ಗುಡಿಯೊಂಧನ್ನೇ ಇಲ್ಲಿ ವರ್ಣಿಸುವೆವು. ಈ ಗುಡಿಯು ವೇಳೂರದ ಕೈಲಾಸ ಗುಡಿಯನ್ನು ಹೋಲುತ್ತದೆ. ಈ ದೇವಾಲಯುವನ್ನು ಕಟ್ಟುವ ಕೆಲಸವು ಕೃಷ್ಣದೇವರಾಯನ ಕಾಲಕ್ಕೆ ಪ್ರಾರಂಭವಾಯಿತು. ಮುಂದೆ ಅಚ್ಯುತರಾಯ ಮತ್ತು ಸದಾಶಿವರಾಯನ ಕಾಲದಲ್ಲಿಯೂ ಆ ಕಟ್ಟಡದ ಕೆಲಸವು ನಡೆಯುತ್ತಲೇ ಇತ್ತು. ಆದರೆ ೧೫೬೫ನೆಯ ಇಸವಿಯಲ್ಲಿ ತಾಳೀಕೋಟೆಯ ಕಾಳಗವಾದುದರಿಂದ ಗುಡಿಯ ಕಟ್ಟುವಿಕೆಯು ಅಲ್ಲಿಗೆ ನಿಂತುಹೋಯಿತು. ಮದ್ರಾಸ ಆರ್ಕಿಯಾಲಾಜಿಕಲ್ ಸರ್ವೆಯ ಸುಪರಿಂಟೆಂಡೆಂಟರಾದ ಮಿ. ರೇ ಎಂಬವರು ಇದನ್ನು ವರ್ಣಿಸಿರುವುದೇನಂದರೆ—

"It shows the extreme limit in florid magnificence to which the style advanced. The building is wholly in granite and carved with a boldness and expression of power nowhere surpassed in the buildings of its class."

ಸಾರಾಂಶ: — ಈ ತರದ ಕಟ್ಟಿನ ಗುಡಿಗಳಲ್ಲಿ ಹೂಬಳ್ಳಿಗಳ ಸುಳುವುಗಳನ್ನು ಕೆತ್ತುವ ಕೆಲಸವು ಎಷ್ಟು ಪರಿಣತಾವಸ್ಥೆಯನ್ನು ಹೊಂದಿತೆಂಬುದಕ್ಕೆ ಈ ಗುಡಿಯು ಉತ್ಕೃಷ್ಟವಾದ ಉದಾಹರಣೆಯಾಗಿದೆ. ಗುಡಿಯು ಅಚ್ಚ ಕರೆ ಕಲ್ಲಿನದು. ಈ ತರದ ಗುಡಿಗಳಲ್ಲಿ, ಇಷ್ಟು ಗಂಭೀರವಾಗಿ ಎದ್ದು ಕಾಣಿಸುವ ಗುಡಿಯು ಬೇರೆಲ್ಲಿಯೂ ಕಾಣಬರುವದಿಲ್ಲ.

ಈ ಮೇಲೆ ವರ್ಣಿಸಿದ ಗುಡಿಗಳಲ್ಲದೆ ಕರ್ನಾಟಕ ರಾಜರೂ ಮತ್ತು ಧನವಂತರೂ ಕಟ್ಟಿಸಿದ ಎಷ್ಟೋ ಗುಡಿಗಳು ನೋಡತಕ್ಕವಾಗಿವೆ. ಕಾರ್ಲೆ, ಕಾನ್ಹೇರಿ, ಲಕ್ಕುಂಡಿ, ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳನ್ನು ಕರ್ನಾಟಕಸ್ಥರು ನೋಡಿ ಆನಂದಪಡಬೇಕು. ನಾವು ಮೇಲೆ ವರ್ಣಿಸಿದ ಗುಡಿಗಳನ್ನು ನೋಡದಿದ್ದರೆ 'ಕರ್ನಾಟಕ' ರೆಂಬ ನಾಮವನ್ನು ಧರಿಸುವದಕ್ಕೂ ನಾವು ಅರ್ಹರಿರುವದಿಲ್ಲ. ಆ ಪ್ರತಿಯೊಂದು ಗುಡಿಗೂ ಆ ಪದ್ಧತಿಯಿಂದ ಕಟ್ಟಿದ ಗುಡಿಗಳಲ್ಲಿ ಎಲ್ಲಕ್ಕೂ ಶ್ರೇಷ್ಠವೆಂದೇ ತಜ್ಞರು ಮಾನ್ಯತಾಪತ್ರವನ್ನು ಕೊಟ್ಟಿರುವರು. ಮತ್ತು ತಮ್ಮ ಲೆಕ್ಕಣಿಕೆಯಲ್ಲಿದ್ದಷ್ಟು ಸಾಮರ್ಥ್ಯದಿಂದ ಅದನ್ನು ವರ್ಣಿಸಿರುವರು.

ಇನ್ನು ಕೊನೆಗೆ ಶಿಲ್ಪಶಾಸ್ತ್ರಾಚಾರ್ಯರಾದ ಜಕಣಾಚಾರ್ಯರ ಕಥೆಯನ್ನು ಹೇಳಿ ಈ ಬೆಳೆದ ಪ್ರಕರಣವನ್ನು ಮುಗಿಸುವೆವು.

ಜಕಣಾಚಾರ್ಯರು ತುಮಕೂರ ಜಿಲ್ಲೆಯಲ್ಲಿಯ ಕೈದಾಳವೆಂಬ ಗ್ರಾಮದವರು. ಅವರು ಪ್ರಸಿದ್ಧ ಜ್ಯೋತಿಷ್ಕರು. ಅವರಿಗೆ ಮಗನು ಹುಟ್ಟಿದಾಗ ಅವರು ಅವನ ಕುಂಡಲಿಯನ್ನು ಪರೀಕ್ಷಿಸಲು ಆತನು ವ್ಯಭಿಚಾರಕ್ಕೆ ಹುಟ್ಟಿದವನೆಂದು ಅವರಿಗೆ ತಿಳಿಯಬಂದಿತು. ಕೂಡಲೆ, ಅವರು ವೈರಾಗ್ಯವನ್ನು ತಾಳಿ ಮನೆ ಬಿಟ್ಟು ಹೊರಟರು. ಅವರು ಶಿಲ್ಪಕಲಾ ಪ್ರವೀಣರಾಗಿದ್ದುದರಿಂದ ಹೋದ ಹೋದಲ್ಲಿ ಗುಡಿಗಳನ್ನು ಕಟ್ಟುತ್ತ ಕೊನೆಗೆ ಬೇಲೂರಿಗೆ ಬರಲು, ಅಲ್ಲಿಯ ಅರಸನಾದ ವಿಷ್ಣುವರ್ಧನನು ಅವರಿಂದ ಚೆನ್ನಕೇಶವನ ದೇವಾಲಯವೊಂದನ್ನು ಕಟ್ಟಿಸಿದನು. ಆ ಗುಡಿಯಲ್ಲಿ ಚೆನ್ನಕೇಶವನ ಸುಂದರವಾದ ಮೂರ್ತಿಯ ಪ್ರಾಣಪ್ರತಿಷ್ಠಾಪನೆ ಮಾಡಬೇಕೆನ್ನುವಷ್ಟರಲ್ಲಿ, ಹದಿನಾರು ವರ್ಷದ ಹುಡುಗನೊಬ್ಬನು ಆ ಉತ್ಸವಕ್ಕೆ ಬಂದು, ಆ ಚೆನ್ನಕೇಶವ ಮೂರ್ತಿಯು ಅಶುದ್ಧ

ವಾದ ಕಲ್ಲಿನಿಂದ ಮಾಡಲ್ಪಟ್ಟಿರುವದೆಂದೂ, ಅದು ಪ್ರಾಣಪ್ರತಿಷ್ಠಾಪನೆಗೆ ಯೋಗ್ಯವಿಲ್ಲವೆಂದೂ ಪ್ರತಿಪಾದಿಸಿದನು. ಆಗ ಅವರಿಬ್ಬರಲ್ಲಿ ವಾದನಡೆಯಿತು. ಅದು ಅಶುದ್ಧವೆಂದು ತೋರಿಸಿಕೊಟ್ಟರೆ ತಮ್ಮ ಬಲಗೈಯನ್ನೇ ಕಡಿದುಕೊಂಡುಬಿಡುವೆನೆಂದು ಜಕಣಾಚಾರ್ಯರು ಹೇಳಿದರು. ಆಗ ಆ ಹುಡುಗನು ಆ ಮೂರ್ತಿಯ ನಾಭಿಕಮಲದ ಹತ್ತರ ತುಸು ಮಳಲೂ ನೀರೂ ಒಂದು ಕಪ್ಪೆಯೂ ಇರುವುದೆಂದೂ, ಆದಕಾರಣ ಅದು ಅಶುದ್ಧವೆಂದೂ ಆ ಮೂರ್ತಿಯನ್ನು ಒಡೆದು ಪರೀಕ್ಷಿಸಬಹುದೆಂದೂ ಹೇಳಿದನು. ಆ ಹುಡುಗನ ಮಾತನ್ನು ನಂಬಿ, ಆ ಸುಂದರವಾದ ಮೂರ್ತಿಯನ್ನು ಒಡೆಯುವುದು ಹೇಗೆ ? ಆದುದರಿಂದ ಅವನ ಮಾತನ್ನು ಯಾರೂ ಆಲಿಸಲಿಲ್ಲ. ಆ ಮೂರ್ತಿಯಲ್ಲಿ ತಾನು ಹೇಳುವಂತೆ ನೀರು ಮುಂತಾದುವು ಇರುವುವೆಂಬ ಬಗ್ಗೆ ತಮಗೆ ವಿಶ್ವಾಸ ಹುಟ್ಟಿಸಿದರೆ ಮಾತ್ರ, ತಾವು ಅದನ್ನು ಒಡೆಯಬಹುದೆಂದು ಜನರು ಆ ಹುಡುಗನಿಗೆ ಹೇಳಿದರು. ಆಗ ಆ ಬಾಲಕನು ತುಸು ವಿಚಾರ ಮಾಡಿ "ನೀವು ಈ ಮೂರ್ತಿಯ ಶರೀರಕ್ಕೆಲ್ಲ ಗಂಧವನ್ನು ತೊಡೆದು ನೋಡಿರಿ. ಆಂದರೆ ನಾಭಿಕಮಲದ ಹತ್ತಿರ ಒಳಗೆ ನೀರಿರುವದರಿಂದ ಗಂಧವು ಹಸಿಯುಳಿದು ಮಿಕ್ಕ ಕಡೆಗೆ ಒಣಗುವದು. ಅಲ್ಲಿ ನೀರಿರುವದಕ್ಕೆ ಅದೇ ಗುರುತು". ಎಂದು ಉತ್ತರವನ್ನಿತ್ತನು. ನೆರೆದ ಜನರಿಗೆ ಆ ಮಾತು ಸರಿದೋರಿ ಅವನು ಹೇಳಿದಂತೆ ಮಾಡಿದರು. ನಾಭಿಕಮಲದ ಹತ್ತಿರ ತೊಡೆದ ಗಂಧವು ಆರಲಿಲ್ಲ. ಆಗ ಅವನು ಶಿಲಾಶಾಸ್ತ್ರದಲ್ಲಿ ನಿಪುಣನಿರುವನೆಂಬ ಭರವಸೆಯುಂಟಾಗಿ ಅವರು ಆ ಮೂರ್ತಿಯ ನಾಭಿಕಮಲವನ್ನು ಒಡೆದು ನೋಡಲಾಗಿ ಅವನು ಹೇಳಿದಂತೆ, ಒಳಗೆ ಕಪ್ಪೆ, ನೀರು ಮುಂತಾದವು ಕಂಡುಬಂದವು. ಅಲ್ಲಿಯ ಮಹಾಜನರಿಗೆಲ್ಲರಿಗೂ ಅತ್ಯಂತ ವಿಸ್ಮಯವುಂಟಾಗಿ ಆ ಬಾಲಕನ ಕುಲಗೋತ್ರಗಳನ್ನು ಕೇಳಿದರು. ಅವನು, ತಾನು ಅದೇ ಜಕಣಾಚಾರ್ಯರ ಮಗನಾದ ಡಂಕಣಾಚಾರ್ಯನೆಂದೂ ತಮ್ಮ ತಂದೆಯು ಒಂದು ಕಡೆಗೆ ಜ್ಯೋತಿಷ್ಯ ಗಣನೆಯಲ್ಲಿ ತಪ್ಪಿ ನಿಷ್ಕಾರಣವಾಗಿ ತನ್ನ ತಾಯಿಯ ಮೇಲೆ ವ್ಯಭಿಚಾರವನ್ನು ಆರೋಪಿಸಿದರೆಂದೂ ಹೇಳಿದನು. ಆಗ ತಂದೆ ಮಕ್ಕಳಿಬ್ಬರನ್ನೂ ಅರಸನು ಸನ್ಮಾ

ನಿಸಿ, ತಂದೆಮಕ್ಕಳಿಬ್ಬರೂ ಕೂಡಿ ಉಭಯ ಚಾತುರ್ಯದಿಂದ ಹೊಸ ದೊಂದು ಅತ್ಯಂತ ಸುಂದರವಾದ ಗುಡಿಯನ್ನು ನಿರ್ಮಾಣ ಮಾಡಬೇ ಕೆಂದು ವಿಜ್ಞಾಪಿಸಿದನು. ಅದಕ್ಕೆ ಒಪ್ಪಿ, ಅವರಿಬ್ಬರೂ ಬೇಲೂರಿನಲ್ಲಿ ರುವ ಈಗಿನ ಚೆನ್ನಕೇಶವ ದೇವಾಲಯವನ್ನು ನಿರ್ಮಿಸಿದರು. ಬೇಲೂ ರಿನಲ್ಲಿ ಈಗ ಎರಡು ಗುಡಿಗಳುಂಟು. ಮೊದಲನೆಯ ಗುಡಿಯಲ್ಲಿಯ ಚೆನ್ನಕೇಶವ ಮೂರ್ತಿಯು ನಾಭಿಕಮಲದ ಹತ್ತಿರ ಭಿನ್ನವಾಗಿದೆ. ಮತ್ತು ಆ ಗುಡಿಯ ಹತ್ತಿರವೇ ಈಗಿನ ಹೊಸ ಗುಡಿಯು ನಿಂತಿದೆ. ಇದರಿಂದ ಮೇಲಿನ ಕಥೆಗೆ ಪುಷ್ಟಿ ದೊರೆಯುತ್ತದೆ. ಮುಂದೆ ಜಕಣಾ ಚಾರ್ಯರು ತಮ್ಮ ಹುಟ್ಟಿದ ಊರಾಗಿರುವ ಕೈದಾಳದಲ್ಲಿ ಕೇಶವನ ಗುಡಿಯೊಂದನ್ನು ಕಟ್ಟಿಸಿದ ಕೂಡಲೆ ಅವರ ಕೈಯು ಮತ್ತೆ ಚಿಗುರಿತಂತೆ.

ಇರಲಿ, ಕರ್ನಾಟಕ ಪ್ರಾಚೀನ ಶಿಲ್ಪಿಗರಲ್ಲಿ ದಾಸೋಜ, ಮಲ್ಲೋಜ, ನಾನೋಜ ಮುಂತಾದ ಹೆಸರುಗಳು ಬಹಳ ದೊರೆಯುತ್ತವೆ. ಇವರ ಕುಲ ಜಾತಿಗಳನ್ನು ಸಂಶೋಧಕರೇ ಗೊತ್ತುಹಚ್ಚಬೇಕು.

ಕನ್ನಡಿಗರೇ ! ಈ ನಮ್ಮ ಕಟ್ಟಡಗಳನ್ನು ನೋಡಿ ಧನ್ಯರಾಗ- ಬಾರದೇ !

---

## ೧೪ ನೆಯ ಪ್ರಕರಣ

## ಧಾರ್ಮಿಕ ಉನ್ನತಿ

ಕನ್ನಡಿಗರೇ, ಕರ್ನಾಟಕ ಅರಸರ ಕಾಲದಲ್ಲಿ ಧರ್ಮಜಾಗ್ರತಿಯು ಎಷ್ಟರಮಟ್ಟಿಗೆ ಆಗಿತ್ತೆಂಬುದನ್ನು ನಾವು ಸ್ವಲ್ಪದರಲ್ಲಿಯೇ ಹೇಳುವೆವು. ಈ ಪ್ರಕರಣದಲ್ಲಿ ಮೂರೇ ವಿಷಯಗಳನ್ನು ಕುರಿತು ಹೇಳತಕ್ಕವರಿದ್ದೇವೆ. ಅವು ಯಾವುವೆಂದರೆ— (೧) ನಮ್ಮಲ್ಲಿಯ ಧಾರ್ಮಿಕಗುರುಗಳು ರಾಜಕಾರಣವನ್ನು ಧಿಕ್ಕರಿಸಲಿಲ್ಲವೆಂಬುದು. (೨) ದ್ವೈತ, ಅದ್ವೈತ; ವಿಶಿಷ್ಟಾದ್ವೈತ, ವೀರಶೈವ ಮುಂತಾದ ಪ್ರಬಲ ಮತಗಳ ಉತ್ಪತ್ತಿಗೂ ಹೆಚ್ಚಳಕ್ಕೂ ಕರ್ನಾಟಕವೇ ಹುಟ್ಟುಭೂಮಿಯೆಂಬುದು. (೩) ನಮ್ಮ ಅರಸರು ಪರಧರ್ಮಸಹಿಷ್ಣುತೆಯುಳ್ಳವರಾಗಿದ್ದರೆಂಬುದು.

ಸಾಮಾನ್ಯವಾಗಿ ಸಮಾಲೋಚಿಸಿದರೆ ಹಿಂದುಸ್ತಾನದೊಳಗಣ ರಾಜ್ಯಗಳೆಲ್ಲವೂ ಮೊದಲು ಧಾರ್ಮಿಕ ಪುರುಷರಿಂದಲೇ ಉಗಮ ಹೊಂದಿರುವವು ಅಥವಾ ಪೋಷಿಸಲ್ಪಟ್ಟಿರುವವು ಎಂದು ಕಂಡುಬರುವದು. ಶ್ರೀರಾಮಚಂದ್ರನಿಗೆ ವಸಿಷ್ಠ-ವಿಶ್ವಾಮಿತ್ರರೇ ರಾಜಕೀಯ ಗುರುಗಳು; ಅರ್ಜುನನಿಗೆ ಶ್ರೀಕೃಷ್ಣನೂ, ಯುಧಿಷ್ಠಿರನಿಗೆ ಭೀಷ್ಮಾಚಾರ್ಯರೂ ರಾಜನೀತಿಯ ಉದ್ಬೋಧಕರಾಗಿದ್ದರು. ಇಹಲೋಕದ ಸುಖಕ್ಕೆ ಮೆಚ್ಚಿ ಮರುಳಾಗದ ಪಂಡಿತರೇ ರಾಜವೈಭವವನ್ನು ಬೆಳಸಲಿಕ್ಕೆ ರಾಜರಿಗೆ ಸಹಾಯಕರ್ತರೂ ಉಪದೇಶಕರೂ ಆದರು. ಇವರು ತಮ್ಮ ಸುತ್ತಲೂ ಸಂಪತ್ತಿಯ ರಾಶಿಯು ಒಟ್ಟಿದ್ದರೂ, ಮತ್ತು ಆ ರಾಶಿಯನ್ನು ಹುಟ್ಟಿಸುವದಕ್ಕೆ ತಾವೇ ಕಾರಣರಾಗಿದ್ದರೂ, ಅದರೊಳಗೆ ತಮ್ಮ ಮನಸ್ಸನ್ನು ತೊಡಕಿಸಿ ಅಂಧರಾಗಿರಲಿಲ್ಲ. ಆದುದರಿಂದಲೇ ಅವರು ಮಾಡಿದ ಉಪದೇಶವು ಸ್ವಾರ್ಥಬುದ್ಧಿಯಿಂದ ಅಲಿಪ್ತವಾಗಿ ಉಳಿಯುತ್ತಿತ್ತು. ಇದೊಂದು ಹಿಂದೂ ದೇಶದ ವೈಲಕ್ಷಣ್ಯವೆಂದೇ ಹೇಳಬೇಕು.

ಬ್ರಾಹ್ಮಣರಾಗಲಿ ಬೇರೆ ಧಾರ್ಮಿಕ ಗುರುಗಳಾಗಲಿ ರಾಜಕೀಯ ಅವ-
ನತಿಯ ಕಾಲಕ್ಕೆ ಆದಕ್ಕೆ ಸಹಾಯವನ್ನಿತ್ತು ಮತ್ತು "ಶಾಪಾದಪಿ ಶರಾ
ದಪಿ" ಎಂಬಂತೆ ಸಮಯ ಬಂದರೆ ತಾವೇ ಕೈಯಲ್ಲಿ ಖಡ್ಗ ಧರಿಸಲಿಕ್ಕೂ
ಮುಂದಾಗಿರುವಂಥ ಸಂಗತಿಗಳು ನಮ್ಮ ಭಾರತೀಯ ಇತಿಹಾಸದಲ್ಲೇನೂ
ಒಂದೆರಡಿಲ್ಲ. ಪ್ರಸ್ತುತಕ್ಕೆ ನಮಗೆ ಕೇವಲ ಕರ್ನಾಟಕದ ವಿಚಾರವೇ
ಕರ್ತವ್ಯವಿರುವುದರಿಂದ ಆ ದೃಷ್ಟಿಯಿಂದಲೇ ನಾವು ಅದನ್ನು ವಿಮರ್ಶಿ
ಸೋಣ.

ಕರ್ನಾಟಕದೊಳಗೆಲ್ಲಾ ಕದಂಬರು ಬಹಳ ಪ್ರಾಚೀನದ ಅರಸು
ಮನೆತನದವರು. ಈ ವಂಶದ ಮೂಲಪುರುಷನು ಮಯೂರಶರ್ಮ
ನೆಂಬ ಬ್ರಾಹ್ಮಣನು. ಇವನು ವೇದಾಧ್ಯಯನ ಮಾಡಬೇಕೆಂಬ ಅಪೇಕ್ಷೆ
ಯಿಂದ ಕಂಚಿಗೆ ಹೋಗಿರಲು, ಪಲ್ಲವರ ಅಶ್ವಸಂಸ್ಥೆಯಿಂದ ಅವಮಾ
ನಿತನಾದನು, ಮತ್ತು "ಕ್ಷತ್ರಿಯ ರಾಜರು ಬ್ರಾಹ್ಮಣರಿಗೆ ಅವಮಾನ
ಮಾಡುವದಕ್ಕೆ ಅವರೇನು ಹೆಚ್ಚಿನವರು" ಎಂದು ಅವನ ಮನಸ್ಸಿನಲ್ಲಿ
ಉದ್ಭವಿಸಿ ಅವನು ಕ್ಷತ್ರಿಯ ವೃತ್ತಿಯನ್ನು ಕೈಕೊಂಡನು. ಸಾರಾಂಶ,
ಆ ಆಪಮಾನವೇ ಅವನ ಕ್ಷತ್ರಿಯ ವೃತ್ತಿಗೆ ಬೀಜವಾಯಿತು. ಇದರಿಂದ
ಮೊದಲು ವೇದ ಪಠಿಸುತ್ತಿರುವವನು ಒಮ್ಮೊಂದೊಮ್ಮೆ ಶಸ್ತ್ರಧಾರಿಯಾಗಿ
ಅವೇ ಪಲ್ಲವರಾಜರನ್ನು ಸೋಲಿಸಿ 'ಕದಂಬ' ವಂಶವನ್ನು ಸ್ಥಾಪಿಸಿದನು.
ಕದಂಬರ ಸಮಕಾಲೀನರಾದ 'ಗಂಗ' ಅರಸರಿಗೆ ಜೈನರು ಗುರುಗಳಾ-
ಗಿದ್ದರು. ಸಿಂಹನಂದಿಯೆಂಬ ಜೈನ ಗುರುವು ದಡ್ಡಿಗನ ಅಥವಾ ೨ನೆಯ
ಮಾಧವನ ಗುರುವಾಗಿದ್ದನು. ಇವನೇ ಗಂಗರಾಜ ವಂಶದ ಅಸ್ತಿವಾರ
ವನ್ನು ಹಾಕಿದನು. ಅದೇ ಮೇರೆಗೆ ಶಬ್ದಾವತಾರವೆಂಬ ವ್ಯಾಕರಣ
ಗ್ರಂಥವನ್ನು ರಚಿಸಿದ ಪೂಜ್ಯಪಾದನೆಂಬವನು ದುರ್ವಿನೀತನ ಗುರು-
ವಾಗಿದ್ದನು.

ಚಾಲುಕ್ಯರ ಅರಸನಾದ ರಾಜಸಿಂಹನಿಗೆ ಆಶ್ರಯ ಕೊಟ್ಟವನೂ
ವಿಷ್ಣುಗೋಪನೆಂಬ ಬ್ರಾಹ್ಮಣನೇ. ರಾಜಸಿಂಹನ ತಂದೆಯಾದ ಜಯ-
ಸಿಂಹನು ಪಲ್ಲವರೊಡನೆ ಕಾದಿ ಮಡಿದ ಕಾಲಕ್ಕೆ ಅವನ ಹೆಂಡತಿಯು
ಬಸುರಿಯಾಗಿದ್ದಳು. ಅವಳಿಗೆ ಈ ವಿಷ್ಣುಗೋಪನು ಆಶ್ರಯವನ್ನಿತ್ತು

ರಾಜಸಿಂಹನನ್ನು ದೊಡ್ಡವನನ್ನಾಗಿ ಮಾಡಿದನು. ಈ ರಾಜಸಿಂಹನೇ ಚಾಲುಕ್ಯ ರಾಜ್ಯವನ್ನು ಮರಳಿ ಸ್ಥಾಪಿಸಿದನು. ಮತ್ತು ತನ್ನನ್ನು ರಕ್ಷಿಸಿದ ವಿಷ್ಣುಗೋಪನ ಸ್ಮರಣಾರ್ಥವಾಗಿ ವಿಷ್ಣುವರ್ಧನನೆಂದು ಹೆಸರಿಟ್ಟುಕೊಂಡನು.

ರಾಷ್ಟ್ರಕೂಟರ ಪ್ರಖ್ಯಾತ ರಾಜನಾದ ನೃಪತುಂಗನ ಗುರು, ಆದಿಪುರಾಣದ ಕರ್ತನಾದ ಜಿನಸೇನನೆಂಬವನು. ಹೊಯ್ಸಳ ರಾಜ್ಯವು "ಸುದತ್ತ" ನೆಂಬ ಸನ್ಯಾಸಿಯ ಪ್ರೇರಣೆಯಿಂದಲೇ ಸ್ಥಾಪಿತವಾಯಿತು. ಈ ವಂಶಕ್ಕೆ ಸಂಬಂಧಪಟ್ಟ ವಿಷ್ಣುವರ್ಧನ ಅಥವಾ ಬಿಟ್ಟಿದೇವನಿಗೆ ರಾಮಾನುಜಾಚಾರ್ಯರೇ ಗುರುಗಳು. ಬಿಜ್ಜಳನ ಕಾಲದಲ್ಲಿ ಶ್ರೀಬಸವೇಶ್ವರನೆಂಬ ಧಾರ್ಮಿಕ ಪುರುಷನೇ ರಾಜ್ಯಸೂತ್ರಗಳನ್ನು ನಡೆಸುತ್ತಿದ್ದನು. ಶ್ರೀ ವಿದ್ಯಾರಣ್ಯರು ತಮ್ಮ ಜಗದ್ಗುರು ಪೀಠವನ್ನು ಸಹ ತ್ಯಾಗಮಾಡಿ ಹುಕ್ಕಬುಕ್ಕರ ಸಹಾಯಾರ್ಥವಾಗಿ ಧಾವಿಸಿ, ವಿಜಯನಗರದ ಸಾಮ್ರಾಜ್ಯಕ್ಕೆ ತಳಹದಿಯನ್ನು ಹಾಕಿದ ಸಂಗತಿಯೂ ಈ ತತ್ವವನ್ನೇ ಬಲಪಡಿಸುತ್ತದೆ. ಈ ಕಾರಣದಿಂದಲೇ ಅವರಿಗೆ "ಕರ್ನಾಟಕ ಸಿಂಹಾಸನ-ಸ್ಥಾಪನಾಚಾರ್ಯ" ರೆಂದು ಗೌರವದ ಬಿರುದು ಪ್ರಾಪ್ತವಾಯಿತು. ಈ ವಿದ್ಯಾರಣ್ಯರು ಮೂರು ತಲೆಯ ವರೆಗೆ ರಾಜಕೀಯ ಗುರುಗಳಾಗಿ, ಎಡೆತಡೆಯಿಲ್ಲದೆ ರಾಜ್ಯಸೂತ್ರಗಳನ್ನು ನಡೆಯಿಸಿದರೂ ತಾವು ರಾಜವೈಭವದಿಂದ ಅಲಿಪ್ತರೇ ಇದ್ದರು. ಅದೇ ಮೇರೆಗೆ ವಿಜಯನಗರದ "ಕ್ರಿಯಾಶಕ್ತಿ ಪಂಡಿತ" ರೆಂಬವರೂ ಗುರುಗಳಾಗಿದ್ದರು. ಶ್ರೀ ವ್ಯಾಸರಾಯ ಸ್ವಾಮಿಗಳು ಸತತವಾಗಿ ನರಸ, ನರಸಿಂಹ, ಕೃಷ್ಣದೇವರಾಯ, ಅಚ್ಯುತರಾಯ, ಮುಂತಾದ ಆರು ಜನ ಚಕ್ರಾಧೀಶ್ವರರಿಗೆ ರಾಜಗುರುಗಳಾದ ವಿಷಯ ಕರ್ನಾಟಕಕ್ಕೆ ಮಾತ್ರವೇ ಅಲ್ಲ, ಇಡೀ ಜಗತ್ತಿಗೇನೇ ಅಪೂರ್ವವಾದ ಸಂಗತಿ, ಕೃಷ್ಣದೇವರಾಯನಿಗೆ ಶ್ರೀ ವ್ಯಾಸರಾಯ ಸ್ವಾಮಿಗಳು ರಾಜಗುರುಗಳಾಗಿದ್ದರು. ಒಂದು ಕಠಿಣ ಪ್ರಸಂಗದಲ್ಲಿ, ಅವರು ಸ್ವತಃ ವಿಜಯನಗರದ ರಾಜ್ಯವನ್ನು ಕೆಲಕಾಲ ಆಳಿದಂತೆ ತೋರುತ್ತದೆ. ಅವರಿಗೆ "ಕರ್ನಾಟಕ ಸಿಂಹಾಸನಗತ ಪ್ರಭು" ಎಂದು ಬಿರುದಿತ್ತು. ಸಾರಾಂಶ— ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ ನೆನಪಿಡತಕ್ಕ ಮೊದ

ಲನೆಯ ಸಂಗತಿಯೆಂದರೆ, ದೇಶಕ್ಕೆ ಸಂಕಟವೊದಗಿದಾಗ, ಸಾಮಾನ್ಯತಃ ಐಹಿಕ ಸುಖದಿಂದ ಅಲಿಪ್ತರಾಗಿರುವವರೇ— "ಆಚರಿತುಂ ಶಕ್ಯಂ ಸಮ್ಯಗ್ರಾಜ್ಯಾದಿ ಲೌಕಿಕಂ" ಎಂಬಂತೆ ರಾಜ್ಯ ನಡಿಸಬಲ್ಲರು. ವಿದ್ಯಾರಣ್ಯರು ಯೋಗ್ಯ ಜನರಿಗೆ ಕ್ಷಾತ್ರ ತೇಜವನ್ನು ಪ್ರಕಟಗೊಳಿಸುವಂತೆ ಪ್ರೇರಿಸಿ, ಅವರಿಂದ ರಾಜ್ಯಗಳನ್ನು ಸ್ಥಾಪಿಸಿ, ತಾವು ಮಾತ್ರ ವಿಷಯಸುಖದಲ್ಲಿ ತೊಡಕಿಕೊಳ್ಳದೆ ವಿದ್ಯಾವ್ಯಾಸಂಗದಲ್ಲಿ ಜನ್ಮವನ್ನು ಕಳೆಯುತ್ತಿದ್ದರು. ರಾಜಕೀಯ ವಿಷಯಕ್ಕೂ ಧರ್ಮಕ್ಕೂ ಏನೇನೂ ಸಂಬಂಧವಿಲ್ಲವೆಂದು ಕೊಚ್ಚುವವರು ಈ ನಮ್ಮ ಪೂರ್ವಪರಂಪರೆಯನ್ನು ಲಕ್ಷ್ಯದಲ್ಲಿಡಬೇಕು.

ಧಾರ್ಮಿಕ ಇತಿಹಾಸದಲ್ಲಿಯ ಎರಡನೆಯ ಮಹತ್ವದ ಸಂಗತಿಯೇನೆಂದರೆ, ದ್ವೈತ, ವಿಶಿಷ್ಟಾದ್ವೈತ, ವೀರಶೈವ ಮುಂತಾದ ಪ್ರಬಲ ಮತಗಳಿಗೆ ಕರ್ನಾಟಕವೇ ತವರುಮನೆಯಾಗಿತ್ತೆಂಬುದು. ಕ್ರಿಸ್ತಶಕದ ಪ್ರಾರಂಭಕ್ಕೆ ಇಲ್ಲಿ ಬೌದ್ಧ ಧರ್ಮವು ಪ್ರಬಲವಾಗಿತ್ತೆಂದೂ, ಅನಂತರ ಅನೇಕ ನೂರು ವರ್ಷಗಳ ವರೆಗೆ ಜೈನಧರ್ಮವು ಹಬ್ಬಿಕೊಂಡಿತ್ತೆಂದೂ, ಅನಂತರ ಶೈವಧರ್ಮಕ್ಕೆ ಉಕ್ಕು ಬಂದಿತ್ತೆಂದೂ, ಕೊನೆಗೆ ವೈಷ್ಣವ ಧರ್ಮವು ಹೆಚ್ಚಿತೆಂದೂ ಸಾಮಾನ್ಯವಾಗಿ ಹೇಳಬಹುದು. ಆದರೆ ದಕ್ಷಿಣ ಹಿಂದುಸ್ಥಾನದಲ್ಲಿ ಯಾವಾಗಲೂ ಬೌದ್ಧ ಧರ್ಮಕ್ಕಿಂತಲೂ ಜೈನ ಧರ್ಮವೆ ಪ್ರಬಲವಾಗಿತ್ತು. ಕರ್ನಾಟಕದ ಮೊದಲಿನ ಕವಿಶ್ರೇಷ್ಠರೂ ನೃಪಶ್ರೇಷ್ಠರೂ ಜೈನಧರ್ಮದವರೇ ಆಗಿದ್ದರು.

ಜೈನ ಮತವನ್ನು ಸಮಂತಭದ್ರನು ೨ನೆಯ ಶತಮಾನದಲ್ಲಿಯೂ, ಅಕಲಂಕನು ೮ ಅಥವಾ ೯ನೆಯ ಶತಮಾನದಲ್ಲಿಯೂ ಬೋಧಿಸಿದರು. ಜೈನರ ಪ್ರಮುಖ ಗ್ರಂಥಗಳಿಗೆಲ್ಲ ನೃಪತುಂಗನ ಗುರುವಾದ ಜಿನಸೇನಾಚಾರ್ಯರ ಪ್ರಣೇತಾರರು. ತರ್ಕಶಾಸ್ತ್ರದಿ ಪಾರಂಗತನಾದ ಲಕುಲೀಶನು ಶೈವೋಪಾಸನೆಯನ್ನು ಪ್ರಚುರಗೊಳಿಸಿದನು. ಇವನು ಒಂದನೆಯ ಶತಮಾನದಲ್ಲಿದ್ದನೆಂದು ಹೇಳುತ್ತಾರೆ. ಶಂಕರಾಚಾರ್ಯರು ೮ನೆಯ ಶತಕದಲ್ಲಿದ್ದರು. ೧೨ನೆಯ ಶತಮಾನದಲ್ಲಿ ರಾಮಾನುಜಾರ್ಯರ ಉದಯವು. ೧೨ನೆಯ ಶತಮಾನದ ಮಧ್ಯ ಭಾಗದಲ್ಲಿ ವೀರಶೈವ ಮತವು ಬಸವೇಶ್ವರ, ಚೆನ್ನಬಸವರಿಂದ ಉದ್ಧರಿಸಲ್ಪಟ್ಟಿತು.

೧೩ನೆಯ ಶತಮಾನದಲ್ಲಿ ಮಧ್ವಾಚಾರ್ಯರು ದ್ವೈತಮತವನ್ನು ಸ್ಥಾಪಿಸಿದರು. ಇದರ ಮೇಲಿಂದ ಈಗ ಭರತಖಂಡದಲ್ಲೆಲ್ಲ ಪ್ರಾಮುಖ್ಯ ಹೊಂದಿ ಪ್ರಚಲಿತವಿರುವ ಅನೇಕ ಮತ ಪಂಥಗಳು ಮೊದಲು ಕರ್ನಾಟಕದಲ್ಲಿಯೇ ಹುಟ್ಟಿದುವೆಂಬುದನ್ನು ಒಡೆದು ಹೇಳಬೇಕಾದುದಿಲ್ಲ. ಒಂದು ಬಗೆಯಿಂದ ನೋಡಲು, ಇಡೀ ಹಿಂದೂ ದೇಶವೇ ಧರ್ಮಾಚಾರ್ಯರ ವಿಷಯದಲ್ಲಿ ಕರ್ನಾಟಕಕ್ಕೆ ಋಣಿಯಾಗಿರುವುದೆಂದರೂ ಅತಿಶಯೋಕ್ತಿ ದೋಷ ಬಾರದು. ತಮ್ಮ ನಾಡಿನ ಈ ಅಸಾಧಾರಣವಾದ ಧಾರ್ಮಿಕ ಸಂಪತ್ತಿಗಾಗಿ ಕನ್ನಡಿಗರು ಅಭಿಮಾನಪಡುವುದು ಯಥಾರ್ಥವಾಗದೇ ?

ಇನ್ನು, ಅರಸರ ಪರಧರ್ಮಸಹಿಷ್ಣುತೆಯನ್ನು ವರ್ಣಿಸುವ. ಇದು ನಮ್ಮ ರಾಷ್ಟ್ರೀಯ ಸದ್ಗುಣವಾಗಿದೆ. ತಮ್ಮ ಬುದ್ಧಿಸಾಮರ್ಥ್ಯದಿಂದ ಮಾತ್ರವೇ ನಮ್ಮ ಧರ್ಮಗುರುಗಳು ಜನರ ಮೇಲೆ ತಮ್ಮ ವರ್ಚಸ್ಸನ್ನು ಕೂಡಿಸುತ್ತಿದ್ದರು. ಅಲ್ಲದೆ, ಮಿಕ್ಕ ಯಾವ ಉಪಾಯಗಳನ್ನೂ ಅವರು ಅವಲಂಬಿಸಲಿಲ್ಲ. ನಮ್ಮ ಅರಸರೂ, ತಮ್ಮ ಪ್ರಜೆಗಳು ತಮಗೆ ಇಷ್ಟ ತೋರಿದ ಧರ್ಮವನ್ನೇ ಅನುಸರಿಸಬೇಕೆಂದು ಕಟ್ಟು ಮಾಡಿದ್ದರು; ಹೀಗಿರುವದರಿಂದ, ಆಯಾ ಕಾಲದ ರಾಜರು ಜೈನರೇ ಆಗಿರಲಿ, ಬೌದ್ಧರೇ ಆಗಿರಲಿ, ಶೈವರೇ ಆಗಿರಲಿ, ಅಥವಾ ವೈಷ್ಣವರೇ ಆಗಿರಲಿ, ಪ್ರತಿಯೊಂದು ಧರ್ಮದವರನ್ನು ಸಮಾನವಾಗಿಯೇ ಭಾವಿಸುತ್ತಿದ್ದರು. ಈ ಅವರ ಧರ್ಮೌದಾರ್ಯದ ದೆಸೆಯಿಂದ ಇಂತಿಂಥ ರಾಜರು ಇಂತಿಂಥ ಧರ್ಮದವರಾಗಿದ್ದರೆಂಬುದನ್ನು ನಿಷ್ಕರ್ಷಿಸುವದೇ ಕಷ್ಟವಾಗಿರುತ್ತದೆ. ಆದರೂ ಕದಂಬರು ವೈದಿಕ ಧರ್ಮದವರು. ಗಂಗರು ಜೈನರು, ಬಾದಾಮಿಯ ಚಾಲುಕ್ಯರು ವೈಷ್ಣವರೆಂದೂ, ರಾಷ್ಟ್ರಕೂಟರಲ್ಲಿ ಕೆಲವರು ಶೈವರು, ಕೆಲವರು ಜೈನರೆಂದೂ, ಕಲ್ಯಾಣ ಚಾಲುಕ್ಯರಲ್ಲಿ ಕೆಲವರು ಶೈವರು, ಕೆಲವರು ವೈಷ್ಣವರೆಂದೂ ವಿಜಯನಗರದ ಅರಸರಲ್ಲಿಯೂ ಕೆಲವರು ಶೈವರು, ಕೆಲವರು ವೈಷ್ಣವರೆಂದೂ ಸ್ಥೂಲಮಾನದಿಂದ ಹೇಳಬಹುದು. ಅದು ಹೇಗೇ ಇರಲಿ ! ಎಲ್ಲರೂ ಅತ್ಯಂತ ಪರಧರ್ಮಸಹಿಷ್ಣುಗಳಾಗಿದ್ದರೆಂಬುದಂತೂ ನಿರ್ವಿವಾದವೇ ! ಜಿನ, ವಿಷ್ಣು, ಶಿವ ಈ

ಮೂರ್ತಿಗಳು ಒಂದೆಡೆಯಲ್ಲಿ ಸ್ಥಾಪಿತವಾದ ಉದಾಹರಣೆಗಳುಂಟು. ಅದೇ ಮೇರೆಗೆ ಬ್ರಹ್ಮ, ವಿಷ್ಣು, ಮಹೇಶ್ವರರ ಮೂರ್ತಿಗಳನ್ನು ಒಂದೆಡೆಯಲ್ಲಿ ಕಾಣಬಹುದು.

ಈ ಕೆಳಗಿನ ಶ್ಲೋಕವು ನಮ್ಮ ಧಾರ್ಮಿಕ ಸಹಿಷ್ಣುತೆಯನ್ನು ಚೆನ್ನಾಗಿ ಹೊರಪಡಿಸುತ್ತದೆ.

ಯಃ ಶೈವಾಃ ಸಮುಪಾಸತೇ ಶಿವ ಇತಿ ಬ್ರಹ್ಮೇತಿ ವೇದಾಂತಿನೋ ।
ಬೌದ್ಧಾಃ ಬುದ್ಧ ಇತಿ ಪ್ರಮಾಣಪಟವಃ ಕರ್ತೇತಿ ನೈಯಾಯಿಕಾಃ ।
ಅರ್ಹಚ್ಚೇತಿ ಹ ಜೈನಶಾಶನಪರಾಃ ಕರ್ಮೇತಿ ಮೀಮಾಂಸಕಾಃ ।
ಸೋಽಯಂ ವೋ ವಿದಧಾತು ವಾಂಛಿತಫಲಂ ಶ್ರೀಕೇಶವಸ್ಸರ್ವದಾ ॥

ಸಾರಾಂಶ:— "ಶೈವರು ಶಿವನೆಂದೂ, ವೇದಾಂತಿಗಳು ಬ್ರಹ್ಮವೆಂದೂ, ಬೌದ್ಧರು ಬುದ್ಧನೆನದೂ ಪ್ರಮಾಣಪಟುಗಳಾದ ನೈಯಾಯಿಕರು ಕರ್ತನೆಂದೂ ಜೈನರು ಅರ್ಹನೆಂದೂ ಮೀಮಾಂಸಕರು ಕರ್ಮನೆಂದೂ— ಹೀಗೆ ನಾನಾ ಜನರು ನಾನಾ ವಿಧವಾಗಿ ಉಪಾಸನೆಗೈಯ್ಯುವ ಶ್ರೀಕೇಶವನು ನಮಗೆ ಸದಾ ವಾಂಛಿತಫಲವನ್ನೀಯಲಿ."

ಇದು ಬೇಲೂರಲ್ಲಿಯ ಒಂದು ಶಿಲಾಲೇಖದೊಳಗಿನ ಶ್ಲೋಕ.

ಧರ್ಮಸಹಿಷ್ಣುತೆಯ ಮತ್ತೊಂದು ಬೋಧಪ್ರದವಾದ ಉದಾಹರಣೆಯನ್ನು ಕೊಟ್ಟು ಈ ಪ್ರಕರಣವನ್ನು ಮುಗಿಸುವೆವು.

೧೩೬೮ನೆಯ ವರ್ಷದಲ್ಲಿ ವಿಜಯನಗರದೊಳಗೆ ಬುಕ್ಕಮಹಾರಾಯನು ಆಳುತ್ತಿರಲು, ಜೈನರು ವೈಷ್ಣವರಿಂದ ತಮ್ಮ ಧರ್ಮಾಚರಣೆಕ್ಕೆ ವ್ಯತ್ಯಯವುಂಟಾಗುವುದೆಂದು ಅವನಿಗೆ ದೂರು ಹೇಳಿಕೊಂಡರು. ಆಗ ಬುಕ್ಕರಾಯನು ಎರಡೂ ಪಂಥದ ಮುಖಂಡರನ್ನು ಕರೆಯಿಸಿ, "ಪ್ರತಿಯೊಬ್ಬರು ತಮ್ಮ ತಮ್ಮ ಧರ್ಮದಂತೆ ನಡೆಯಬೇಕು. ಒಬ್ಬರು ಮತ್ತೊಬ್ಬರ ಧರ್ಮಾಚರಣೆಗೆ ಅಡ್ಡ ಬರಬಾರದು" ಎಂದು ವಿಧಿಸಿದನು. ಅಲ್ಲದೆ ಅವನು ಸ್ವತಃ ಜೈನರ ಕೈಯಲ್ಲಿ ವೈಷ್ಣವರ ಕೈಯನ್ನು ಕೊಡಿಸಿ ಉಭಯತರಿಗೂ ತಮ್ಮ ಧರ್ಮಕ್ಕನುಸಾರವಾಗಿಯೇ ವರ್ತಿಸಲು ಬೋಧಿ

ಸಿದನು. ಇದಕ್ಕಿಂತ ಪರಧರ್ಮಸಹಿಷ್ಣುತೆಯು ಸಿಕ್ಕುವುದೇ ? ಕ್ಷ
ಸದ್ಗುಣವು ನಮ್ಮ ಅರಸರಿಗೆ ಪೂರ್ಣವಾಗಿ ಗೊತ್ತಿತ್ತು. ಜಾತಿಜಾತಿಗಳಲ್ಲಿ
ಅವರು ಎಂದೂ ದ್ವೇಷವನ್ನು ಬೆಳಿಸಲಿಲ್ಲ. ಬುದ್ಧಿವಂತರು ಕೇವ
ತಮ್ಮ ಬುದ್ಧಿಬಲದಿಂದಲೇ ಜನರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇ
ಕೆಂಬ ತತ್ವವನ್ನು ಅವರು ಅರಿತವರಾಗಿದ್ದರು.

ಇರಲಿ, ಕನ್ನಡಿಗರೇ, ಈಗ ಆ ಧಾರ್ಮಿಕ ಸಂಪತ್ತು ಎಲ್ಲಿ ಉಳಿದಿದೆ?
ನಾವು ನಾಮಮಾತ್ರಕ್ಕೆ ಶೈವರೂ ವೈಷ್ಣವರೂ ಆಗಿದ್ದೇವೆ. ಇದು ಅನು
ಕಂಪನೀಯವಲ್ಲವೋ ?

———

## ೧೫ನೆಯ ಪ್ರಕರಣ

## ವಾಙ್ಮಯ ವೈಭವ

"No scheme of self-governmeat. however benevolently of generously it may be bestowed upon us, will ever make us a self-governing nation. if we have no respect for the language our mother speak."

" ಯಾರು ಎಷ್ಟೇ ಪರೋಪಕಾರ ಬುದ್ಧಿಯಿಂದ ಅಥವಾ ಉದಾರ ಬುದ್ಧಿಯಿಂದ ಯಾವ ತರದ ಸ್ವರಾಜ್ಯವನ್ನೇ ನಮಗೆ ಕೊಡಲಿ. ನಮ್ಮ ತಾಯಂದಿರಾಡುವ ಭಾಷೆಯ ವಿಷಯದಲ್ಲಿ ನಮ್ಮ ಮನದಲ್ಲಿ ಆದರ ಬುದ್ಧಿಯಿಲ್ಲದಿದ್ದರೆ ನಾವು ನಿಜವಾದ ಸ್ವರಾಜ್ಯಭೋಗಿಗಳಾಗಲಾರೆವು. "

—ಮಹಾತ್ಮಾ ಗಾಂಧಿ

ಕ್ರಿ. ಶಕದ ೧೫೦೦ ರಲ್ಲಿ ಹಿಂದುಸ್ಥಾನಕ್ಕೆ ಬಂದ ಪ್ರಖ್ಯಾತ ಪ್ರವಾಸಿಯಾದ ಟಾಲೇಮಿಯು ಬಾದಾಮಿ, ಇಂಡಿ, ಕಲಕೇರಿ, ಪಟ್ಟದಕಲ್ಲು ಇವೇ ಮುಂತಾದ ಕರ್ನಾಟಕದ ಪಟ್ಟಣಗಳ ಹೆಸರುಗಳನ್ನು ಹೇಳಿರುವನು. ಮೇಲ್ಕಂಡ ಹೆಸರುಗಳು ಕನ್ನಡವಾಗಿರುವುದರಿಂದ ಕನ್ನಡ ಭಾಷೆಯು ಆಗಿನ ಕಾಲದಲ್ಲಿ ಒಳ್ಳೇ ಊರ್ಜಿತ ಸ್ಥಿತಿಯಲ್ಲಿ ಇರುವುದಾಗಿ ಸ್ಪಷ್ಟವಾಗುತ್ತದೆ. ೨ನೆಯ ಶತಮಾನದಲ್ಲಿ ಮಾಮುಲನಾರ ಎಂಬ ಕವಿಯಿಂದ ರಚಿತವಾದ 'ಅಹನಾನೂರ' ಎಂಬ ಗ್ರಂಥದಲ್ಲಿ ಮಹಿಷ-ಮಂಡಲವೆಂಬುದಕ್ಕೆ ಪರ್ಯಾಯದಿಂದ 'ಎರಮೈ ನಾಡು' ಎಂಬ ಮೈಸೂರ ದೇಶದ ಹೆಸರು ಉಕ್ತವಾಗಿದೆ. ಅಲ್ಲದೆ, ಕೆಳಗಣ ಇಜಿಪ್ತ ದೇಶದಲ್ಲಿಯ "ಅಕ್ಸಿರಿಂಕಸ್" ಎಂಬ ಸ್ಥಳದಲ್ಲಿ ದೊರೆತ ಕ್ರಿ. ಶ. ೨ನೆಯ ಶತಮಾನದಲ್ಲಿ ರಚಿತವಾದ ಒಂದು ಗ್ರೀಕ್ ನಾಟಕದಲ್ಲಿ ಕೆಲವು ಕನ್ನಡ

ಶಬ್ದಗಳುಳ್ಳ ವಾಕ್ಯವು ದೊರೆಯುತ್ತದೆ. ಆ ವಾಕ್ಯವು ಯಾವುದೆಂದರೆ:—

" ಬೇರೆ ಕೊಂಚ ಮಧುಪಾತ್ರಕ್ಕೆ ಹಾಕಿ, ಪಾನಂ ಬೇರೆತ್ತಿ ಕಟ್ಟಿ ಮಧುಪಂ ಬೇರೆತ್ತುವೆನ್ "

ನೃಪತುಂಗನ ಕಾಲದಿಂದಲೂ ಕನ್ನಡದೊಳಗೆ ಹಳಗನ್ನಡ-ಹೊಸಗನ್ನಡವೆಂಬ ಭೇದವು ಇರುವದಂತೂ ಸರಿಯಷ್ಟೇ ! ಈ ಕಾಲಕ್ಕೆ ಕನ್ನಡ ಭಾಷೆಯು ಯಾವುದೋ ಒಂದು ಹಳೆಯ ಅವಸ್ಥೆಯಿಂದ ಹೊಸದಾದ ಅವಸ್ಥೆಗೆ ಹೆಜ್ಜೆಯಿಕ್ಕಿತೆಂದು ಊಹಿಸಲಿಕ್ಕೆ ಅವಕಾಶವಾಗಿದೆ. ಹಳೆಗನ್ನಡವು ಹೋಗಿ ಹೊಸಗನ್ನಡವು ಹುಟ್ಟುವದಕ್ಕೆ ಮುಂಚೆ ೭-೮ ಶತಮಾನಗಳು ಕಳೆದು ಹೋಗಿರಬೇಕು. ಸಾರಾಂಶ :— ಕನ್ನಡ ಭಾಷೆಯು ೨ನೆಯ ಶತಮಾನದಲ್ಲಿ ಒಳ್ಳೇ ಘನತೆಗೇರಿತ್ತೆಂದು ಹೇಳಬಹುದು. ಮುಂದೆ ೩ ರಿಂದ ೫ ನೆಯ ಶತಮಾನದಲ್ಲಿ ಗಂಗ ಅರಸರ ಆಳಿಕೆಯಲ್ಲಿಯೂ, ಕದಂಕ ಅರಸರ ಕಾಲದಲ್ಲಿಯೂ ಬಾಳಿದ ಸುಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ, ದುರ್ವಿನೀತ ಮುಂತಾದ ಮಹಾಮಹಾ ಪ್ರಾಸಾದಿಕ ಕವಿಗಳ ಗ್ರಂಥಗಳಿಂದಲೂ ಇವೇ ವ್ಯಕ್ತವಾಗುತ್ತದೆ.

ಚಾಲುಕ್ಯರ ಆಳಿಕೆಯಲ್ಲಿಯೂ ಕನ್ನಡ ನುಡಿಯ ಅಭಿವೃದ್ಧಿಯ ಲಕ್ಷಣಗಳು ದೃಗ್ಗೋಚರವಾಗುತ್ತವೆ. ಇವರ ಕಾಲಕ್ಕೆ ಶ್ರೀವರ್ಧದೇವ, ವಿಮಲಉದಯ. ನಾಗಾರ್ಜುನ ಮುಂತಾದ ಕವೀಶ್ವರರು ಜನಿಸಿದರು. ಹಾನಗಲ್ಲ ತಾಲೂಕ ಆಡೂರಿನಲ್ಲಿಯ ಶಿಲಾಲಿಪಿಯ ಕನ್ನಡ ಅಕ್ಷರಗಳು ಅತಿಶಯ ಪ್ರಾಚೀನವಾದುವು. ಅದು ಸುಮಾರು ೫೬೬ ನೆಯ ಇಸವಿಯ ಶಿಲಾಲಿಪಿಯು.

ರಾಷ್ಟ್ರಕೂಟರ ಕಾಲಕ್ಕಿಂತಲೂ ಕನ್ನಡ ನುಡಿಗೆ ಮತ್ತಿಷ್ಟು ಹೆಚ್ಚಿನ ಪ್ರಾಶಸ್ತ್ಯವು ಪ್ರಾಪ್ತವಾಯಿತು. ರಾಷ್ಟ್ರಕೂಟದ ಅರಸನಾದ ನೃಪತುಂಗನು ಸ್ವತಃ ವಾಙ್ಮಯಪ್ರಭುವಾಗಿದ್ದನಲ್ಲದೆ, ಕನ್ನಡಕ್ಕೆ ಒಳ್ಳೇ ಆಶ್ರಯನಾಗಿದ್ದನು. ಇವನು ಬರೆದ 'ಕವಿರಾಜಮಾರ್ಗ' ಎಂಬ ಅಲಂಕಾರ ಗ್ರಂಥವು ಈಗ ಉಪಲಬ್ಧವಿರುವ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು (೯ನೆಯ ಶಕ). ಈ ನೃಪತುಂಗನು ಸಂಸ್ಕೃತದಲ್ಲಿಯೂ



೧೮೫೭ನೆಯ ಸ್ವಾತಂತ್ರ್ಯವೀರಳಾದ
ಕಿತ್ತೂರ ಚೆನ್ನಮ್ಮ

'ಪ್ರಶ್ನೋತ್ತರಮಾಲಾ' ಎಂಬ ಗ್ರಂಥವನ್ನು ರಚಿಸಿದನು. ಈ ಗ್ರಂಥವು ಟಿಬೇಟ ಭಾಷೆಯಲ್ಲಿ ಪರಿವರ್ತಿತವಾಗಿರುವ ಸಂಗತಿಯನ್ನು 'ಸಿಫಸ' ಎಂಬವರು ಗೊತ್ತು ಹಿಡಿದಿದ್ದಾರೆ. ಕನ್ನಡನಾಡು, ಕನ್ನಡಿಗರು, ಕನ್ನಡ ಭಾಷೆ ;ಇವುಗಳ ಬಗ್ಗೆ ನೃಪತುಂಗನಲ್ಲಿರುವ ಆದರಾತಿಶಯವು ಅವನ ಗ್ರಂಥದಿಂದ ಚನ್ನಾಗಿ ತೋರ್ಪಡುತ್ತದೆ. ಇವನ ಕಾಲದಲ್ಲಿದ್ದ ಬಂಕೇಶನೆಂಬ ಸೇನಾಪತಿಯ ಹೆಂಡತಿ 'ವಿಜಯಾ' ಎಂಬವಳು ಒಂದು ಸಂಸ್ಕೃತ ಕಾವ್ಯವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಅದರೊಳಗಿನ ಒಂದು ಶ್ಲೋಕವನ್ನು ಇಲ್ಲಿ ಉದ್ಧರಿಸುವೆವು.

ಸರಸ್ವತೀವ ಕರ್ಣಾಟೀ ವಿಜಯಾಂಕಾ ಜಯತ್ಯಸೌ ।
ಯಾತ ವೈದರ್ಭಗಿರಾಂ ವಾಸಃ ಕಾಲಿದಾಸಾದನಂತರಮ್ ॥

"ಕಾಳಿದಾಸನ ತರುವಾಯ ವೈದರ್ಭಶೈಲಿಗೆ ಆಶ್ರಯ ಕೊಟ್ಟ ವಿಜಯಾ ಎಂಬ ಬಿರುದುಳ್ಳ ಕರ್ನಾಟಿಯು, ಪ್ರತಿ ಸರಸ್ವತಿಯಂತೆ ಮೆರೆಯುತ್ತಿರುವಳು." ಹಲಾಯುಧನು ರಚಿಸಿದ ಕವಿರಹಸ್ಯ ಎಂಬ ಗ್ರಂಥಕ್ಕೆ ರಾಷ್ಟ್ರಕೂಟರ ಅರಸನಾದ ಕೃಷ್ಣನೇ ನಾಯಕನಾಗಿದ್ದಾನೆ. ಪ್ರಸಿದ್ಧ ಜೈನ ಕವಿಗಳಾದ ಜಿನಸೇನ, ಅಕಲಂಕ, ಗುಣನಂದಿ, ಪೊನ್ನ ಮತ್ತು ಗುಣಭದ್ರ, ಇವರೆಲ್ಲರೂ ರಾಷ್ಟ್ರಕೂಟರ ಆಸ್ಥಾನಪಂಡಿತರಾಗಿದ್ದರು.

ಹೊಸ ಚಾಲುಕ್ಯರ ಆಡಳಿತದಲ್ಲಿ ಕನ್ನಡ ಭಾಷೆಯು ಮತ್ತಿಷ್ಟು ಹೆಚ್ಚು ಪ್ರಬಲ ಸ್ಥಿತಿಗೆ ಬಂದಿತು. ಇವರ ಕಾಲಕ್ಕೆ ಕರ್ನಾಟಕದ ರಾಜ್ಯ ವಿಸ್ತಾರವು ಪರಮಾವಧಿಯನ್ನು ಹೊಂದಿದಂತೆ ಭಾಷೆಯೂ ಪರಿಣತಾವಸ್ಥೆಯನ್ನು ಹೊಂದಿತು. ಕರ್ನಾಟಕದ ಮಹಾಮಹಾ ಕವಿಗಳೆಲ್ಲರೂ ಸಾಧಾರಣವಾಗಿ ಇವರ ಆಳಿಕೆಯಲ್ಲಿಯೇ ಹೆಸರಿಗೆ ಬಂದರು. ರಾಷ್ಟ್ರಕೂಟರ ಅಂತ್ಯಕಾಲಕ್ಕೆ ಎಂದರೆ ಚಾಲುಕ್ಯರ ಆಳಿಕೆಯ ಆರಂಭಕ್ಕೆ ಉತ್ತರ ಹಿಂದುಸ್ಥಾನದಲ್ಲಿ ಬಲಾಢ್ಯರಾದ ಅರಸರಿರಲಿಲ್ಲ. ಹೀಗಿರುವುದರಿಂದ ಪ್ರಖ್ಯಾತ ಕವಿಯಾದ ಬಿಲ್ಹಣನು ಆಶ್ರಯಕ್ಕಾಗಿ ಅಲೆಯುತ್ತ ಆಲೆಯುತ್ತ, ಹಿಂದುಸ್ಥಾನವನ್ನೆಲ್ಲ ಸುತ್ತಿ ಕೊನೆಗೆ ದಕ್ಷಿಣದಲ್ಲಿ ಆಳುತ್ತಿರುವ ಚಾಲುಕ್ಯ ವಿಕ್ರಮನ ಆಸ್ಥಾನಕ್ಕೆ ಬಂದು ಅಲ್ಲಿ ನಿಂತನು. ಅವನಿಗೆ

'ವಿದ್ಯಾಪತಿ' ಎಂದು ಬಿರುದುಂಟು. ಧರ್ಮಶಾಸ್ತ್ರಕಾರನಾದ ವಿಜ್ಞಾನೇಶ್ವರನೂ ಈತನ ಹತ್ತಿರವೇ ಇದ್ದನು. ಅವನು 'ಮಿತಾಕ್ಷರಾ' ಎಂಬ ಪ್ರಸಿದ್ಧ ಧರ್ಮಶಾಸ್ತ್ರ ಗ್ರಂಥವನ್ನು ಬರೆದಿರುವನು. ಅದು ಮುಂಬಯಿ ಇಲಾಖೆಯ ಕೋರ್ಟುಗಳಲ್ಲಿಯೂ ಹಿಂದುಸ್ಥಾನದ ಮಿಕ್ಕ ಅನೇಕ ಭಾಗಗಳಲ್ಲಿಯೂ, ಹಿಂದೂ ಧರ್ಮಕ್ಕೆ ಪ್ರಮಾಣಗ್ರಂಥವಾಗಿದೆ. ಕನ್ನಡ ಭಾಷೆಯ ಕವಿಗಳಲ್ಲಿ, ಆದಿಪಂಪ, ರನ್ನ, ಚಂದ್ರರಾಜ, ದುರ್ಗಸಿಂಹ, ಕೀರ್ತಿವರ್ಮ, ನಾಗವರ್ಮ ಇವರೇ ಮುಖಂಡರು. ಆಗಿನ ಕಾಲಕ್ಕೆ ಅರಸರು ಕನ್ನಡ ಕವಿಗಳನ್ನು ನಾನಾಬಗೆಯಿಂದ ಬಹುಮಾನಿಸುತ್ತಿದ್ದರು. ಕನ್ನಡ ಕವಿರತ್ನತ್ರಯದಲ್ಲಿ (ಆದಿಪಂಪ, ಪೊನ್ನ, ರನ್ನ) ಒಬ್ಬನಾದ ರನ್ನನಿಗೆ ತೈಲಪನು ಛತ್ರಚಾಮರಾದಿ ರಾಜಚಿಹ್ನೆಗಳನ್ನು ಸಲ್ಲಿಸಿ ಮನ್ನಣೆ ಮಾಡಿದನು. ಚಾಲುಕ್ಯ ವಿಕ್ರಮನ ಮಗನಾದ ೩ನೆಯ ಸೋಮೇಶ್ವರನು 'ಮಾನಸೋಲ್ಲಾಸ' ವೆಂಬ ಸಂಸ್ಕೃತ ಗ್ರಂಥವನ್ನು ರಚಿಸಿದನು, ಇದರಿಂದ ಅನೇಕ ರಾಜಕೀಯ ಸಂಗತಿಗಳು ತಿಳಿಯುವಂತಿವೆ. ಇದರಲ್ಲಿ, ರಾಜ್ಯ ಸಂಪಾದಿಸುವ ಬಗೆ, ರಾಜ್ಯ ಕಾಯ್ದುಕೊಳ್ಳುವ ಬಗೆ, ರಾಜವಿಲಾಸ ವರ್ಣನೆ ಮುಂತಾದ ವಿಷಯಗಳಿವೆ. ಅರಸರು, ರಾಜನೀತಿ, ಜ್ಯೋತಿಷ, ಫಲಜ್ಯೋತಿಷ, ಭಾಷಾಶಾಸ್ತ್ರ, ಅಲಂಕಾರಶಾಸ್ತ್ರ, ಕಾವ್ಯ, ಸಂಗೀತ, ಚಿತ್ರಕಲೆ, ಶಿಲ್ಪಕಲೆ, ಅಶ್ವವಿದ್ಯೆ ಮುಂತಾದವುಗಳಲ್ಲಿ ನಿಷ್ಣಾತರಾಗಿರಬೇಕೆಂದು ಇದರಲ್ಲಿ ಹೇಳಿದೆ. ಈ ಅರಸನು ವಿದ್ಯಾವಂತನಾದುದರಿಂದ ಅವನಿಗೆ "ಸರ್ವಜ್ಞಭೂತ" ನೆಂದು ಹೆಸರಿತ್ತು.

ಹೊಯ್ಸಳ ಅರಸರ ರಾಜ್ಯಕಾರಭಾರದಲ್ಲಿಯೂ ಅಭಿನವಪಂಪ, ಕಂತಿ, ರಾಜಾದಿತ್ಯ ಸುಮನೋಬಾಣ, ಮಲ್ಲಿಕಾರ್ಜುನ, ರುದ್ರಭಟ್ಟ, ಜನ್ನ, ಕೇಶಿರಾಜ ಇತ್ಯಾದಿ ರತ್ನಗಳು ಕರ್ನಾಟಕಕ್ಕೆ ಲಭಿಸಿದುವು. ವಿಜಯನಗರದ ಕಾಲಕ್ಕೆ ವೇದಾಂತ, ನ್ಯಾಯ, ಮೀಮಾಂಸಾ, ಆಯುರ್ವೇದ, ನೀತಿ, ಯುದ್ಧಕಲೆ, ರಸಾಯನ ಇಂಥ ಅನೇಕ ಬಗೆಯ ಶಾಸ್ತ್ರಗಳಿಗೂ ವೇದಗಳಿಗೂ ವ್ಯಾಖ್ಯಾನ ಬರೆಯುವಂಥ ವಿದ್ಯಾರಣ್ಯರು ಜನ್ಮವೆತ್ತಿದರು. ಈ ಕಾಲಕ್ಕೆ ಬಾಳಿದ ಕನ್ನಡ ಕವಿಗಳು— ಮಧುರ, ಮಂಗರಸ, ಗದುಗಿನ ಕುಮಾರವ್ಯಾಸ, ನಿತ್ಯಾತ್ಮಶುಕ, ಲಕ್ಕಣ್ಣ ದಂಡೇಶ

ಇವರಲ್ಲದೆ ಪುರಂದರದಾಸ ವ್ಯಾಸರಾಯರಂಥ ಧಾರ್ಮಿಕ ಸತ್ಪುರುಷರು ಉದಯಿಸಿದರು. ಕೃಷ್ಣರಾಯನ ಆಸ್ಥಾನವಂತೂ ಅಷ್ಟದಿಗ್ಗಜಗಳಿಂದ ಶೋಭಿಸುತ್ತಿತ್ತು. ಕರ್ನಾಟಕ ಕವಿಗಳನೇಕರು ಸಂಸ್ಕೃತ ಮತ್ತು ಕನ್ನಡ ಎರಡು ಭಾಷೆಗಳಲ್ಲಿಯೂ ಪಂಡಿತರಾದುದರಿಂದ ಅವರಿಗೆ ಉಭಯ ಚಕ್ರವರ್ತಿ ಎಂಬ ಬಿರುದಿತ್ತು.

ಅನೇಕ ಅರಸರು ಸ್ವತಃ ಕನ್ನಡ ಕವಿಗಳಾಗಿದ್ದರು. ೬ನೆಯ ಶತಮಾನದಲ್ಲಿ ಗಂಗ ಅರಸನಾದ ೨ನೆಯ ಮಾಧವನು "ದತ್ತಕಸೂತ್ರ ವೃತ್ತಿ" ಎಂಬ ಗ್ರಂಥವನ್ನು ಬರೆದನು. ೬ನೆಯ ಶತಮಾನದಲ್ಲಿ ದುರ್ವಿನೀತನೆಂಬ ಗಂಗ ಅರಸನು ಶಬ್ದಾವತಾರವನ್ನೂ ಪೈಶಾಚ ಭಾಷೆಯಲ್ಲಿದ್ದ ಬೃಹತ್ಕಥೆಗೆ ಸಂಸ್ಕೃತ ಪರಿವರ್ತನವನ್ನೂ ಭಾರವಿಯ ಕಿರಾತಾರ್ಜುನೀಯ ೧೫ನೆಯ ಸರ್ಗಕ್ಕೆ ಕನ್ನಡ ಟೀಕೆಯನ್ನೂ ಬರೆದನು. ಅಲ್ಲದೆ ಕನ್ನಡದಲ್ಲಿ ಒಂದು ಗದ್ಯಗ್ರಂಥವನ್ನು ಬರೆದಂತೆ ತಿಳಿಯುತ್ತದೆ. ಆದರೆ ಇದು ಉಪಲಬ್ಧವಿಲ್ಲ. ೮ನೆಯ ಶತಮಾನದಲ್ಲಿ ಗಂಗರಸನಾದ ಶ್ರೀಪುರುಷನೆಂಬವನು ಗಜಶಾಸ್ತ್ರವೆಂಬ ಗ್ರಂಥವನ್ನು ರಚಿಸಿದ್ದನಂತೆ! ಅವನ ಮಗನಾದ ಶಿವಮಾರನೆಂಬವನು "ಗಜಾಷ್ಟಕ" ವೆಂಬ ಗ್ರಂಥವನ್ನು ರಚಿಸಿದನು. ಇವನು ನಾಟಕಾದಿಗಳಲ್ಲಿ ಪ್ರಮಾಣಪ್ರವೀಣನೆಂದೆನಿಸಿಕೊಂಡಿರುವನು. ಅಲ್ಲದೆ ಆನೆ ಕುದುರೆಗಳನ್ನು ಶಿಕ್ಷಿಸುವುದರಲ್ಲಿಯೂ ಇವನ ಗ್ರಂಥವನ್ನೇ ಪ್ರಮಾಣವಾಗಿ ಹಿಡಿಯುತ್ತಿದ್ದರಂತೆ!

ನಮ್ಮ ಕರ್ನಾಟಕ ಹೆಂಗಸರು ವಾಙ್ಮಯಕ್ಕೆ ಮಾಡಿದ ಸೇವೆಯೂ ಮಿಕ್ಕ ಯಾರಿಗಿಂತಲೂ ಕಡಿಮೆಯಾಗಿರುವುದಿಲ್ಲ. ಕಂತಿ, ಹೊನ್ನಮ್ಮ ಮುಂತಾದ ಕವಯಿತ್ರಿಯರು ಕನ್ನಡಿಗರಿಗೆ ಗೊತ್ತೇ ಇರುವದರಿಂದ ಅವರ ಹೆಸರನ್ನು ಇಲ್ಲಿ ಪುನಃ ಹೇಳುವದಿಲ್ಲ. ಆದರೆ ಕರ್ನಾಟಕ ರಾಜಪ್ರಿಯಾ, ಕರ್ಣಾಟೀ, ನಾಗಮ್ಮ, ವಿಜ್ಜಕಾ ಮುಂತಾದ ಹೆಂಗಸರು ಸಂಸ್ಕೃತ ಕವಯಿತ್ರಿಯರಾಗಿದ್ದರು. ಮೊನ್ನೆ ಮೊನ್ನೆ ಜಗತ್ತಿಗೆ ಗೊತ್ತಾದ ವಿಜಯನಗರದ ಬುಕ್ಕ ಮಹಾರಾಯನ ಹಿರೀ ಸೊಸೆಯಾದ ಗಂಗಾದೇವಿಯೆಂಬವಳು ಅತಿಶಯ ಪ್ರತಿಭಾಸಂಪನ್ನಳಾದ ಸಂಸ್ಕೃತ ಕವಯಿತ್ರಿಯಾಗಿದ್ದಳೆಂದು ಹೇಳಿದರೆ ಯಾವ ಕನ್ನಡಿಗನಿಗೆ ಆನಂದವಾಗ

ಲಿಕ್ಕಿಲ್ಲ ! ಇವಳು ತನ್ನ ಗಂಡನಾದ ಕಂಪಣನು ಮಧುರೆಯ ಮೇಲೆ ದಂಡೆತ್ತಿ ಹೋದ ಸಂಗತಿಯನ್ನು "ಮಧುರಾವಿಜಯಂ ಅಥವಾ ವೀರ ಕಂಪರಾಯ ಚರಿತಂ" ಎಂಬ ಪ್ರೌಢ ಶೈಲಿಯಿಂದ ಯುಕ್ತವಾದ ಕಾವ್ಯದಲ್ಲಿ ವರ್ಣಿಸಿರುವಳು.

ಸಾರಾಂಶ:— ಸಂಸ್ಕೃತ, ಕನ್ನಡ ವಾಙ್ಮಯಕ್ಕೆ ನಮ್ಮ ಕರ್ನಾಟಸ್ಥರು ಮಾಡಿದ ಸೇವೆಯು ಅಷ್ಟಿಷ್ಟೆಂದು ಹೇಳಲಳವಲ್ಲ.

ಕರ್ನಾಟಕದಲ್ಲಿ ಅನೇಕ ಕಡೆ ವಿದ್ಯಾಲಯಗಳಿದ್ದವು. ವಿಜಯನಗರ, ಬಳ್ಳಿಗಾವಿ, ಐಹೊಳೆ ಮುಂತಾದ ಪಟ್ಟಣಗಳಲ್ಲಿ ವಿಶ್ವವಿದ್ಯಾಲಯಗಳಿದ್ದವು. ಆದರೆ ಅವುಗಳ ವರ್ಣನೆಯನ್ನು ಕೊಡಲು ಇಲ್ಲಿ ಅವಕಾಶವಿಲ್ಲ. ಒಂದೇ ವಿದ್ಯಾಲಯವನ್ನು ಕುರಿತು ತುಸು ಹೇಳುವೆವು.

ಇಂಡಿ ತಾಲೂಕಿಗೆ ಸೇರಿದ ಸಾಲೋಟಗಿ ಎಂಬಲ್ಲಿ ನೃಪತುಂಗನ ಕಾಲಕ್ಕೆ ಚಕ್ರಾಯುಧನೆಂಬವನು ಒಂದು ವಿದ್ಯಾಲಯವನ್ನು ಸ್ಥಾಪಿಸಿದ್ದನು. ಅವನು ವಿದ್ಯಾರ್ಥಿಗಳಿಗೆ ೫೦೦ 'ನಿವರ್ತನ' ಭೂಮಿಯನ್ನು ದಾನವಾಗಿ ಕೊಟ್ಟನು !, ಅಲ್ಲದೆ, ಅವರು ವಾಸಿಸಲಿಕ್ಕೆ ೨೭ ಮನೆಗಳನ್ನು ಕೊಟ್ಟಿದ್ದನು. ಮತ್ತು ಊರಲ್ಲಿ ಮದುವೆ ಮುಂಜಿವೆಗಳಾದರೆ ಆ ಶಾಲೆಗೆ ಜನರು ಇಂತಿಷ್ಟು ಹಣವನ್ನು ಕೊಡಬೇಕೆಂದು ಕಟ್ಟು ಮಾಡಿದ್ದನು. ( ಶಾಲಾ ವಿದ್ಯಾರ್ಥಿ ಸಂಘಾಯ ಸುದ್ರವ್ಯಾಣಿ ದ್ವಿಜಾತಿಭಿಃ | ಪಂಚಪುಷ್ಪಾಣಿ ದೇಯಾನಿ ವಿವಾಹೇ ಸತಿಸಜ್ಜನೈಃ ‖ ) ಅಧ್ಯಾಪಕರಿಗೆ ಇರಲಿಕ್ಕೆ ಮನೆಯೂ ಅವರ ಉಪಜೀವನಕ್ಕಾಗಿ ಹೊಲವೂ ಕೊಡಟ್ಟಪ್ಟಿದ್ದುವು. ಇದೇ ಬಗೆಯಾಗಿ ಅನೇಕ ವಿದ್ಯಾಲಯಗಳ ವರ್ಣನೆಗಳನ್ನು ನಾವು ಕಲೆ ಹಾಕಬಹುದು.

ಈ ಮೇರೆಗೆ ನಾವು ವಾಙ್ಮಯ ವೈಭವವನ್ನು ಸಂಕ್ಷೇಪವಾಗಿ ವರ್ಣಿಸಿರುವೆವು, ಮೊದಲು ಮೊದಲು ಸಂಸ್ಕೃತದ ಪ್ರಾಬಲ್ಯವಿದ್ದುದರಿಂದ, ಕನ್ನಡ ವಾಙ್ಮಯವು ಅದರೊಡನೆ ಕಾದಬೇಕಾಯಿತು. ಬ್ರಾಹ್ಮಣರ ಗ್ರಂಥಗಳೆಲ್ಲವೂ ಅನೇಕ ನೂರು ವರ್ಷಗಳ ವರೆಗೆ ಸಂಸ್ಕೃತದಲ್ಲಿಯೇ ಇದ್ದುವು. ಆದರೆ ಬೌದ್ಧ ಜೈನ ಧರ್ಮಗಳು ವೈದಿಕ ಧರ್ಮದಿಂದ ಸಿಡಿದು ನಿಂತುದರಿಂದ, ವೈದಿಕ ಧರ್ಮದ ಮುಖ್ಯ ಭಾಷೆಯಾದ ಸಂಸ್ಕೃತ

ದಲ್ಲಿ ಅವರು ಗ್ರಂಥಗಳನ್ನು ಬರೆಯದೆ ದೇಶ ಭಾಷೆಯಲ್ಲಿ ಬರೆಯತೊಡಗಿದರು. ಮುಂದೆ ಬರಬರುತ್ತ ವೈದಿಕ ಧರ್ಮದಲ್ಲಿ ಸುಧಾರಕರಾಗಿ ಉದ್ಭವಿಸಿದ ವೀರಶೈವ ಧರ್ಮದವರೂ ಜೈನಬೌದ್ಧರನ್ನೇ ಅನುಕರಣ ಮಾಡಿದರು. ಆದರೆ ಮುಂದೆ ಬ್ರಾಹ್ಮಣರೂ ಕೆಲವಂಶದಿಂದ ಈ ದೇಶ ಭಾಷೆಯ ಪ್ರಾಬಲ್ಯ ಪ್ರವಾಹದ ಸೆಳವಿಗೆ ಸಿಲ್ಕಿ ಹರಿದುಬಂದರು. ಅವರೂ ತಮ್ಮ ಧರ್ಮ ವಿಷಯಗಳನ್ನು ಕೂಡ ಪ್ರಾಕೃತದಲ್ಲಿ ಬರೆಯತೊಡಗಿದರೆಂ ರೆಂಬುದು ಶ್ರೀ ಪುರಂದರದಾಸ ಮುಂತಾದವರ ಆಚರಣೆಯಿಂದ ಗೊತ್ತಾಗುತ್ತದೆ. ಈ ಮೇರೆಗೆ ಕನ್ನಡ ವಾಙ್ಮಯವು ಸಂಸ್ಕೃತದೊಡನೆ ಮಾಡಿದ ಯುದ್ಧದ ಕಥೆಯು ಮನೋರಂಜಕವಾಗಿದೆ. ಆದರೆ ಅದನ್ನು ಇಲ್ಲಿ ದಿಗ್ದರ್ಶನ ಮಾಡುವದಕ್ಕಿಂತ ಹೆಚ್ಚಿಗೆ ಹೇಳುವದಕ್ಕೆ ಅವಕಾಶವಿಲ್ಲ. ಇಷ್ಟಾದರೂ ಇದು ಪ್ರೇಮಯುದ್ಧವೇ ಆಗಿತ್ತು. ಏಕೆಂದರೆ ಸಂಸ್ಕೃತ ಭಾಷೆಯ ವಿಷಯಕ್ಕಿರುವ ಆದರವು ಅದರಿಂದ ತಿಲಪ್ರಾಯವೂ ಕಡಿಮೆಯಾಗಲಿಲ್ಲ. ಇಷ್ಟೇ ಅಲ್ಲ; ಅನೇಕ ಜೈನ-ಬೌದ್ಧ ವೀರಶೈವ ಧರ್ಮದವರೂ ಸಂಸ್ಕೃತದಲ್ಲಿ ಗ್ರಂಥಗಳನ್ನು ರಚಿಸಿದರು.

ಶಿಲಾಲಿಪಿ, ತಾಮ್ರಪಟಗಳ ವಿಷಯವಾಗಿಯೂ ಸಾಮಾನ್ಯವಾಗಿ ಇದೇ ಪ್ರಕಾರದ ವಿಧಾನವನ್ನು ಮಾಡಬಹುದು. ಪ್ರಾಚೀನ ಶಿಲಾಲೇಖಗಳೆಲ್ಲವೂ ಸಂಸ್ಕೃತದಲ್ಲಿಯೇ ಇವೆ. ಬರಬರುತ್ತ ಅವುಗಳಲ್ಲಿ, ಕನ್ನಡ ಅಕ್ಷರ ಮತ್ತು ಶಬ್ದಗಳ ಪ್ರವೇಶವಾಗಿವೆ. ಅನಂತರ ಅವು ಕನ್ನಡ ಮತ್ತು ಸಂಸ್ಕೃತ ಮಿಶ್ರಣವಾದವು. ಕೊನೆಗೆ ಪೂರ್ಣ ಕನ್ನಡ ಶಿಲಾ-ಲೇಖಗಳೇ ಹೆಚ್ಚಾದವು. ಕದಂಬರ ಕಾಲದ ತಾಮ್ರಪಟಗಳು ( ಅವರ ಶಿಲಾಲಿಪಿಗಳು ಕಡಿಮೆ ) ಸಂಸ್ಕೃತದಲ್ಲಿ ಇರುತ್ತವೆ. ಚಾಲುಕ್ಯರ ಶಿಲಾಲಿಪಿಗಳಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಕನ್ನಡ ಅಕ್ಷರಗಳೂ ಶಬ್ದಗಳೂ ದೊರೆಯುತ್ತವೆ. ರಾಷ್ಟ್ರಕೂಟರ ಕಾಲದಲ್ಲಿ ಕನ್ನಡ ಶಿಲಾಲಿಪಿಗಳು ದೊರೆಯುತ್ತವೆ. ಕೊನೆಗೆ ಹೊಸ ಚಾಲುಕ್ಯರ ಕಾಲದಲ್ಲಂತೂ ಶಿಲಾಲಿಪಿಗಳು ಬಹುತರವಾಗಿ ಕನ್ನಡ ಭಾಷೆಯಲ್ಲಿಯೇ ಇರುತ್ತವೆ. ಕೊನೆಗೆ ನಮ್ಮ ಕನ್ನಡ ಭಾಷೆಯ ವರ್ಚಸ್ಸು ಧರ್ಮಕ್ಷೇತ್ರದಲ್ಲಿಯೂ ಹೇಗೆ ಪ್ರಸ್ಥಾಪಿತವಾಗಿತ್ತೆಂಬುದಕ್ಕೆ ಜಗನ್ನಾಥದಾಸರು ರಚಿಸಿದ ಹರಿಕಥಾಮೃತಸಾರ

ದಲ್ಲಿಯು ಎರಡು ಶ್ಲೋಕಗಳನ್ನು ಕೊಟ್ಟು ಈ ಪ್ರಕರಣವನ್ನು ಮುಗಿ. ಸುತ್ತೇವೆ. ಅವು ಯಾವುವೆಂದರೆ—

ಆದರ್ಶವ ಗತಾಕ್ಷ ಭಾಭಾ। ಭೇದದಿಂದಲಿ ಕರೆಯಲದನು ನಿ।
ಷೇಧಗೈದವಲೋಕಿಸದೆ ಬಿಡುವರೆ ವಿವೇಕಿಗಳು ॥
ಮಾಧವನ ಗುಣ ಪೇಳ್ವ ಪ್ರಾಕೃತ। ವಾದರೂ ಸರಿ, ಪರಮಾ।
ಹ್ಲಾದಬಡದಿಪ್ಪರೆ ನಿರಂತರ ಬಲ್ಲ ಕವಿ ಜನರು ॥

—೧೬ನೆಯ ಸಂಧಿ ೩೪

ಭಾಸ್ಕರನ ಮಂಡಲವ ಕಂಡು ಸ। ಮುಸ್ಕರಿಸಿ ಮೋದಿಸದೆ ದ್ವೇಷದಿ।
ತಸ್ಕರನು ನಿಂದಿಸಲು ಕುಂದಹುದೇ ದಿವಾಕರಗೆ ॥
ಸಂಸ್ಕೃತವಿದಲ್ಲೆಂದು ಕುಹಕ ತಿ। ರಸ್ಕರಿಸಲೇನಹುದು ಭಕ್ತಿಪು।
ರಸ್ಸರದಿ ಕೇಳ್ವರಿಗೆ ಒಲಿವನು ಪುಷ್ಕರಾಕ್ಷಸಖಾ ॥

—೧೬ನೆಯ ಸಂಧಿ ೩೫

ಅನೇಕ ಕನ್ನಡಿಗರು ತೆಲುಗು ಭಾಷೆಯಲ್ಲಿ ಪಂಡಿತರಾಗಿ ತೆಲುಗು ಭಾಷೆಯಲ್ಲಿ ಗ್ರಂಥಗಳನ್ನು ಬರೆದರೂ ಅವರಿಗೆ ತಾವು ಕರ್ನಾಟಕರೆಂದೆನಿಸಿಕೊಳ್ಳುವದಕ್ಕೆ ತಿಲಾಂಶದಲ್ಲಿಯೂ ನಾಚಿಕೆಯುಂಟಾಗುತ್ತಿರಲಿಲ್ಲ. ಇಷ್ಟೇ ಅಲ್ಲ, ತಾವು ಕರ್ನಾಟಕರೇ ಎಂದು ಘಂಟಾಘೋಷವಾಗಿ ಸಾರುತ್ತಿದ್ದರು. ಶ್ರೀನಾಥನೆಂಬ ತೆಲುಗು ಕವಿಯು ವಿಜಯನಗರದ ರಾಜನಾದ ಹರಿಹರರಾಯನ ಕಾಲಕ್ಕೆ ಪ್ರಸಿದ್ಧಿಗೆ ಬಂದನು. ಇವನು ತಾನು ಬರೆದ 'ಭೀಮೇಶ್ವರ ಪುರಾಣ' ವೆಂಬ ತೆಲುಗು ಗ್ರಂಥದಲ್ಲಿ ಬರೆದಿರುವದೇನಂದರೆ "ಪ್ರೌಢಿಗರೆಕಿಂಪ ಸಂಸ್ಕೃತ ಭಾಷೆಯೆಂಡು। ಪಲುಕು ನುಡಿಕಾರಮುನನಾಂಧ್ರ ಭಾಷೆಯೆಂಡ್ರು। ಯೆವ್ವರೆ ಮನ್ನನೆಂಡ್ರು। ನಾಕೇಮಿ ನಾಕೇಮಿ ಕೊರತ। ನಾ ಕವಿತ್ವಮಂಬು ನಿಜಮು ಕರ್ನಾಟ ಭಾಷಾ ॥

ಸಾರಾಂಶ:— ನನ್ನ ಕವಿತೆಯು ಪ್ರೌಢಿ ನೋಡಿದರೆ ಆದು ಸಂಸ್ಕೃತ

ಭಾಷೆಯೆನ್ನುವರು. ಮಾತಿನ ರೀತಿಯನ್ನು ನೋಡಿದರೆ ತೆಲುಗು ಭಾಷೆಯನ್ನುವರು; ಯಾರು ಏನೇ ಎನವಲ್ಲರು ! ನನಗೇನು ಕೊರತೆ ! ನನ್ನ ಕವಿತ್ವವು ನಿಜವಾಗಿ ಕರ್ನಾಟಕ ಭಾಷೆ" ಅಹಹ ಎಂಥ ಕರ್ನಾಟಕಾಭಿಮಾನವು !!

ಕನ್ನಡಿಗರೇ, ಇಂಥಿಂಥವರು ಕನ್ನಡವನ್ನು ಗೌರವಿಸಿರಲು ನಾವು ಅದನ್ನು ತಿರಸ್ಕರಿಸುವುದುಚಿತವೇ ?

---

## ೧೭ನೆಯ ಪ್ರಕರಣ

## ಉಪಸಂಹಾರ

ಕನ್ನಡಿಗರೇ ! ಈ ಬಗೆಯಾಗಿ ನಮ್ಮೆಲ್ಲರಿಗೂ ಅತ್ಯಂತ ಪ್ರಿಯ ವಾಗಿರುವ ಈ ಕರ್ನಾಟಕದ ಗತವೈಭವವನ್ನು ವಿಹಂಗಮದೃಷ್ಟಿಯಿಂದ ಅಲ್ಲ— ಆಕಾಶಯಾನ ದೃಷ್ಟಿಯಿಂದ ನಾವು ನಿಮ್ಮ ಅವಲೋಕನಕ್ಕೆ ತಂದುಕೊಟ್ಟಿರುವೆವು. ಇನ್ನೂ ಅನೇಕ ಸಂಗತಿಗಳು ಹೇಳದೆ ಉಳಿದಿ ರುತ್ತವೆ. ಆಗಿನ ಕಾಲದ ಬಂದರುಗಳು, ನಾಣ್ಯಗಳು, ರಾಜ್ಯಪದ್ಧತಿ, ವ್ಯಾಪಾರೋದ್ಯೋಗ, ರೀತಿ ನೀತಿ ಮುಂತಾದ ಅನೇಕ ಮಹತ್ವದ ವಿಷ ಯಗಳ ಬಗ್ಗೆ ಅನೇಕ ಬೋಧಪ್ರದವಾದ ಮತ್ತು ಅಭಿಮಾನಾಸ್ಪದವಾದ ಸಂಗತಿಗಳನ್ನು ನಾವು ನಮ್ಮ ಇತಿಹಾಸದಲ್ಲಿ ಕಾಣಬಹುದು. ಆದರೆ ಈ ಪ್ರಬಂಧವು ಈಗಾಗಲೇ ಅನಪೇಕ್ಷಿತವಾಗಿ ಬೆಳೆದಿರುವದರಿಂದ, ಅವುಗಳ ಬಗ್ಗೆ ನಮಗೆ ಗೊತ್ತಾಗಿರುವ ಅಲ್ಪಸ್ವಲ್ಪ ಸಂಗತಿಗಳನ್ನೂ ಹೇಳದೆ ಕೈ ಬಿಗಿ ಹಿಡಿಯಬೇಕಾಗಿರುತ್ತದೆ.

ಬರೀ ಅರಸರ ನಾಮಾವಳಿಯನ್ನೂ, ರಾಜವಂಶಗಳ ಪರಂಪರೆ ಯನ್ನೂ ಹಲಕೆಲವು ಸಂಗತಿಗಳ ತಿಥಿವಾರಗಳನ್ನೂ, ಕೆಲವು ಪುಸ್ತಕ ಮತ್ತು ಕವಿಗಳ ಹೆಸರುಗಳನ್ನೂ ಹೇಳಿದ ಮಾತ್ರಕ್ಕೆ ಇತಿಹಾಸವಾಗಲಿಲ್ಲ ವೆಂಬುದನ್ನು ನಾವು ಸಂಪೂರ್ಣವಾಗಿ ಅರಿತಿರುವೆವು. ನಮ್ಮ ಪೂರ್ವ ಜರು ಇಷ್ಟೊಂದು ವೈಭವವನ್ನು ಹೇಗೆ ಪಡೆದರು. ಅವರ ವಿಚಾರ ಗಳ ಉತ್ಕ್ರಾಂತಿಯು ಯಾವ ಬಗೆಯಿಂದ ಆಯಿತು, ಅವರ ಧರ್ಮವು ಏಕೆ ಉನ್ನತಿಯನ್ನು ಹೊಂದಿತು, ಅವರ ವಿಚಾರಗಳು ಏಕೆ ವಿಕಸಿತ ವಾಗಿದ್ದುವು ಇವೇ ಮೊದಲಾದ ಸಂಗತಿಗಳನ್ನು ಸಾದ್ಯಂತರವಾಗಿ ವಿವರಿಸುವದೇ ನಿಜವಾದ ಇತಿಹಾಸವು. ಆದರೆ ಇಂಥ ಇತಿಹಾಸವನ್ನು ಬರೆಯುವುದು ನಮ್ಮ ಉದ್ದೇಶವಲ್ಲ. ಅದು ನಮಗೆ ಇಷ್ಟರಲ್ಲಿ ಸಾಧ್ಯವೂ ಇಲ್ಲ. ಕನ್ನಡಿಗರಲ್ಲಿ ಅಭಿಮಾನವೂ ಕುತೂಹಲವೂ ಜಿಜ್ಞಾಸೆಯೂ

ಜಾಗೃತವಾಗಲಿಕ್ಕೆ ಹಿಂದೆ ಹೇಳಿದ ಸಂಗತಿಗಳು ಸಾಕೆಂದೂ ಹೆಚ್ಚಿಗೆ ಹೇಳುವದರಿಂದ ಅಪಚನವಾಗಬಹುದೆಂದೂ ನಾವು ಬಗೆಯುತ್ತೇವೆ. ನಮ್ಮ ಇತಿಹಾಸದ ಬಗ್ಗೆ ಈ ಮುಖ್ಯ ಸಂಗತಿಗಳಾದರೂ ಗೊತ್ತಿರದಿದ್ದರೆ, ನಾವು 'ಸುಶಿಕ್ಷಿತ' ರೆಂಬ ನಾಮಾಭಿಧಾನಕ್ಕೂ ಅರ್ಹರಲ್ಲವೆಂದು ನಮ್ಮ ಭಾವನೆ.

ಹಿಂದುಸ್ಥಾನವು ಒಂದು ಸಣ್ಣ ಜಗತ್ತೇ ಇರುತ್ತದೆ. ಇದರಲ್ಲಿ ನಾನಾ ತರದ ಜನಾಂಗಗಳೂ ಭಾಷೆಗಳೂ ಇರುವುದರಿಂದ ಒಂದು ಭಾಗದ ಇತಿಹಾಸವು ಮತ್ತೊಂದು ಭಾಗದ ಇತಿಹಾಸದಲ್ಲಿ ತೊಡಕಿಕೊಂಡಿರುತ್ತದೆ. ಉದಾ — ಮಹಾರಾಷ್ಟ್ರದ ಇತಿಹಾಸವು ನಮ್ಮ ಇತಿಹಾಸದಲ್ಲಿ ತೊಡಕಿಕೊಂಡಿದೆ. ಆದಕಾರಣ, ಆಯಾ ಭಾಷೆಯ ಜನರು ತಮ್ಮ ಇತಿಹಾಸವನ್ನು ಅಭ್ಯಾಸ ಮಾಡುವದಲ್ಲದೆ, ಮಿಕ್ಕ ಇತಿಹಾಸವನ್ನೂ ಅಭ್ಯಾಸ ಮಾಡಬೇಕಾಗುವದು. ಅದಕ್ಕಾಗಿ ಬೇರೆ ಬೇರೆ ಪ್ರಾಂತಿಕ ಇತಿಹಾಸ ಮಂಡಳಗಳಲ್ಲದೆ ರಾಷ್ಟ್ರೀಯ ಇತಿಹಾಸ ಮಂಡಳವೊಂದನ್ನು ವಿದ್ವಾಂಸರು ನಿರ್ಮಾಡಿಸಬೇಕೆಂದು ನಮ್ಮ ನಮ್ರ ಸೂಚನೆ.

ಆದರೆ, ಕರ್ನಾಟಕಸ್ಥರೇ ! ನಾವು ನಮ್ಮ ರಾಷ್ಟ್ರೀಯ ಧ್ಯೇಯವನ್ನು ಮಾತ್ರ ಎಂದೆಂದಿಗೂ ಕಣ್ಣುಮುಂದಿನಿಂದ ಕೀಳಬಾರದು. "ನಮ್ಮ ಪೂರ್ವಜರು ದೊಡ್ಡವರಾಗಿದ್ದರು; ವಿದ್ವಾಂಸರಾಗಿದ್ದರು; ಬಲಾಢ್ಯರಾಗಿದ್ದರು. ಅವರ ವೈಭವವು ಅಪಾರವಾಗಿತ್ತು" ಎಂದು ಸುಮ್ಮನಾಗಿ ಬಳಲುತ್ತ ಕುಳಿತ ಮಾತ್ರಕ್ಕೆ ಕಾರ್ಯವಾಗಲಿಲ್ಲ. ಆ ವಿಚಾರಗಳಿಂದ ನಾವು ಉತ್ಸಾಹಗೊಂಡು ವರ್ತಮಾನಕಾಲದ ಹೀನ ಸ್ಥಿತಿಯನ್ನು ದೂರಮಾಡಬೇಕೆಂದು ಪ್ರತಿಜ್ಞೆಮಾಡಿ ಭವಿಷ್ಯಕಾಲದ ಧ್ಯೇಯವನ್ನು ಪಡೆಯಲಿಕ್ಕೆ ಈ ಇತಿಹಾಸದ ಸಹಾಯವನ್ನು ಪಡೆದರಲ್ಲವೇ ಇದರ ಪ್ರಯೋಜನವು ? ಹಿಂದಿನ ವೈಭವವನ್ನು ನೆನೆಸುವುದೇ ನಿರರ್ಥಕವೆಂದು ತಿಳಿಯುವುದು ಎಷ್ಟು ಹೆಡ್ಡತನವೋ ಅಷ್ಟೆ, ಹಿಂದಿನ ವೈಭವವನ್ನು ನೆನೆಸಿ ಮುಳುಮುಳು ಅಳುತ್ತ ಕೈಕಾಲು ಕಳೆದುಕೊಂಡು ಕುಳ್ಳಿರುವುದೂ ತಿರಸ್ಕರಣೀಯವು. ಹಿಂದಿನ ಇತಿಹಾಸದ ಪ್ರಯೋಜನವನ್ನು ಮುಂದಿನ ರಾಷ್ಟ್ರೀಯ ಉನ್ನತಿಗಾಗಿ ನೇರ್ಪಡಿಸಿಕೊಳ್ಳುವದೇ ಜಾಣತನದ

ಮಾರ್ಗವು. ನಾವು ಸುಧಾರಣೆಯ ಉಚ್ಚ ಶಿಖರದಿಂದ ಈಗ ಪತಿತರಾಗಿ ರುವೆವಲ್ಲವೇ? ಹಾಗೆ ಪತಿತರಾಗುವುದಕ್ಕೆ ಬೇಕಾಗುವ ವಿಘಾತಕ ಬೀಜಗಳು ನಮ್ಮಲ್ಲಿ ಈಗ ಬೀಡು ಬಿಟ್ಟುಕೊಂಡಿರುವವು. ಅವುಗಳನ್ನು ಕಂಡುಹಿಡಿದು ಕಿತ್ತುಹಾಕುವದಕ್ಕೆ ಇತಿಹಾಸವೇ ಔಷಧವು.

ಆದುದರಿಂದ, ಕೊನೆಗೆ ನಮ್ಮ ಕನ್ನಡ ಬಾಂಧವರಿಗೆ ಕೈಜೋಡಿಸಿ ಪುನಃ ಪುನಃ ಹೇಳುವುದೇನೆಂದರೆ— ಕನ್ನಡಿಗರೇ, ನಾವು ನಮ್ಮ ಆಲಸ್ಯ ವನ್ನು ತಳ್ಳೋಣ; ಭ್ರಾಮಕ ಕಲ್ಪನೆಗಳನ್ನು ಬಿಟ್ಟುಬಿಡೋಣ; ಮತ್ತು ಮುಂದಿನ ಮಾರ್ಗಕ್ಕೆ ಹತ್ತೋಣ. ಪಾತಾಳಕ್ಕಿಳಿದ ನಮ್ಮ ಕರ್ನಾಟಕದ ಆರ್ಯಸಂಸ್ಕೃತಿಯನ್ನು ನಾವು ಉದ್ಧರಿಸದೆ ಇನ್ನಾರು ಉದ್ಧರಿಸುವವರು? ಕನ್ನಡಿಗರು ಹೇಡಿಗಳು, ಹಿಂದುಳಿದವರು, ಅಭಿಮಾನಶೂನ್ಯರು— ಎಂದು ಮೊದಲಾದ ಕರ್ಣಕಟುವಾದ ನುಡಿಗಳಿಂದ ನಮ್ಮನ್ನು ಜುಚ್ಚುವ ವರಿಗೆ ನಾವು ನಮ್ಮ ಕ್ರಿಯಾಶಕ್ತಿಯಿಂದ ಉತ್ತರ ಕೊಡೋಣ. ಸಾಯು ಲಾದ ಕರ್ನಾಟಕಕ್ಕೆ ಇತಿಹಾಸದ ಸಂಜೀವಿನೀ ಮಾತ್ರೆಯನ್ನು ಹಾಕಿ ಚೇತನಗೊಳಿಸೋಣ. ನಮ್ಮ ಆಶಾವೃಕ್ಷವನ್ನು ಕೊಳೆಯಿಸಿ ಬಿಡುವಂಥ ಹುಳಗಳನ್ನು ಕೊಲ್ಲಲು ಇತಿಹಾಸವೇ ಮದ್ದು. ಕನ್ನಡಿಗರೇ, "ಕರ್ನಾಟಕ" ವೆಂಬ ಒಂದು ಶಬ್ದದಲ್ಲಿ, ಎಂಥ ಅದ್ಭುತವಾದ ಮಾಂತ್ರಿಕ ಶಕ್ತಿಯು ತುಂಬಿರುತ್ತದೆಂಬುದನ್ನು ಲಕ್ಷಕ್ಕೆ ತನ್ನಿರಿ! ಕರ್ನಾಟಕದ ಅರಸರು ಹೋದರು! ಕವಿಗಳು ಹೋದರು! ಸಂಪತ್ತು ಹೋಯಿತು! ವೈಭವವು ಹೋಯಿತು! ಆದರೆ 'ಕರ್ನಾಟಕ' ವೆಂಬ ಶಬ್ದವು ಮಾತ್ರ ಇನ್ನೂ ಉಳಿದಿದೆ. ಅದು ದ್ರೌಪದಿಯ ಅಕ್ಷಯ ಪಾತ್ರೆಯೊಳಗಿನ ಅಗುಳಿನಂತಿರುತ್ತದೆ. ಶ್ರೀಕೃಷ್ಣ ಪರಮಾತ್ಮನ ಕೃಪೆಯಿಂದ ನಾವು ಇದೊಂದು ಅಗುಳಿನಿಂದ ಸಾವಿರಾರು ಜನರ ಹಸಿವೆಯನ್ನು ಹಿಂಗಿಸ ಬಹುದು. ಆದಕಾರಣ, ಕನ್ನಡಿಗರೇ, ಕರ್ನಾಟಕ ಸಂಸ್ಕೃತಿಯೆಂಬ ಗುಪ್ತಗಾಮಿನಿಯಾದ ಗಂಗೆಯನ್ನು ಮೇಲಕ್ಕೆ ಎತ್ತಿ ತರೋಣ! ಏಳಿರಿ, ಇದೀಗ ನಮ್ಮ ಮುಖ್ಯ ಕರ್ತವ್ಯವು.

ಆದುದರಿಂದ, ಕನ್ನಡಿಗರೇ, ಇನ್ನು ಅರ್ಜುನನು ತನ್ನ ಮೋಹ

ವನ್ನು ದೂರೀಕರಿಸಿ ಶ್ರೀಕೃಷ್ಣ ಪರಮಾತ್ಮನಿಗೆ ಉತ್ತರವಿತ್ತಂತೆ, ನಾವು ನಮ್ಮ ರಾಷ್ಟ್ರದೇವತೆಗೆ ಹೀಗೆಂದು ಹೇಳುವ—

ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದನ್ಮಯಾಚ್ಯುತ ।
ಸ್ಥಿತೋಽಸ್ಮಿಗತಸಂದೇಹಃ ಕರಿಷ್ಯೇ ವಚನಂ ತವ ॥

— ಗೀತೆ ೧೮-೭೩

ದೇವ ಬಿನ್ನಹ ನಿಮ್ಮ ಕಾರು | ಣ್ಯಾವಲೋಕನದಿಂದಲೆನ ಗು | ಣಾವಲಂಬನದಜ್ಞತನ ನೆರೆ ಕೆಟ್ಟುದದರಿಂದ ‖ ಜೀವಭಾವವನುಳಿದು ನಿಜ ಸಂ | ಭಾವಿಸಿತು ಸಂದೇಹ ಬೀತುದು | ದೇವ ನೀ ಹೇಳಿದುದ ಮಾಡುವೆ ನೆಂದನಾ ಪಾರ್ಥ ‖

ಶ್ರೀಕೃಷ್ಣಾರ್ಪಣಮಸ್ತು

## ಪೂರಕ ಪ್ರಕರಣ ೧

### ಕರ್ನಾಟಕ-ಇತಿಹಾಸ-ಸಂಶೋಧನ

ವಾಚಕರೇ! ಕರ್ನಾಟಕದ ಇತಿಹಾಸದ ವಿಷಯವಾಗಿ ಸಾಮಾನ್ಯವಾಗಿ ಹೇಳಬೇಕಾದುದೆಲ್ಲವನ್ನು ಹೇಳಿದೆವು. ಇನ್ನು, ಈ ಮುಂದಿನ ಪ್ರಕರಣದಲ್ಲಿ, ಕರ್ನಾಟಕ ಇತಿಹಾಸ ಸಂಶೋಧನದ ಕಾರ್ಯಕ್ಕೆ ಅವಶ್ಯವಾಗಿ ಗೊತ್ತಿರಬೇಕಾಗಿರುವ ಕೆಲವು ಸಂಗತಿಗಳನ್ನು ಇಲ್ಲಿ ನಿವೇದಿಸಿ, ಸಂಶೋಧಕರು ಯಾವ ಮಾರ್ಗದಿಂದ ಸಾಗಬೇಕೆಂಬ ಬಗ್ಗೆ ನಮಗೆ ಗೊತ್ತಿದ್ದ ಮಟ್ಟಿಗೆ ಕೆಲವು ಸೂಚನೆಗಳನ್ನು ಮಾಡಿರುವೆವು. ಏಕೆಂದರೆ ಹಾಗೆ ಮಾಡದಿದ್ದರೆ, ಸಂಶೋಧಕರು ದಾರಿ ತಪ್ಪಿ ಅಡವಿಗೆ ಬೀಳುವ ಸಂಭವವುಂಟು.

ಹಿಂದೆ ೫ನೆಯ ಪ್ರಕರಣದಲ್ಲಿ ಇತಿಹಾಸಕ್ಕೆ ಉಪಲಬ್ಧವಾಗಬಹುದಾದ ಸಾಧನ ಸಂಪತ್ತಿಯನ್ನು ಹೇಳಿರುವೆವಷ್ಟೇ. ಈ ಸಾಧನಸಾಮಗ್ರಿಯಲ್ಲಿ ಸ್ಥೂಲವಾಗಿ ಎರಡು ವರ್ಗಗಳನ್ನು ಮಾಡಬಹುದು. (೧) ಪ್ರಾಚೀನ ವಸ್ತು ಸಂಶೋಧನ (೨) ಹಿಂದಿನ ವಾಙ್ಮಯ ಸಂಶೋಧನ. ಇವುಗಳಲ್ಲಿ ಎರಡನೆಯದರ ಬಗ್ಗೆ ಹೆಚ್ಚಿಗೆ ಹೇಳುವ ಕಾರಣವಿಲ್ಲ. ಚೆನ್ನಬಸವಪುರಾಣ, ಕನಕದಾಸ ಪುರಂದರದಾಸರ ಪದಗಳು ಮುಂತಾದವುಗಳನ್ನು ಇತಿಹಾಸದ ದೃಷ್ಟಿಯಿಂದ ಓದಿ, ಅವುಗಳಲ್ಲಿ ದೊರೆಯುವ ಇತಿಹಾಸದ ಅಂಶವನ್ನು ಒಂದೆಡೆಗೆ ಕೂಡಿಸಿಟ್ಟರೆ, ಕರ್ನಾಟಕದ ಇತಿಹಾಸವನ್ನು ತಿಳಿದುಕೊಳ್ಳುವದಕ್ಕೆ ಉಪಯೋಗವಾಗಬಹುದು. ಕರ್ನಾಟಕ ಇತಿಹಾಸಕ್ಕೆ ಸಂಬಂಧಪಟ್ಟ ಕನ್ನಡ ಮತ್ತು ಸಂಸ್ಕೃತ ಪುಸ್ತಕಗಳನ್ನು ಕಾಲಕ್ರಮವಾಗಿ ಒಂದೊಂದು ತೆಗೆದುಕೊಂಡರೆ ಹೆಚ್ಚು ಒಳ್ಳೆಯದು, ಇಂಥಿಂಥ ಪುಸ್ತಕದಲ್ಲಿಯೇ ನಮ್ಮ ಇತಿಹಾಸದ ಅಂಶವು

ದೊರೆಯುತ್ತದೆಂದು ಹೇಳುವುದು ಶಕ್ಯವಿಲ್ಲ. ಆದರೂ ಹಿಂದಿನ ಪ್ರಕರಣದಲ್ಲಿ ಹೇಳಿದ ಇತಿಹಾಸದಿಂದ ಯಾವ ದೃಷ್ಟಿಯಿಂದ ಆ ವಾಙ್ಮಯ ಓದಬೇಕಾಗುವುದೆಂಬುದು ಗೊತ್ತಾಗಿರಬಹುದು. ಯಾವುದೊಂದು ಪುಸ್ತಕವನ್ನೋದಿದ ಕೂಡಲೆ, ಅದರೊಳಗೆ ನಮ್ಮ ಅರಸರ ಹೆಸರುಗಳುಂಟೇ, ಕರ್ನಾಟಕದ ಸುಧಾರಣೆಗೆ ಕೈಕೊಟ್ಟ ಜನರ ನಾಮನಿರ್ದೇಶವಿರುವುದೇ, ಆ ಪುಸ್ತಕವು ಎಂದು ಹುಟ್ಟಿತೆಂಬುದರ ಬಗ್ಗೆ ಅದರಲ್ಲಿ ಏನಾದರೂ ಆಧಾರವುಂಟೇ ಇವೇ ಮುಂತಾದ ಸಂಗತಿಗಳನ್ನು ಟಿಪ್ಪಣಿ ಮಾಡಿ ಇಟ್ಟುಕೊಳ್ಳಬೇಕು. ಪುಸ್ತಕದ ಆರಂಭಕ್ಕೂ ಕೊನೆಗೂ ಗ್ರಂಥಕರ್ತರು ತಮ್ಮ ಕುಲಗೋತ್ರಗಳನ್ನು ಹೇಳಿಡುವ ಸಂಪ್ರದಾಯವಿರುತ್ತದೆ. ಆದುದರಿಂದ ಅತ್ತ ಲಕ್ಷ್ಯವಿಡಬೇಕು.

ಇನ್ನು ಎರಡನೆಯ ವರ್ಗದ ವಿಷಯವಾಗಿ ಎಂದರೆ ಪುರಾಣವಸ್ತು ಸಂಶೋಧನದ ವಿಷಯವಾಗಿ ಮಾತ್ರ ಹೆಚ್ಚು ವಿಸ್ತರಿಸಿ ಹೇಳುವ ಅವಶ್ಯವಿದೆ. ಏಕೆಂದರೆ ಕರ್ನಾಟಕದ ಇತಿಹಾಸಕ್ಕೆ ಸಂಬಂಧಪಟ್ಟ ಲಿಪಿಗಳೂ ಲೇಖಗಳೂ ಒಂದೇ ಕಡೆಗೆ ಸಂಕಲಿತವಾಗಿ ದೊರೆಯುವದಿಲ್ಲ. ಅವು ಅನೇಕ ಪುಸ್ತಕಗಳಲ್ಲಿ ಹರಡಿರುತ್ತವೆ. ಮತ್ತು ಇಂದಿನವರೆಗೆ ಆಗಿ ಹೋದ ಪ್ರಯತ್ನಗಳ ಜ್ಞಾನವಿರದಿದ್ದರೆ, ನಮಗೆ ನಿಷ್ಕಾರಣವಾಗಿ ಶ್ರಮವುಂಟಾಗುವ ಸಂಭವವುಂಟೆಂದು ನಮ್ಮ ಸ್ವಂತ ಅನುಭವಕ್ಕೆ ಬಂದಿದೆ. ಇಂದಿನ ವರೆಗೆ, ಎಷ್ಟು ಶಿಲಾಲಿಪಿಗಳು ಎಲ್ಲೆಲ್ಲಿ ಮುದ್ರಿತವಾಗಿವೆ. ಅವುಗಳ ಅರ್ಥವನ್ನು ಗೊತ್ತು ಹಚ್ಚಿರುವರೇ ಇಲ್ಲವೇ ? ಇಲ್ಲದಿದ್ದರೆ ಅವುಗಳ ಸಂಗ್ರಹವು ಯಾರ ಹತ್ತರವುಂಟು. ಶಿಲಾಲಿಪಿಗಳು ಯಾವ ಯಾವ ಸ್ಥಳದಲ್ಲಿ ಸಿಕ್ಕುತ್ತವೆ— ಇವೇ ಮುಂತಾದ ವಿಷಯಗಳನ್ನು ಕುರಿತು ಸವಿಸ್ತಾರವಾದ ಪುಸ್ತಕವೊಂದನ್ನು ರಚಿಸಿದರೆ ಮುಂದಿನ ಸಂಶೋಧಕರಿಗೆ ಮಾರ್ಗದರ್ಶಿಯಾಗುವದು. ಅವರ ಕಾರ್ಯವನ್ನು ತೃಪ್ತಿಕರವಾಗಿ ಮುಂದೆ ಯಾರು ಮಾಡುವರೊ ಮಾಡಲಿ, ಸದ್ಯಕ್ಕೆ ಹತ್ತು ಹನ್ನೆರಡು ವರ್ಷಗಳಲ್ಲಿ ಆಗಿಷ್ಟು ಈಗಿಷ್ಟು ಮಾಡಿದ ಅಭ್ಯಾಸದಿಂದ ನಮಗೆ ಪುಸ್ತಕಗಳಲ್ಲಿ ದೊರೆತ ಸಂಗತಿಗಳನ್ನು ಇಲ್ಲಿ ಅತಿ ಸಂಕ್ಷೇಪವಾಗಿ ಹೇಳಿಡುವೆವು.

'ಕರ್ನಾಟಕ'* ವೆಂಬ ಶಬ್ದವನ್ನುಚ್ಚರಿಸಿದೊಡನೆಯೇ ಮೈಯುಬ್ಬಿ ಡುವಷ್ಟು ರಾಷ್ಟ್ರೀಯತ್ವವು ನಮ್ಮ ಕನ್ನಡಿಗರಲ್ಲಿ. ಇಷ್ಟು ದಿವಸ ವಿಕಾಸ ವಾಗಲಿಲ್ಲವೆಂಬ ಕಾರಣದಿಂದಲೋ, ಕರ್ನಾಟಕವು ತುಂಡುತುಂಡಾಗಿ ಹೋಗಿ ಅಖಂಡ ಕರ್ನಾಟಕವು ಕಣ್ಣಿದಿರಿಗೆ ನಿಲ್ಲುವುದಿಲ್ಲೆಂಬ ಕಾರಣ ದಿಂದಲೋ, ನಮ್ಮ ಕನ್ನಡಿಗರು ತಮ್ಮ ಇತಿಹಾಸವನ್ನು ಕುರಿತು ಮೂಕ ಭಾವವನ್ನೇ ಅವಲಂಬಿಸಿದ್ದಾರೆ. ಮುಂಬಯಿ ಕರ್ನಾಟಕದವರು ಸಮೀಪದಲ್ಲಿರುವ ಮರಾಠೀ ಬಂಧುಗಳ ಅಭಿಮಾನಪೂರ್ವಕವಾದ ರಾಷ್ಟ್ರೀಯ ಪ್ರಯತ್ನಗಳಿಂದ ಜಾಗರೂಕರಾಗಿ ತಮ್ಮ ಭಾಷಾವಿಷಯ ದಲ್ಲಿ ಕೆಲಮಟ್ಟಿಗೆ ಅಭಿಮಾನಗೊಂಡವರಾಗಿದ್ದರೂ, ಆ ಅಭಿಮಾನವು ಭಾಷಾ ಕ್ಷೇತ್ರವನ್ನು ಮಾತ್ರವೇ ವ್ಯಾಪಿಸಿಕೊಂಡಿರುವದಲ್ಲದೆ, ಹೆಚ್ಚು ವಿಸ್ತಾರವಾದ ಸ್ವರೂಪವು ಅದಕ್ಕೆ ಇಂದಿನ ವರೆಗೆ ಪ್ರಾಪ್ತವಾಗಿಲ್ಲ. ಉತ್ತರಕರ್ನಾಟಕದ ಬಿಕ್ಕಟ್ಟಿನ ಪರಿಸ್ಥಿತಿಯೇ ಇದಕ್ಕೆ ಕಾರಣವಾಗಿರ ಬಹುದು. ಅಥವಾ ಕಾಲವು ಅನುಕೂಲವಿರಲಿಲ್ಲವೆಂದು ಹೇಳಬಹುದು. ಅದು ಏನೇ ಇರಲಿ; ಹಿಂದಿನ ೫೦–೬೦ ವರ್ಷಗಳಲ್ಲಿ, ಕರ್ನಾಟಕದಲ್ಲಿ ಪಂಡಿತರೇನೋ ಅನೇಕರು ಆಗಿಹೋದರು; ವಿದ್ವಾಂಸರೇನೋ ಕಡಿಮೆ ಯಾಗಲಿಲ್ಲ. ಭಾಷಾಭಿಮಾನಿಗಳೂ ಬಗೆಬಗೆಯಾಗಿ ತಲೆದೋರಿದರು; ಆದರೆ ನಮ್ಮ ಕರ್ನಾಟಕವನ್ನು ಅಭಿಮಾನಕ್ಕೆ ಜೀವನವಾದ ಇತಿಹಾಸ ದೃಷ್ಟಿಯಿಂದ ಯಾರೂ ಅಭ್ಯಾಸ ಮಾಡಲಿಲ್ಲ. ಇದರ ಪರಿಣಾಮವೇನಾ- ಯಿತೆಂದರೆ, ಕರ್ನಾಟಕರ ಮನಸ್ಸಿನಲ್ಲಿ ಭಾಷಾಭಿಮಾನವು ಕೆಲಮಟ್ಟಿಗೆ ಬೇರೂರಿದರೂ, ಅದು ವೃಕ್ಷವಾಗಿ ಬೆಳೆಯಲಿಕ್ಕೆ ಬೇಕಾದ ಇತಿಹಾಸ ಜೀವನವು ಅವರಿಗೆ ದೊರೆಯದಿದ್ದುದರಿಂದ, ಆ ಬೇರು ಕಸುವಿಲ್ಲದೆ

---

* ಮೈಸೂರು ವಿಶ್ವವಿದ್ಯಾಲಯದವರು ತೀರ ಮೊನ್ನೆ, ಮೈಸೂರ ಇತಿಹಾಸ ಬರೆಯುವವರಿಗೆ ಬಹುಮಾನ ಕೊಡುವರೆಂದು ಜಾಹೀರ ಮಾಡಿದ ಸಂಗತಿಯನ್ನು ಓದಿ, ಯಾವ ಕನ್ನಡಿಗನಿಗೆ ಆನಂದವಾಗದೆ ಇದ್ದೀತು ! ಆದರೆ ರಾಷ್ಟ್ರದಲ್ಲಿ ನವಜೀವ ನವು ಸಂಚರಿಸುತ್ತಿರುವ ಇಂಥ ಕಾಲದಲ್ಲಿ ಮೈಸೂರ ಮಟ್ಟಿಗೆ ಸಂಕುಚಿತವಾದ ಅಭಿಮಾನವನ್ನು ತಾಳದೆ, 'ಕರ್ನಾಟಕ' ದ ಅಭಿಮಾನವನ್ನು ತಾಳಿದ್ದರೆ ಸೊಗಸಾ ಗುತ್ತಿತ್ತು !

ಓಣಗಹತ್ತಿತು. ಇರಲಿ! ಇದು ಕನ್ನಡಿಗರ ಸ್ಥಿತಿಯಾಯಿತು. ಇನ್ನು ಕನ್ನಡಿಗರೇ ಈ ವಿಷಯದಲ್ಲಿ ಉದಾಸೀನರಾಗಿದ್ದ ಬಳಿಕ, ಅದನ್ನು ಕಣ್ಣೆತ್ತಿ ನೋಡುವವರಾರು! ತಮ್ಮ ಜನರ ಇತಿಹಾಸವು ತಮಗೆ ಹೇಗೆ ಕಾಣುವದು ಶಕ್ಯವಿದೆಯೋ ಹಾಗೆ ಅದು ಪರಕೀಯರಿಗೆ ಕಾಣುವದು ಶಕ್ಯವಿಲ್ಲವಷ್ಟೇ! ಆದುದರಿಂದ ಪರಕೀಯರು ನಮ್ಮ ಇತಿಹಾಸವನ್ನು ಸ್ವಾಭಿಮಾನದೃಷ್ಟಿಯಿಂದ ಅಭ್ಯಾಸ ಮಾಡಿಲ್ಲವೆಂದು ಹೇಳಿದರೆ ಆಶ್ಚರ್ಯವೇನು? ಆದರೆ ಕೆಲವು ಯುರೋಪೀಯ ವಿದ್ವಾಂಸರು ಪುರಾತನ ವಸ್ತುಸಂಶೋಧನ ಕಾರ್ಯದಲ್ಲಿ ತೊಡಗಿದಾಗ ಅವರಿಗೆ ತಮ್ಮ ಇತಿಹಾಸದ ಸಂಗತಿಗಳು ಗೊತ್ತಾಗಿ, ಅವರು ಅವುಗಳನ್ನು ಕುತೂಹಲದಿಂದ ಸಂಗ್ರಹಿಸಿರುವರು. ಆವರ ಈ ಪ್ರಯತ್ನಗಳ ವಿಷಯವಾಗಿ ನಾವು ಅವರ ಉಪಕಾರವನ್ನು ಎಷ್ಟು ಸ್ಮರಿಸಿದರೂ ತೀರದು. ಅವರ ಆ ಪ್ರಯತ್ನಗಳೇ ನಮ್ಮ ಇತಿಹಾಸಾಭ್ಯಾಸಕ್ಕೆ ಮೂಲಾಕ್ಷರಗಳಾಗಿವೆ. ಈ ವಿದ್ವಾಂಸರು ಪುರಾಣವಸ್ತುಗಳನ್ನು ಸಂಶೋಧಿಸುವಾಗ ಕೆಲವರಿಗೆ ಶಿಲಾಲಿಪಿಗಳು ದೊರೆತವು. ಕೆಲವರ ಲಕ್ಷ್ಯವು ನಮ್ಮಲ್ಲಿಯ ನಾಣ್ಯಗಳ ಕಡೆಗೆ ಎಳೆಯಿತು, ಕಟ್ಟಡಗಳು ಕೆಲವರ ಮನಸ್ಸನ್ನು ಆಕರ್ಷಿಸಿದವು; ಅವರು ಆಯಾ ವಿಷಯಗಳಲ್ಲಿ ಪರಿಶ್ರಮಪಟ್ಟು ಅನೇಕ ಪುಸ್ತಕಗಳನ್ನು ಬರೆದಿರುವರು. ಯುರೋಪೀಯ ಜನರ ಇತಿಹಾಸ ದೃಷ್ಟಿಯು ಈ ಮೊದಲೇ ಎಚ್ಚರಗೊಂಡಿರುವದರಿಂದ, ಮತ್ತು ಹೊಸ ವಸ್ತುಗಳನ್ನು ಕಂಡೊಡನೆಯೇ ಅವುಗಳನ್ನು ಲಕ್ಷಪೂರ್ವಕವಾಗಿ ಪರಿಶೋಧಿಸುವ ಪರಿಪಾಠವು ಅವರಿಗೆ ಮೊದಲಿನಿಂದ ಇದ್ದುದರಿಂದ, ಅವರು ತಮ್ಮ ಬುದ್ಧಿಸಾಮರ್ಥ್ಯವನ್ನು ವೆಚ್ಚಮಾಡಿ, ಅವುಗಳನ್ನು ಅಭ್ಯಾಸ ಮಾಡಿ ಅವುಗಳಿಂದ ನಿಷ್ಪನ್ನವಾಗುವ ಸಂಗತಿಗಳನ್ನು ತಿಳಿಯಲು ಮನಗೊಂಡವರಾದರು. ಸಾರಾಂಶ:— ಆಂಗ್ಲಪಂಡಿತರ ಕುತೂಹಲವೇ ನಮ್ಮ ಇತಿಹಾಸ ಸಂಶೋಧನದ ಆಕಸ್ಮಿಕವಾದ ಮೂಲವು. ಈ ಹೊತ್ತಿನವರೆಗೆ ಅವರು ಮಾಡಿದ ಪ್ರಯತ್ನಗಳ ಫಲವನ್ನೇ ಮೂಲಧನವನ್ನಾಗಿಟ್ಟುಕೊಂಡು ಮುಂದಿನ ಇತಿಹಾಸವನ್ನು, ನಿಜವಾದ ಕರ್ನಾಟಕದ ಅಭಿಮಾನದಿಂದ ಅಭ್ಯಾಸ ಮಾಡಬೇಕಾಗಿದೆ. ಆದರೆ ಕರ್ನಾಟಕಕ್ಕೆ

ಸಂಬಂಧಿಸಿದ ಪ್ರಯತ್ನಗಳನ್ನು ಕುರಿತು ಹೇಳುವ ಮೊದಲು, ಹಿಂದು ಸ್ಥಾನದ ಇತಿಹಾಸದ ಬಗ್ಗೆ ಯಾರು ಯಾರು ಈ ಮಾರ್ಗದಿಂದ ಪ್ರಯತ್ನ ಮಾಡಿದರೆಂಬುದನ್ನು ತಿಳಿದುಕೊಳ್ಳಬೇಕು.

ಈ ವಿಷಯವಾಗಿ ಖಾಸಗೀ ರೀತಿಯಿಂದ ಪ್ರಯತ್ನ ಮಾಡಿದವರಲ್ಲಿ ರಾಯಲ್ ಏಶಿಯಾಟಿಕ್ ಸೊಸಾಯಿಟಿಗಳೇ ಮುಖ್ಯವಾದವುಗಳು. ಬಂಗಾಲ ರಾಯಲ್ ಏಶಿಯಾಟಿಕ್ ಸೊಸಾಯಿಟಿಯು ೧೭೭೫ ರಲ್ಲಿ ಸ್ಥಾಪಿತವಾಯಿತು. ಮುಂಬಯಿ ಸಂಸ್ಥೆಯು ೧೮೦೪ನೆಯ ಇಸ್ವಿಯಲ್ಲಿ ಸ್ಥಾಪಿತವಾಯಿತು. ೧೮೧೮ನೆಯ ಇಸ್ವಿಯಲ್ಲಿ ಮದ್ರಾಸ ಸಂಸ್ಥೆಯು ಸ್ಥಾಪಿತವಾಯಿತು. ೧೮೨೫ನೆಯ ಇಸ್ವಿಯಲ್ಲಿ ಲಂಡನ್ ಸೊಸಾಯಿಟಿಯು ಸ್ಥಾಪಿತವಾಗಿ ಮೊದಲು ಬೇರೆ ಬೇರೆ ಹೆಸರುಗಳಿಂದ ಕೆಲಸ ಮಾಡು ತ್ತಿದ್ದ ಇವೆಲ್ಲ ಸಂಸ್ಥೆಗಳು ಆ ಲಂಡನದ ಮುಖ್ಯ ಸಂಸ್ಥೆಗೆ ಶಾಖೆಗಳಾಗಿ ಮಾಡಲ್ಪಟ್ಟವು. ಫರ್ಗ್ಯುಸನ್, ಪ್ರಿನ್ಸೆಪ್, ಇಲಿಯಟ್ ಮುಂತಾದ ಅನೇಕ ವಿದ್ವಾಂಸರು ಅಯಾ ಸಂಸ್ಥೆಗಳಿಂದ ಹೊರಡಿಸಲ್ಪಟ್ಟ ಮಾಸ ಪತ್ರಿಕೆಗಳಲ್ಲಿ ಲೇಖನಗಳನ್ನು ಬರೆದಿರುವರು. ಆದರೆ ಶಿಲಾಲಿಪಿ, ತಾಮ್ರ ಶಾಸನಗಳನ್ನು ಸಂಶೋಧಿಸುವುದೊಂದೇ ಆ ಸಂಸ್ಥೆಯ ಕೆಲಸವಿರಲಿಲ್ಲ. ಪೌರ್ವಾತ್ಯ ದೇಶಗಳಿಗೆ ಸಂಬಂಧಿಸಿದ ಯಾವದೇ ವಸ್ತುವಿರಲಿ, ಯಾ-ವದೇ ಜ್ಞಾನವಿರಲಿ, ಅವೆಲ್ಲವನ್ನೂ ಸಂಶೋಧಿಸುವುದು ಅವರ ಕೆಲಸ ವಾಗಿತ್ತು. ಆದಕಾರಣ, ನಮ್ಮ ದೇಶದ ಭೂಗರ್ಭಶಾಸ್ತ್ರ, ಪ್ರಕೃತಿ ಶಾಸ್ತ್ರ ಮುಂತಾದ ನಾನಾ ತರದ ವಿಷಯಗಳ ಮೇಲೆ ಲೇಖಗಳು ಬಹುತರವಾಗಿ ಮುಂಬಯಿ ಸಂಸ್ಥೆಯವರು ತೆಗೆದ ಮಾಸಪತ್ರಿಕೆಯ ಲ್ಲಿಯೇ ವಿಶೇಷವಾಗಿ ದೊರೆಯುತ್ತವೆ. ಅದನ್ನು ವಿಸ್ತಾರವಾಗಿ ಮುಂದೆ ಕೊಡುವೆವು. ಸದ್ಯಕ್ಕೆ ನೆನಪಿನಲ್ಲಿಡತಕ್ಕ ಸಂಗತಿಯೇನೆಂದರೆ, ಈ ಸಂಸ್ಥೆಗಳಿಂದ ಹೊರಡುವ ಮಾಸಪತ್ರಿಕೆಗಳನ್ನು ಸಂಶೋಧಕರು ಆದಷ್ಟು ಮಟ್ಟಿಗೆ ಸಂಗ್ರಹಿಸಬೇಕೆಂಬುದು.

೧೮೭೨ನೆಯ ಇಸವಿಯಲ್ಲಿ ಡಾ. ಬರ್ಗೆಸ್ ಎಂಬೊಬ್ಬ ವಿದ್ವಾಂಸರು ಇಂಡಿಯನ್ ಆಂಟಿಕ್ವೆರಿ (Indian Antiquary) ಎಂಬ ಸ್ವತಂತ್ರ ವಾದ ಮಾಸಪತ್ರಿಕೆಯನ್ನು ತೆಗೆದರು. ಅಂದಿನಿಂದ ಪುರಾಣವಸ್ತು

ಸಂಶೋಧನ ವಿಷಯಕವಾದ ಲೇಖಗಳೆಲ್ಲವೂ ಈ ಮಾಸಪತ್ರಿಕೆಯ-ಲ್ಲಿಯೇ ಹೆಚ್ಚಾಗಿ ಬರುತ್ತವೆ. ಈ ಮಾಸಪತ್ರಿಕೆಯಲ್ಲಿ ಶಿಲಾಲಿಪಿ ಮುಂತಾದವುಗಳ ವಿಷಯಕ್ಕೆ ಲೇಖಗಳು ಬಂದಂತೆ ಮಿಕ್ಕ ವಿಷಯ ಗಳ ಸಂಬಂಧದಿಂದಲೂ ಲೇಖಗಳು ಬರುತ್ತವೆ. ಆದರೆ ಲಿಪಿಗಳನ್ನು ಸಂಶೋಧಿಸುವ ಕೆಲಸವು ಬೆಳೆದುದರಿಂದ ಸರಕಾರದವರು ಈ ಇಂಡಿ ಯನ್ ಆಂಟಿಕ್ವರಿ (Indian Antiquary) ಮಾಸಪತ್ರಿಕೆಯ ಜೊತೆಗೇ ಎಪಿಗ್ರಾಫಿಯಾ ಇಂಡಿಕಾ (Epigraphia Indica) ಎಂಬ ಸ್ವತಂತ್ರವಾದ ಪತ್ರಿಕೆಯನ್ನು ೧೮೯೧ನೆಯ ಇಸ್ವಿಯಿಂದ ಹೊರಡಿಸ ಹತ್ತಿರುವರು. ಇದರಲ್ಲಿ ಕೇವಲ ಲಿಪಿಗಳೇ ದೊರೆಯುತ್ತವೆ. ಇವೆರಡು ಪತ್ರಿಕೆಗಳು ಇನ್ನೂ ನಡೆಯುತ್ತವೆ. ಇವು ಸಂಶೋಧಕರಿಗೆ ಅವಶ್ಯ ವಾದ ಪುಸ್ತಕಗಳು.

ಮೈಸೂರ ಸರಕಾರದವರಂತೂ ತಮ್ಮ ಪ್ರಾಂತದ ಶಿಲಾಲಿಪಿ ಮುಂತಾದವುಗಳನ್ನು ಸಂಪೂರ್ಣವಾಗಿ ಸಂಶೋಧಿಸಿ ಅಚ್ಚುಹಾಕಿದ್ದಾರೆ. ಈಗ ೧೯೧೭ರ ವರೆಗೆ ಒಟ್ಟು ೧೨ ಪುಸ್ತಕಗಳು ಹೊರಬಿದ್ದಿವೆ. ಇದಲ್ಲದೆ ಆ ಖಾತೆಯವರು ಪ್ರತಿವರುಷವೂ ಹೊಸ ಶೋಧಗಳನ್ನು ಮಾಡುತ್ತಿ ದ್ದಾರೆ. ಅವೆಲ್ಲಾ ಪುಸ್ತಕಗಳೂ ನಮ್ಮ ಇತಿಹಾಸಕ್ಕೆ ಸಂಬಂಧಪಟ್ಟವು ಗಳೇ ಆಗಿರುವದರಿಂದ ಅವೆಲ್ಲವೂ ಓದತಕ್ಕವುಗಳೇ.

ಇತ್ತಿತ್ತ ತಿರುವಾಂಕೂರು ಮತ್ತು ನಿಜಾಮ ಸರಕಾರದವರೂ ಈ ಪುರಾಣ ವಸ್ತು ಸಂಶೋಧನದ (Archaeology) ಬೇರೆ ಖಾತೆಯನ್ನೇ ನಿರ್ಮಿಸಿದ್ದಾರೆ. ನಿಜಾಮ ಇಲಾಖೆಯಲ್ಲಿಯೂ ಹೊಸದಾಗಿ ಈ ಸಂಬಂಧ ದಿಂದ ಒಂದು ಖಾತೆಯು ನಿರ್ಮಿತವಾಗಿದೆ.

ಇನ್ನು ಈ ವಿಷಯವನ್ನು ನಮ್ಮ ಸರಕಾರದವರು ಹೇಗೆ ಕೈಕೊಂಡ ರೆಂಬುದನ್ನು ಇಲ್ಲಿ ಸಂಕ್ಷೇಪವಾಗಿ ಕೊಡುವೆವು. ಪುರಾಣವಸ್ತು ಸಂಶೋ-ಧನಕ್ಕೆ (Archaeology) Dr. Burgess ಇವರ ಇಂಪೀರಿಯಲ್ ಸೀರಿಸ್ (Imperial Series) ಮತ್ತು ಜನರಲ್ ಕನ್ನಿಂಗಹ್ಯಾಮ್ (Ganeral Cunningham) ಇವರ ಡಿಸ್ಟ್ರಿಕ್ಟ ರಿಪೋರ್ಟ (District Reports) ಇವೇ ಮೊದಲನೆಯ ಪುಸ್ತಕಗಳು. ಆದರೆ ಡಾ. ಬರ್ಗೆಸ್

'(Dr. Burgess) ಇವರು ಈ ವಿಷಯವನ್ನು ಸಂಶೋಧಿಸುವ ಉದ್ದೇಶದಿಂದಲೇ ನೇಮಿಸಲ್ಪಟ್ಟಿದ್ದರೂ, ಅವರು ಇಡೀ ಹಿಂದುಸ್ಥಾನದಲ್ಲಿ ಕೆಲಸ ಮಾಡಲಿಲ್ಲ. ದಿ ಬುದ್ಧಿಸ್ಟ ಕೇವ್ಹ್ಸ್ ಆಫ್ ವೆಸ್ಟರ್ನ ಇಂಡಿಯಾ ಮತ್ತು ದಿ ಆಂಟಿಕ್ವಿಟಿಸ್ ಆಫ್ ಬೀದರ ಆ್ಯಂಡ ಔರಂಗಾಬಾದ ಡಿಸ್ಟ್ರಿಕ್ಟ (The Buddist Caves of Western India; The antiquities of Bider-Aurangabad Districts) ಇವೇ ಮುಂತಾದ ಅವರ ಪುಸ್ತಕಗಳ ಮೇಲಿಂದ ನಾವು ಮೇಲೆ ಹೇಳಿದ್ದರ ಸತ್ಯತೆಯು ಕಂಡು ಬರುವದು. ಅವರ ರಿಪೋರ್ಟುಗಳು ಕಾಲಕಾಲಕ್ಕೆ ಹೊರಡುತ್ತಿರಲಿಲ್ಲ. ಸಾಕಷ್ಟು ಸಲಕರಣೆಗಳು ಕೂಡಿದ ನಂತರ ಒಂದೊಂದು ಪುಸ್ತಕವು ಬೈಲಿಗೆ ಬರುತ್ತಿತ್ತು. ೧೮೭೪ನೇ ಇಸವಿಯಿಂದ ೧೯೦೨ನೇ ಇಸವಿಯ ವರೆಗೆ ಅಂದರೆ ೨೮ ವರ್ಷಗಳಲ್ಲಿ ೩೨ ಪುಸ್ತಕಗಳು ಹೊರಬಿದ್ದಿರುತ್ತವೆ. ಅದಕ್ಕೆ ವ್ಯಾಲ್ಯುಮ್ಸ ಆಫ್ ದಿ ಇಂಪೀರಿಯಲ್ ಸಿರೀಸ್ (Volumes of the Imperial series) ಎಂದೆನ್ನುತ್ತಾರೆ. ಒಮ್ಮೊಮ್ಮೆ ೫ ವರ್ಷಕ್ಕೊಮ್ಮೆ ಒಂದು ಪುಸ್ತಕವು ಹೊರಟಿತು. ಒಮ್ಮೊಮ್ಮೆ ಒಂದೇ ವರ್ಷದಲ್ಲಿ ೫ ಪುಸ್ತಕಗಳು ಹೊರಬಿದ್ದವು. ಡಾ. ಬರ್ಗೆಸ್ (Dr. Burgess ಇವರ ಜೊತೆಗೆ ಮತ್ತೆ ೯ ಜನರು ಕೆಲಸ ಮಾಡುವವರಿದ್ದರು. ಆದರೆ, ಈ ೩೨ ಪುಸ್ತಕಗಳಲ್ಲಿ ಡಾ. ಬರ್ಗೆಸ್ (Dr. Burgess) ಇವರೊಬ್ಬರೇ ಬರೆದಿರುತ್ತಾರೆ.

ಜನರಲ್ ಕನಿಂಗಹ್ಯಾಮ್ (General Cunningham) ಇವರ ಡಿಸ್ಟ್ರಿಕ್ ರಿಪೋರ್ಟುಗಳೆಂದರೆ, ಇವರು ತಮ್ಮ ಪ್ರವಾಸದಲ್ಲಿ ತೆಗೆದುಕೊಂಡ ಟಿಪ್ಪಣಿಗಳು. ೧೮೬೨ರಿಂದ ೧೮೮೪ರ ವರೆಗೆ ಇಂಥ ರಿಪೋರ್ಟುಗಳು ಮುದ್ರಿಸಲ್ಪಟ್ಟಿವೆ. ಇವು ಡಾ. ಬರ್ಗೆಸ್ (Dr. Burgess) ಇವರ ರಿಪೋರ್ಟುಗಳಿಗಿಂತ ಹೆಚ್ಚು ವಿಸ್ತೃತವಾಗಿರುತ್ತವೆ. ಆದರೆ ಇವರ ರಿಪೋರ್ಟುಗಳು, ಮಧ್ಯ ಮತ್ತು ಉತ್ತರ ಹಿಂದುಸ್ತಾನಕ್ಕೆ ಸಂಬಂಧಿಸಿರುತ್ತವೆ. ಆದುದರಿಂದ ಕರ್ನಾಟಕದ ಇತಿಹಾಸದ ವಿಷಯವಾಗಿ ಪ್ರತ್ಯಕ್ಷವಾಗಿ ಏನೂ ಮಾಹಿತಿಯು ಈ ಬರ್ಗೆಸ್ ಮತ್ತು ಕನಿಂಗಹ್ಯಾಮ್ ಇವರ ರಿಪೋರ್ಟುಗಳಲ್ಲಿ ಸಿಕ್ಕುವದಿಲ್ಲ.

ಸರಕಾರದವರು ಪುರಾತನವಸ್ತುಸಂಶೋಧನ ವಿಷಯಕ್ಕಾಗಿ ಎಲ್ಲಕ್ಕೂ ಮೊದಲು ಮಾಡಿದ ಪ್ರಯತ್ನವೆಂದರೆ ೧೮೬೨ನೆಯ ಇಸ್ವಿಯಲ್ಲಿ ಜನರಲ್ ಕನಿಂಗಹ್ಯಾಮ್ (General Cunningham) ಇವರನ್ನು ಡಾಯರೆಕ್ಟರ್ ಆಫ್ ಆರ್ಕಿಆಲಾಜಿ (Director of archaeology) ಎಂಬ ಹುದ್ದೆಗೆ ನೇಮಿಸಿದುದು. ಅಂದಿನಿಂದಲೇ ನಮ್ಮ ಸರಕಾರದ ಈ ಖಾತೆಗೆ ಪ್ರಾರಂಭವಾಗಿರುತ್ತದೆ. ಅವರನ್ನು ನೇಮಿಸುವಾಗ ಈ ಶಾಖೆಯನ್ನು ಶಾಶ್ವತವಾಗಿ ಇಡುವದು ಸರಕಾರದವರ ಉದ್ದೇಶವಿರಲಿಲ್ಲವೆಂಬುದು ಈ ಮುಂದಿನ ಉದ್ಗಾರಗಳ ಮೇಲಿಂದ ಗೊತ್ತಾಗುವದು.

"To make an accurate description of such remains as most deserve notice with the history of them, so far as it is traceable and record the traditions that are retained regarding them."

ಸಾರಾಂಶ— 'ಐತಿಹಾಸಿಕ ಅವಶೇಷಗಳನ್ನು ಅವುಗಳ ಇತಿಹಾಸ ಸಹಿತವಾಗಿ ಗೊತ್ತಿದ್ದ ಮಟ್ಟಿಗೆ ಚನ್ನಾಗಿ ವರ್ಣಿಸಿ, ಅವುಗಳ ವಿಷಯಕ್ಕೆ ಪ್ರಚಲಿತವಿರುವ ದಂತಕಥೆಗಳನ್ನು ಸಂಗ್ರಹಿಸುವುದು' ಎಂದು ಸರಕಾರದವರು ಗೊತ್ತುಪಡಿಸಿದ್ದರು. ಆದರೆ ೧೮೬೨ ರಿಂದ ೧೮೭೧ ರವರೆಗೆ ಕೆಲಸ ಮಾಡಿದರೂ ಈ ಕೆಲಸವು ಮುಗಿಯದಿದ್ದುದರಿಂದ ಆ ವರ್ಷ ಡಾಯರೆಕ್ಟರ ಜನರಲ್ ಆಫ್ ಆರ್ಕಿಆಲಾಜಿಕಲ್ ಸರ್ವೆ ಆಫ್ ಇಂಡಿಯಾ (Director General of Archaeological Survey of India) ಎಂಬುದೊಂದು ಹೊಸ ಹುದ್ದೆಯು ನಿರ್ಮಿತವಾಗಿ; ಅವನು ಮುಂದೆ ಹೇಳಿದಂತೆ ಕೆಲಸ ಮಾಡತಕ್ಕುದೆಂದು ಗೊತ್ತಾಯಿತು. ಅದೇನೆಂದರೆ—

"To superintend a complete search over the whole country and make a systematic record and description of all architectural and other remains that are remarkable alike for their entiquity, or their beauty of their historical interest."

ಸಾರಾಂಶ— ದೇಶದಲ್ಲೆಲ್ಲ ಸಂಚರಿಸಿ ಪ್ರಾಚೀನತೆ, ಸೌಂದರ್ಯ ಅಥವಾ ಐತಿಹಾಸಿಕ ಮಹತ್ವ ಇವುಗಳ ಬಗ್ಗೆ ಖ್ಯಾತಿಗೊಂಡಿರುವ, ಶಿಲ್ಪ ಕಲೆಯ ಮತ್ತು ಮಿಕ್ಕ ಅವಶೇಷಗಳನ್ನು ಸಂಗ್ರಹಿಸುವದೂ ಚೆನ್ನಾಗಿ ಅವುಗಳ ವರ್ಣನೆಯನ್ನು ಬರೆಯುವದು. ಆದರೆ ಈ ಮೇರೆಗೆ ಇಡೀ ಹಿಂದುಸ್ಥಾನದಲ್ಲಿ ಅವರು ಅನೇಕ ಕೆಲಸ ಮಾಡಬೇಕೆಂದು ಗೊತ್ತಾದರೂ ಅವರು ಪ್ರಾಯಶಃ ಉತ್ತರ ಹಿಂದುಸ್ತಾನದಲ್ಲಿ ಮಾತ್ರವೇ ಕೆಲಸ ಮಾಡಿರುತ್ತಾರೆ.

ಮುಂಬಯಿ ಮದ್ರಾಸ ಇಲಾಖೆಗಳಲ್ಲಿ ೧೮೭೪ನೆಯ ಇಸವಿಯ ವರೆಗೆ ಆರ್ಕಿಆಲಾಜಿಕಲ್ ಸರ್ವೆ (Archaeological Survey) ಗೆ ಪ್ರಾರಂಭವಾಗಲಿಲ್ಲ. ಆಗ ಎಂದರೆ ೧೮೭೪ನೆಯ ಇಸ್ವಿಯಲ್ಲಿ ಇವೆರಡೂ ಇಲಾಖೆಗಳು ಡಾ. ಬರ್ಗೆಸ್ (Dr. Burgess) ಇವರ ವಶಕ್ಕೆ ಪ್ರತ್ಯೇಕವಾಗಿಯೇ ಒಪ್ಪಿಸಲ್ಪಟ್ಟವು. ಆಗ ಹಳೆಯ ಇಮಾರತುಗಳನ್ನು ರಕ್ಷಿಸುವುದು, ಅಥವಾ ದುರಸ್ತ ಮಾಡುವುದು ಇವರ ಕೆಲಸವಾಗಿರಲಿಲ್ಲ. ಅದು ಪ್ರಾಂತಿಕ ಸರಕಾರದವರ ಕೆಲಸವೆಂದು ಸರಕಾರದವರ ತಿಳುವಳಿಕೆಯಾಗಿತ್ತು. ಪ್ರಾಂತಿಕ ಸರಕಾರದವರ ಲಕ್ಷದಲ್ಲಿ ಈ ಕಟ್ಟಡಗಳ ಸಂರಕ್ಷಣೆಯ ವಿಷಯವು ಚೆನ್ನಾಗಿ ಬಾರದುದೇನೂ ಆಶ್ಚರ್ಯವಲ್ಲ. ಆದ್ದರಿಂದ, ದೊಡ್ಡ ದೊಡ್ಡ ಸುಂದರವಾದ ಕಟ್ಟಡಗಳು ಕೂಡ ಬಿದ್ದು ಹೋಗಹತ್ತಿದುವು. ಈ ಮಾತು ಲಾರ್ಡ್ ಲಿಟನ್ (Lord Lytton) ಇವರ ಲಕ್ಷದಲ್ಲಿ ೧೮೭೮ ನೆಯ ಇಸ್ವಿಯಲ್ಲಿ ಮೊದಲಿಗೆ ಬಂದಿತು. ಅವರು ಹೇಳಿದ್ದೇನಂದರೆ—

"The preservation of the National Antiquities and work of art ought not to be exclusively left to the charge of Local Governments, which may not always be alive to the impartance of such a duty Lieut-Governers who combine aesthetic culture with administrative energy are not likely to be very common and I cannot conceive any claim upon the administrative initative &

financial resources of the supreme Government more essentially imperial than this. "

ಸಾರಾಂಶ:— " ರಾಷ್ಟ್ರೀಯ ಪುರಾತನ ವಸ್ತುಗಳನ್ನು ಸಂರಕ್ಷಿಸುವ ಕಾರ್ಯವನ್ನು ಸ್ಥಾನಿಕ ಸರಕಾರಗಳ ಕಡೆಗೆ ಒಪ್ಪಿಸುವದು ಯೋಗ್ಯವಾಗಲಾರದು. ಯಾಕೆಂದರೆ ಅವರಿಗೆ ಅವುಗಳ ಮಹತ್ವವು ಚೆನ್ನಾಗಿ ಲಕ್ಷ್ಯದಲ್ಲಿ ಬರುವ ಸಂಭವವಿಲ್ಲ. ಸೌಂದರ್ಯದ ಅಭಿರುಚಿ, ರಾಜಕಾರಸ್ಥಾನದ ಶಕ್ತಿ ಇವೆರಡೂ ಉಳ್ಳ ಲೆಫ್ಟಿನೆಂಟ ಗವರ್ನರ ಜನರು ತೀರ ಕಡಿಮೆ. ಇದಲ್ಲವೆ ಇದು ವರಿಷ್ಠ ಸರಕಾರದವರು ತಾವೇ ಕೈಕೊಂಡು ತಮ್ಮ ಹಣವನ್ನು ವೆಚ್ಚ ಮಾಡಿ ಮಾಡತಕ್ಕ ವಿಷಯವು. " ಇದರ ಪರಿಣಾಮವೇನಾಯಿತೆಂದರೆ— ಮುಂದೆ ಕ್ಯುರೇಟರ ಆಫ್ ಏನ್ಸೆಂಟ್ ಮೊನ್ಯೂಮೆಂಟ್ಸ (Curator of ancient Monuments) ಎಂಬ ಅಧಿಕಾರಿಯು ನೇಮಿಸಲ್ಪಡಬೇಕೆಂದು ಹಿಂದುಸ್ಥಾನ ಸರಕಾರದವರು ಇಂಗ್ಲಂಡಿಗೆ ಸೂಚಿಸಿದರು. ಅದಕ್ಕೆ ಆಗ ಸೆಕ್ರೆಟರಿ ಆಫ್ ಸ್ಟೇಟ (Secretary of State) ಇವರು ಒಪ್ಪಲಿಲ್ಲ. ಮುಂದೆ ೧೮೮೧ನೆಯ ಇಸವಿಯಲ್ಲಿ ಮಾತ್ರ ಮೇಜರ್ ಕೋಲ್ (Major Kole, R. E.) ಇವರು ಕ್ಯುರೇಟರ್ ಆಫ್ ಏನ್ಸೆಂಟ ಮಾನ್ಯುಮೆಂಟ್ಸ (Curator of ancient monuments) ಎಂಬ ಹುದ್ದೆಯ ಮೇಲೆ ಮೂರು ವರ್ಷಗಳ ಮಟ್ಟಿಗೆ ನೇಮಕವಾದರು. ಅವರು ತಮ್ಮ ಕೆಲಸವನ್ನು ಮೂರು ಪುಸ್ತಕಗಳ ರೂಪದಿಂದ ಪ್ರಕಟಿಸಿದರು. ಅವಕ್ಕೆ ಮೇಜರ ಕೋಲ್ ಇವರ ಮೂರು ವಾಲ್ಯುಮುಗಳು (Major Kole's three Volumes) ಎಂಪೆನ್ನುತ್ತಾರೆ. ಇದಲ್ಲದೆ, ಪ್ರಿಝರ್ವೇಶನ್ ಆಫ್ ನ್ಯಾಶನಲ್ ಮೊನ್ಯುಮೆಂಟ್ಸ್ (Preservation of National Monuments in India) ಎಂಬ ರಿಪೋರ್ಟುಗಳನ್ನು ಬರೆದರು. ಈ ರಿಪೋರ್ಟುಗಳು ಬಹಳ ಮಹತ್ವವುಳ್ಳವುಗಳಾಗಿವೆ.

೧೮೮೫ನೆಯ ಇಸವಿಯಲ್ಲಿ ಜನರಲ್ ಕನಿಂಗಹ್ಯಾಮ್ (Ganeral Cunningham) ಇವರು ಕೆಲಸದಿಂದ ನಿವೃತ್ತರಾದರು. ಆಗ ಡಾ. ಬರ್ಗೆಸ್ (Dr. Burgess) ಇವರು ಆ ಕೆಲಸಕ್ಕೆ ನೇಮಿಸಲ್ಪಟ್ಟರು.

ಆಗ ಒಟ್ಟು ಐದು ಸರ್ವೆ ಕ್ಷೇತ್ರಗಳು ಮಾಡಲ್ಪಟ್ಟವು. (೧) ಮದ್ರಾಸ, (೨) ಮುಂಬಯಿ, (೩) ಪಂಜಾಬ (ಸಿಂಧ ಮತ್ತು ರಾಜಪುತಸ್ಥಾನ ಸಹಿತ) (೪) ವಾಯವ್ಯ ಪ್ರಾಂತ (ಮಧ್ಯಪ್ರಾಂತ ಸಹಿತ). (೫) ಬಂಗಾಲ (ಆಸಾಮ ಸಹಿತ).

ಇಷ್ಟಾದರೂ ಈ ಖಾತೆಯನ್ನು ಕಾಯಂ ಮಾಡುವ ವಿಚಾರವು ಸ್ಥಿರವಾಗಲಿಲ್ಲ. ಡಾ. ಹೂಲ್‌ಝು (Dr. Hultzch) ಎಂಬವರು ೧೮೮೬ನೆಯ ಇಸವಿಯಲ್ಲಿ ಎಪಿಗ್ರಾಫಿಸ್ಟ (Epigraphist) ಅಂದರೆ ಶಿಲಾಲಿಪಿಗಳ ಶೋಧನ ಕೆಲಸಕ್ಕೆ ನೇಮಿಸಲ್ಪಟ್ಟಿದ್ದರು. ಆದರೆ ೧೮೮೯ನೆಯ ಇಸವಿಯಲ್ಲಿ ಅವರು ಕೆಲಸದಿಂದ ನಿವೃತ್ತರಾದೊಡನೆಯೇ ಈ ಖಾತೆಯಲ್ಲಿ ಅವ್ಯವಸ್ಥೆಯಾಯಿತು. ಏಕೆಂದರೆ, ಅದೇ ಕಾಲಕ್ಕೆ ಸರಕಾರದವರು ಖರ್ಚು ಕಡಿಮೆ ಮಾಡುವ ಧೋರಣವನ್ನು ಸ್ವೀಕರಿಸಿದ್ದರು. ಆದ್ದರಿಂದ ಡಾಯರೆಕ್ಟರ ಜನರಲ್ ಆಫ್ ಆರ್ಕಿಆಲಾಜಿ (Director General of archaeology) ಯ ಹುದ್ದೆಗೆ ಯಾರನ್ನೂ ನೇಮಿಸಲೇ ಇಲ್ಲ. ಆದ್ದರಿಂದ ೧೮೮೦ ರಿಂದ ೧೮೯೫ ರ ವರೆಗೆ ಈ ಖಾತೆಯಲ್ಲಿ ವಿಶೇಷ ಕೆಲಸವೇನೂ ಆಗಲಿಲ್ಲ.

೧೮೯೫ನೆಯ ಇಸವಿಯಲ್ಲಿ ಪುನಃ ವಿಚಾರ ನಡೆಯಿತು. ಮೂರು ವರ್ಷ ವಿಚಾರ ನಡೆದು, ೧೮೯೭ನೆಯ ಇಸವಿಯಲ್ಲಿ ಕಾನ್ಸರ್ವೇಶನ್ (Conservation) ಎಂದರೆ ಕಟ್ಟಡ ಮುಂತಾದವುಗಳನ್ನು ರಕ್ಷಿಸುವ ಕೆಲಸವು ರೀಸರ್ಚ (Research) ಎಂದರೆ ಹೊಸ ಶೋಧಕ್ಕಿಂತ ಮಹತ್ವದ ಕೆಲಸವೆಂದು ನಿರ್ಧರಿಸಲ್ಪಟ್ಟಿತು. ಆಗ ಪುನಃ ಐದು ಸರ್ವೇಕ್ಷೇತ್ರಗಳು ಏರ್ಪಟ್ಟುವು. (೧) ಮದ್ರಾಸ (ಕೊಡಗು ಸಹಿತ), (೨) ಮುಂಬಯಿ (ಸಿಂಧ ಮತ್ತು ವರ್ಹಾಡ ಸಹಿತ), (೩) ಪಂಜಾಬ (ಬಲೂಚಿಸ್ಥಾನ, ಅಜಮೀರ ಇವುಗಳು ಸಹಿತ), (೪) ವಾಯವ್ಯ ಪ್ರಾಂತ (ಮಧ್ಯಪ್ರಾಂತ ಸಹಿತ), (೫) ಬಂಗಾಲ (ಆಸಾಮ ಸಹಿತ) ಈ ಇಲಾಖೆಗಳೇ ಇನ್ನೂ ಇರುತ್ತವೆ. ಪ್ರತಿಯೊಂದು ಇಲಾಖೆಯ ಮುಖ್ಯಸ್ಥನ ವೇತನವು ಹಿಂದುಸ್ಥಾನ ಸರಕಾರದಿಂದ ಕೊಡಲ್ಪಡುತ್ತದೆ. ಆದರೆ ಅವನು ಪ್ರಾಂತಿಕ ಸರಕಾರಕ್ಕೆ ತಾಬೇದಾರನಾಗಿರುತ್ತಾನೆ.

೧೮೯೦ನೆಯ ಇಸವಿಯಲ್ಲಿ ಲಾರ್ಡ ಕರ್ಝನರು ಈ ವಿಷಯದಲ್ಲಿ ಒಂದು ಹೊಸ ಘಟನೆಯನ್ನು ಸಿದ್ಧಮಾಡಿದಾಗ ಡಾಯರೆಕ್ಟರ ಜನರಲ್ (Director General) ರವರು ಐದು ವರ್ಷಗಳ ವರೆಗೆ ನೇಮಿಸಲ್ಪ-ಟ್ಟರು. ಇಷ್ಟು ದಿವಸ ದೇಶೀ ಸಂಸ್ಥಾನಗಳನ್ನು ಈ ಕಾರ್ಯಕ್ಷೇತ್ರದಲ್ಲಿ ಸೇರಿಸಿರಲಿಲ್ಲ. ಆದರೆ ೧೯೦೧ ನೆಯ ಜೂನ ೪ ರಲ್ಲಿ ಹೊಸ ಹುಕುಮು ಹೊರಟು ದೇಶೀ ಸಂಸ್ಥಾನಗಳೂ ಈ ಖಾತೆಗೆ ಕೂಡಿಸಲ್ಪಟ್ಟುವು. ೧೯೦೧-೧೯೦೨ರಲ್ಲಿ ಆರ್ಕಿಆಲಾಜಿಕಲ್ ಸರ್ವೆ ಆಫ್ ಇಂಡಿಯಾ ವಾರ್ಷಿಕ ರಿಪೋರ್ಟು (Archaeological Survey of India Annual Reports) ಗಳು ಪ್ರಾರಂಭವಾದವು. ಮೊದಲನೆಯ ರಿಪೋರ್ಟು ಅಂದರೆ ೧೯೦೧-೧೯೦೨ ನೆಯ ಇಸವಿಯ ರಿಪೋರ್ಟು ೧೯೦೪ ರಲ್ಲಿ ಮುದ್ರಿತ ವಾಗಿರುತ್ತದೆ. ಆಗಿನಿಂದ ಈ ರಿಪೋರ್ಟುಗಳು ಪ್ರತಿ ವರ್ಷ ಹೊರ ಡುತ್ತಿದ್ದು ಇದರಲ್ಲಿ ಇಡೀ ಹಿಂದುಸ್ಥಾನದಲ್ಲಿ ಆಯಾ ವರ್ಷದಲ್ಲಿ ಆದ ಕೆಲಸದ ಮಾಹಿತಿಯು ಸಂಗ್ರಹಿಸಲ್ಪಟ್ಟಿರುವದರಿಂದ ಈ ರಿಪೋರ್ಟು ಗಳು ಬಹಳ ಮಹತ್ವವುಳ್ಳವುಗಳಾಗಿವೆ, ಇದಲ್ಲದೆ, ಪ್ರತಿಯೊಂದು ಇಲಾಖೆಯವರು ತಮ್ಮ ತಮ್ಮ ಚಿಕ್ಕ ಚಿಕ್ಕ ರಿಪೋರ್ಟುಗಳನ್ನು ಮುದ್ರಿಸುತ್ತಿರುವರು. ಈ ವಿಷಯದಲ್ಲಿ ಲಾರ್ಡ ಕರ್ಝನ ಸಾಹೇಬರು ತೆಗೆದ ಉದ್ಗಾರಗಳು ಲಕ್ಷದಲ್ಲಿಡತಕ್ಕವಾಗಿವೆ. ಅವೇ-ನೆಂದರೆ—

"It it in the exploration and study of purely Indian remains, in the probing of archaic mounds, in the excavation of old Indian cities, and in the copying and reading of ancient inscriptions that a good deal of Indian History is Known to us, and can be read by all; but a curtain of dark and romantic mystry hangs over the earlier chapters, of which we are only slowly beginning to lift the corners."

ಸಾರಾಂಶ:— ಐತಿಹಾಸಿಕ ಅವಶೇಷಗಳನ್ನೂ ಕೃತ್ರಿಮ ದಿನ್ನೆ-

ಗಳನ್ನೂ ಸಂಶೋಧಿಸಿ ಅಭ್ಯಾಸ ಮಾಡುವದರಿಂದಲೂ ಪುರಾತನ ಪಟ್ಟಣಗಳನ್ನು ಅಗಿದು ನೋಡುವದರಿಂದಲೂ ಶಿಲಾಲಿಪಿಗಳನ್ನು ಮುದ್ರಿಸಿ ಅವನ್ನು ಓದಿ ತಿಳಿದುಕೊಳ್ಳುವದರಿಂದಲೂ, ನಮಗೆ ಹಿಂದು ಸ್ಥಾನ ದೇಶದ ಎಷ್ಟೋ ಇತಿಹಾಸವು ಗೊತ್ತಾಗಿದೆ. ಮತ್ತು ಇನ್ನೂ ಹೆಚ್ಚಿಗೆ ಗೊತ್ತಾಗುವ ಸಂಭವವಿದೆ. ಶೀರ ಪ್ರಾಚೀನ ಸಂಗತಿಗಳ ಮೇಲೆ ಇನ್ನೂ ಬಲವಾದ ಕಟ್ಟುಕಥೆಗಳ ಮುಸುಕಿನ ತೆರೆಯು ಬಿದ್ದಿದೆ. ಈಗೀಗ ಮಾತ್ರ ಆ ಮುಸುಕಿನ ತೆರೆಯು ಮೂಲೆಗಳೇನೋ ತೆರೆಯಲಾರಂಭಿಸಿವೆ." ಇದೇ ವಿಷಯವಾಗಿ ಅವರು ಮತ್ತೂ ಹೇಳಿರುವುದೇನೆಂದರೆ:—

"We owe duty to our fore runners as well as to our contemporaries, and to our decendents-nay-our duty to the two latter classes in itself demands, the recognition of an obligation to the former, since, we are the custodians of our own age, or that which has been bequeathed to us by an earlier; and since posterity will rightly blame us if owing to our neglect. they failed to reap the same advantages, that we have been privileged to enjoy; moreover how can we expect at the hands of futurity any consideration for the productions of our own time if indeed any are worthy of such. unless we have ourselves shown a like respect to the hand work which our predecessors produced.

ಸಾರಾಂಶ— ನಮ್ಮ ಪೂರ್ವಜರ ಸರೀಕರವರ ಮತ್ತು ವಂಶಜರ ಸಂಬಂಧದಿಂದ ನಾವು ಮಾಡ್ತತಕ್ಕದ್ದೊಂದು ಕರ್ತವ್ಯವಿದೆ— ಅಲ್ಲಿ, ಕೊನೆಯ ಇಬ್ಬರ ವಿಷಯವಾಗಿ ನಾವು ಮಾಡಬೇಕಾಗಿರುವ ಕರ್ತವ್ಯವೇ ನಾವು ನಮ್ಮ ಪೂರ್ವಜರ ವಿಷಯವಾಗಿ ಮಾಡತಕ್ಕ ಕರ್ತವ್ಯವಾವುದೆಂಬುದನ್ನು ತೋರಿಸಿಕೊಡುತ್ತದೆ. ಏಕೆಂದರೆ ನಮ್ಮ ಹಿಂದಿನವರು ಮಾಡಿದ ಕೆಲಸಗಳ ಇಡಿಗಂಟು ನಮ್ಮ ಕಡೆಗೆ ಬಂದಿರುತ್ತದೆ. ಅದನ್ನು ನಾವು

ಯೋಗ್ಯ ರೀತಿಯಿಂದ ನಮ್ಮ ವಂಶಜರಿಗೆ ಒಪ್ಪಿಸದಿದ್ದ ಮೂಲಕ ನಾವು ಅನುಭೋಗಿಸುವ ಅದರ ಲಾಭಗಳಿಗೆ ಅವರು ಎರವಾದರೆ ಆ ದೋಷಕ್ಕೆ ನಾವು ಪಾತ್ರರಲ್ಲವೇ? ಇದೂ ಅಲ್ಲದೆ, ನಾವೇ ನಮ್ಮ ಪೂರ್ವಜರ ಕೃತಿಗಳ ಬಗ್ಗೆ ಯೋಗ್ಯವಾದ ಅಭಿಮಾನವನ್ನು ತಾಳದಿದ್ದರೆ ನಮ್ಮ ಕೃತಿಗಳ ಬಗ್ಗೆ ( ಅಂಥ ಅಭಿಮಾನ ತಾಳಲಿಕ್ಕೆ ಯೋಗ್ಯವಾದವುಗಳು ಇದ್ದರೆ ) ನಮ್ಮ ವಂಶಜರು ಅಭಿಮಾನ ತಾಳಿಯಾರೆಂದು ಆಶಿಸುವುದು ಹೇಗೆ ?

ಈ ಪ್ರಕಾರವಾಗಿ, ಇತಿಹಾಸದ ಬಗ್ಗೆ ಯಾವ ಸಂಸ್ಥೆಗಳು ಹಿಂದಕ್ಕೆ ಪ್ರಯತ್ನಪಟ್ಟವೆಂಬುದನ್ನೂ ಈಗ ಯಾವವು ಪ್ರಯತ್ನ ಪಡುತ್ತಿರುವುವೆಂಬುದನ್ನೂ ಹೇಳಿದೆವು.

ಇನ್ನು ಅವರ ಪ್ರಯತ್ನಗಳ ಪರಿಣಾಮವು ಏನಾಗಿರುವುದೆಂಬುದರ ವಿಷಯಕ್ಕೆ, ಕರ್ನಾಟಕಕ್ಕೆ ಸಂಬಂಧಿಸಿದ ಸಂಗತಿಗಳನ್ನಷ್ಟೇ ವಿಶೇಷವಾಗಿ ಹೇಳುವೆವು.

ಈ ವಿಷಯವಾಗಿ ಎಲ್ಲಕ್ಕೂ ಮೊದಲು ವಿಶೇಷವಾಗಿ ಪ್ರಯತ್ನ ಮಾಡಿದವರೆಂದರೆ ಸರ್ ಜೇಮ್ಸ ಫರ್ಗ್ಯೂಸನ್ (೧೮೦೮-೧೮೮೬) ಎಂಬವರು. ಇವರು ೧೮೩೪ ನೆಯ ಇಸವಿಯಿಂದ ೧೮೪೫ ರ ವರೆಗೆ ಹಿಂದುಸ್ಥಾನದಲ್ಲೆಲ್ಲ ತಿರುಗಾಡಿ, ಗುಡ್ಡದಲ್ಲಿ ಕೊರೆದ ಗುಡಿಗಳನ್ನೂ, ಮಿಕ್ಕ ಕಟ್ಟಡಗಳನ್ನೂ ಶಾಸ್ತ್ರೀಯ ರೀತಿಯಿಂದ ಶೋಧನ ಮಾಡಿದರು. ಕೇವಲ ಇತಿಹಾಸ ದೃಷ್ಟಿಯಿಂದಲ್ಲದಿದ್ದರೂ ಶಿಲ್ಪಶಾಸ್ತ್ರ ದೃಷ್ಟಿಯಿಂದ ಇವರು ಇವುಗಳನ್ನು ಅವಲೋಕಿಸಿ ಪುಸ್ತಕವನ್ನು ಬರೆದರು. ಇವರು ನೋಡದೆ ಇದ್ದ ಕಟ್ಟಡಗಳೇ ಇಲ್ಲ. ರೇಲ್ವೆ ಸ್ಟೇಶನದಿಂದ ಬಹು ದೂರದಲ್ಲಿರುವ ಹಳ್ಳಿಪಳ್ಳಿಗಳಲ್ಲಿ ಸಹ ಹೋಗಿ ಇವರು ಕಟ್ಟಡಗಳ ಚಿತ್ರವನ್ನು ತೆಗೆದುಕೊಂಡು ಅದರಿಂದ ಇತಿಹಾಸಕ್ಕೆ ಹೇಗೆ ಸಹಾಯವಾಗುತ್ತದೆಂಬುದನ್ನು ಸಪ್ರಮಾಣವಾಗಿ ತೋರಿಸಿಕೊಟ್ಟಿರುವರು. ಇವರು ಕರ್ನಾಟಕದಲ್ಲಿ, ಬಾದಾಮಿ, ಐಹೊಳೆ, ಪಟ್ಟದಕಲ್ಲು, ಲಕ್ಕುಂಡಿ, ಇಟಗಿ ಮುಂತಾದ ಅನೇಕ ಸ್ಥಳಗಳನ್ನು ನೋಡಿ ಅಲ್ಲಿಯ ಕಟ್ಟಡಗಳನ್ನು ವರ್ಗೀಕರಿಸಿದ್ದಾರೆ. ಇವರ ಶೋಧದಿಂದಲೇ ಹುರುಪುಗೊಂಡು ರಾಯಲ್ ಏಶಿಯಾ

ಟಿಕ್ ಸೊಸಾಯಿಟಿಯವರು, ಇಂಗ್ಲಂಡಿನಲ್ಲಿಯ ಕೋರ್ಟ ಆಫ್ ಡಾಯ ರೆಕ್ಟರರಿಗೆ ಬರೆದು ಅಜಂತಾ ಗವಿಯೊಳಗಿನ ಚಿತ್ರಗಳನ್ನು ತೆಗೆಯಲಿಕ್ಕೆ ಹಚ್ಚಿದರು. ಆಮೇರೆಗೆ ರಾಬರ್ಟ ಗಿಲ್ ಎಂಬವರು ೧೨ ವರ್ಷ ಶ್ರಮ ಪಟ್ಟು ಅಜಂತೆಯೊಳಗಿನ ಚಿತ್ರಗಳನ್ನು ನಕ್ಷೆ ತೆಗೆದುಕೊಂಡರು. ಆದರೆ ಕನ್ನಡಿಗರ ದುರ್ದೈವದಿಂದ ಅವೆಲ್ಲವೂ ೧೮೬೬ನೆಯ ಡಿಶಂಬರ ತಿಂಗಳಲ್ಲಿ ಕ್ರಿಷ್ಟಲ್ ಪ್ಯಾಲೇಸಿಗೆ ಬೆಂಕಿಹತ್ತಿ ಸುಟ್ಟುಹೋದುವು. ೧೮೪೪ನೆಯ ಇಸವಿಯಲ್ಲಿ ಡಾ. ವುಯಿಲಸನ್ ಎಂಬವರ ಅಧ್ಯಕ್ಷತೆಯಲ್ಲಿ ಕೇವ್ಹ ಟೆಂಪಲ್ ಕಮಿಶನ್ ( Cave Temple Commission ) ನೇಮಿಸಲ್ಪಟ್ಟಿತು. ಈ ಕಮಿಶನದವರು ೧೮೫೦-೧೮೫೧ ಇಸವಿಗಳಲ್ಲಿ ಪಶ್ಚಿಮ ಹಿಂದುಸ್ಥಾನದಲ್ಲಿರುವ ಬೌದ್ಧರ ಬ್ರಾಹ್ಮಣರ ಮತ್ತು ಜೈನರ ಗವಿ-ಗುಡಿಗಳ ಮಠಗಳ ಅವಶೇಷಗಳ ವಿಷಯಕ್ಕೆ Two memoris of the cave temples and monastries and other ancient Buddhist, Brahmanical and Jain Remains of Western India ಎಂಬೆರಡು ಪುಸ್ತಕಗಳನ್ನು ಪ್ರಸಿದ್ಧ ಪಡಿಸಿದರು. ಮುಂದೆ ಸರ್ ಬಾರ್ಟಲ್ ಫ್ರೇರ್ ( Sir Bartle Frere ) ಇವರು ಮುಂಬಯಿ ಗವರ್ನರರಿದ್ದಾಗ ಇತ್ತ ಕಡೆಯ ಚಿತ್ರಗಳ ತಸಬೀರು ತೆಗೆಯುವದಕ್ಕಾಗಿ ಒಂದು ಕಮಿಟಿಯು ನೇಮಿಸಲ್ಪಟ್ಟಿತು. ಈ ಕಮಿಟಿಯವರು ಡಾ. ಫರ್ಗ್ಯುಸನ್ ಇವರ ಸಹಾಯದಿಂದ ಮೂರು ಪುಸ್ತಕಗಳನ್ನು ತೆಗೆದರು. ಅವು ಯಾವವೆಂದರೆ— (೧) ಅಹಮ್ಮದಾಬಾದ, (೨) ಬಿಜಾಪುರ, (೩) ಮೈಸೂರ ಮತ್ತು ಧಾರವಾಡ. ಡಾ. ಫರ್ಗ್ಯುಸನ್ ಇವರಿಗೆ ಸರಕಾರದವರ ಸಹಾಯವು ಇರಲಿಲ್ಲ. ಆದರೂ ಇವರು ಇಷ್ಟು ವಿಲಕ್ಷಣವಾದ ಕೆಲಸವನ್ನು ಮಾಡಿದುದು ನಿಜವಾಗಿಯೇ ಆಶ್ಚರ್ಯಕರವಾದ ಸಂಗತಿಯು. ಇವರು ಬರೆದ ಶಿಲ್ಪಕಲೆಯ ಇತಿಹಾಸ (" History of architecture ") ಎಂಬುದು ಈ ಹೊತ್ತಿಗೂ ಪ್ರಮಾಣ ಗ್ರಂಥವಾಗಿದೆ. ಸುಮಾರು ೬೦ ವರ್ಷಗಳ ಕೆಳಗೆ ಎಮ್. ವಿವೆನ್ ಡಿ, ಸೆಂಟ ಮಾರ್ಟಿನ್ ( M. Viven De St. Martin ) ಎಂಬವನು ಹುಏನ್‌ತ್ಸಾಂಗನು ಹಿಂದುಸ್ಥಾನದಲ್ಲಿ ಯಾವ ಹಾದಿಯಿಂದ

ಪ್ರವಾಸ ಮಾಡಿದನೆಂಬುದನ್ನು ಅವನ ಪುಸ್ತಕದ ಮೇಲಿಂದ ಗೊತ್ತು ಹಚ್ಚಿದನು. ಮುಂದೆ ಪ್ರೊ. ವ್ಹಿಲ್ಸನ್ (Prof. Wilson), ಕರ್ನಲ್ ಯೂಲ್ (Cyl. Yule) ಮತ್ತು ಜನರಲ್ ಕನಿಂಗಹ್ಯಾಮ ಮುಂತಾದವರೂ ಈ ವಿಷಯದಲ್ಲಿ ಸುಧಾರಣೆ ಮಾಡಿದರು.

ಆದರೆ ಹೀಗೆ ಅಲ್ಲೊಂದು ಇಲ್ಲೊಂದು ಪ್ರಯತ್ನಗಳು ವಿರಳವಾಗಿ ನಡೆದಿದ್ದರೂ ಈ ವಿಷಯವನ್ನು ಕ್ರಮವಾಗಿ ಅಭ್ಯಾಸ ಮಾಡುವುದಕ್ಕೆ ೧೮೭೨ನೆಯ ಇಸವಿಯಲ್ಲಿ ಡಾ. ಬರ್ಗೆಸ್ ಇವರು Indian Antiquary ಎಂಬ ಮಾಸಪತ್ರಿಕೆಯನ್ನು ತೆಗೆದಂದಿನಿಂದ ಪ್ರಾರಂಭವಾಯಿತೆಂದು ಹೇಳಬಹುದು. ಡಾ. ಬರ್ಗೆಸ್ ಇವರು ೧೪ ವರ್ಷ ಆ ಮಾಸಪತ್ರಿಕೆಯನ್ನು ನಡಿಸಿದರು. ಈ ಅವಧಿಯಲ್ಲಿ ಸುಮಾರು ೨೬೦ ಶಿಲಾಲಿಪಿಗಳು ಮುದ್ರಿಸಲ್ಪಟ್ಟಿವೆ. ಮುಂದೆ ಡಾ. ಫ್ಲೀಟ (Dr. Fleet) ಮತ್ತು ಸರ್ ರಿಚಾರ್ಡ ಟೆಂಪಲ್ (Sir Richard Temple) ಇವರು ಅದಕ್ಕೆ ಸಂಪಾದಕರಾದರು.

೧೮೭೪ನೆಯ ಇಸವಿಯಲ್ಲಿ ಮುಂಬಯಿ ಇಲಾಖೆಯ ಆರ್ಕಿಯಾಲಾಜಿಕಲ್ ಸರ್ವೆಗೆ ಪ್ರಾರಂಭವಾಗಿ ಬಾದಾಮಿ, ಐಹೊಳೆ, ಪಟ್ಟದಕಲ್ಲು ಮುಂತಾದ ಸ್ಥಳಗಳಲ್ಲಿಯ ೫೬ ಚಿತ್ರಗಳುಳ್ಳ ರಿಪೋರ್ಟು ಮುದ್ರಿತವಾಯಿತು. ೧೮೮೦ನೆಯ ಇಸವಿಯಲ್ಲಿ ವೇರೂಳ, ಅಜಂತಾ, ಕಾರ್ಲೆ, ಕಾನೇರಿ, ಜುನ್ನರ, ಭಾಜಾ ಮುಂತಾದ ಸ್ಥಳಗಳಲ್ಲಿಯ ಗುಡಿಗಳ ವಿವರವುಳ್ಳ ಒಂದು ಪುಸ್ತಕವು ಹೊರಡಿಸಲ್ಪಟ್ಟಿತು. ೧೮೯೬ನೆಯ ಇಸವಿಯಲ್ಲಿ ಬಳ್ಳಾರಿ ಜಿಲ್ಲೆಯಲ್ಲಿಯ ಚಾಲುಕ್ಯರ ಗುಡಿಗಳ ವಿಷಯಕ್ಕೆ ೧೧೪ ಪ್ಲೇಟುಗಳುಳ್ಳ ಒಂದು ರಿಪೋರ್ಟು ಮುದ್ರಿತವಾಗಿದೆ. ೧೮೯೭ನೆಯ ಇಸವಿಯಲ್ಲಿ ಮಿ. ಕೌಝನ್ಸ (Mr. Cousens) ಇವರು ಮುಂಬಯಿ ಇಲಾಖೆಯಲ್ಲಿಯ "ಮೊನ್ಯುಮೆಂಟಲ್ ಆ್ಯಂಟಿಕ್ವಿಟೀಜ್ (Monumental Antiquities) ಎಂಬ ಹೊಸಪಟ್ಟಿಯನ್ನು ತಯಾರಿಸಿದ್ದಾರೆ. ಅವರು ಇದೇ ವಿಷಯವಾಗಿ ಹೊಸದೊಂದು ಪುಸ್ತಕವನ್ನು ಬರೆಯಹತ್ತಿದ್ದಾರೆ, ಅಜಂತಾ ಗವಿಯಲ್ಲಿಯ ಚಿತ್ರಗಳು ೧೮೭೬ನೆಯ

ಇಸವಿಯಲ್ಲಿ ಸುಟ್ಟುಹೋದ ಸಂಗತಿಯನ್ನು ನಾವು ಮೇಲೆ ತಿಳಿಸಿರುವೆ. ವಷ್ಟೆ. ಆದರೆ ಮುಂದೆ ಪುನಃ ಜಾನ್ ಗ್ರಿಫಿತ್ (John Griffith) ಎಂಬವರು ಪುನಃ ಅವುಗಳನ್ನು ಪರಿಶ್ರಮಪಟ್ಟು ತೆಗೆದುಕೊಂಡಿದ್ದರು. ಆದರೆ ನಮ್ಮ ಕಡುತರವಾದ ದುರ್ದೈವದಿಂದ ಅವರು ತೆಗೆದುಕೊಂಡ ೩೩೪ ಚಿತ್ರಗಳಲ್ಲಿ ೧೭೫ ಚಿಕ್ಕ ದೊಡ್ಡ ಚಿತ್ರಗಳು ನಾಶವಾದವು. ಇಲ್ಲವೆ ಕೆಟ್ಟು ಹೋದವು. ಇತ್ತ ಕಡೆಗೆ ಮಿ. ಗ್ರಿಫಿತ್ ಇವರು ೧೫೯ ಪ್ಲೇಟು ಗಳುಳ್ಳ ಆ ವಿಷಯುಕವಾದ ಒಂದು ಪುಸ್ತಕವನ್ನು ಮುದ್ರಿಸಿದ್ದಾರೆ.

೧೮೭೨ನೆಯ ಇಸವಿಯಲ್ಲಿ ಇಂಡಿಯನ್ ಆ್ಯಂಟಿಕ್ವರಿ ಎಂಬ ಮಾಸ ಪತ್ರಿಕೆಯನ್ನು ಡಾ. ಬರ್ಗೆಸ್ ಇವರು ಪ್ರಾರಂಭ ಮಾಡುವ ಪೂರ್ವದಲ್ಲಿ ಬಹುಶಃ ಎಲ್ಲ ಲಿಪಿಗಳನ್ನು ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಮುಂಬಯಿ ಇಲಾಖೆಯವರೇ ಮುದ್ರಿಸಿರುತ್ತಾರೆಂದು ಹೇಳಿರುವೆವಷ್ಟೇ. ಅವರು ಮುದ್ರಿಸಿರುವ ಲೇಖಗಳ ವಿವರವನ್ನು ಇಲ್ಲಿ ಕೊಡುವೆವು. ಮುಂಬಯಿ ಇಲಾಖೆಯಲ್ಲಿ ಎಲ್ಲಕ್ಕೂ ಪುರಾತನ ಲಿಪಿಗಳೆಂದರೆ ಅಶೋಕನ ಜುನಾಗಡದಲ್ಲಿಯ ಲಿಪಿಗಳು (ಕ್ರಿ. ಶ. ಪೂ. ೨೪೫) ಅವು ಒಂದನೇ ಸಂಪುಟದಲ್ಲಿ ಮುದ್ರಿತವಾಗಿವೆ. ಅನಂತರದ ಲಿಪಿಗಳೆಂದರೆ ಗುಡ್ಡದ ಗವಿಯೊಳಗಿನ ಲಿಪಿಗಳು. ಈ ಲಿಪಿಗಳು ಶಾತವಾಹನ ಅಥವಾ ಶಾಲಿ ವಾಹನ ಮನೆತನಕ್ಕೆ ಸಂಬಂಧಿಸಿರುತ್ತವೆ. ಇವು ನಾಸಿಕ, ಕಾರ್ಲೆ, ನಾನಘಾಟ, ಕಾನ್ಹೇರಿ, ಭಾಜಾ, ಜುನ್ನರ, ಕೂಡ, ಮುಂತಾದ ಸ್ಥಳಗ ಳಲ್ಲಿ ದೊರೆಯುತ್ತವೆ. ಅವುಗಳೊಳಗಿನ ಎಲ್ಲಕ್ಕೂ ಪುರಾತನ ಲಿಪಿ ಗಳೆಂದರೆ ನಾಸಿಕದ ಲಿಪಿಗಳು. ಈ ಲಿಪಿಗಳಲ್ಲಿ ಶಾತವಾಹನ ಮನೆತನಕ್ಕೆ ಸೇರಿದ ಕೃಷ್ಣರಾಜನ ಹೆಸರು ದೊರೆಯುತ್ತದೆ. ಕಾನ್ಹೇರಿ, ನಾಶಿಕ, ಭಾಜಾ ಮತ್ತು ಕೂಡ ಇಲ್ಲಿಯ ಲೇಖಗಳನ್ನು ಲೆಫ್ಟಿನೆಂಟ ಬ್ರ್ಯಾಂಟ್ (Lient Brat) ಎಂಬವರು ೧೮೫೪ ನೆಯ ಇಸವಿಯಲ್ಲಿ ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಮುಂಬಯಿ ಶಾಖೆಯ ಮಾಸಪತ್ರಿಕೆಯ ೫ನೇ ಸಂಪುಟ (vol. 5) ದಲ್ಲಿ ಮುದ್ರಿಸಿರುತ್ತಾರೆ. ಆರನೆಯದರಲ್ಲಿ ಕಾನ್ಹೇರಿಯ ವಿಷಯಕ್ಕೆ ಉತ್ತಮವಾದ ಲೇಖಗಳು ಮುದ್ರಿತವಾಗಿವೆ.

೭ನೆಯುದರಲ್ಲಿ ನಾಶಿಕದ ಲೇಖಗಳಿವೆ. ೮ನೆಯುದರಲ್ಲಿ ಬಾಡ್ಮಾ ವಿಷಯಕ ಲೇಖಗಳಿವೆ. ಶಾತವಾಹನರು ೩ನೆಯ ಶತಮಾನದ ವರೆಗೆ ಆಳಿದರು. ಮುಂದೆ ೫ನೆಯ ಶತಮಾನದ ವರೆಗೆ ಯಾರು ಆಳಿದರೆಂಬುದು ಚೆನ್ನಾಗಿ ಗೊತ್ತಾಗುವದಿಲ್ಲ. ಬಹಳವಾಗಿ ತ್ರೈಕೂಟರೆಂಬವರು ಆಳಿದಂತೆ ತೋರು ತ್ತದೆ. ಅವರದೊಂದು ತಾಮ್ರಶಾಸನವು ಕಾನ್ಹೇರಿಯಲ್ಲಿ ದೊರೆತಿದ್ದು, ಅದು ೫ನೆಯ ಸಂಪುಟದಲ್ಲಿ ಮುದ್ರಿತವಾಗಿದೆ. ಮತ್ತೊಂದು ೧೬ನೆಯ ದರಲ್ಲಿ ಮುದ್ರಿತವಾಗಿದೆ.

ಇನ್ನು ಚಾಲುಕ್ಯರ ವಿಷಯವಾಗಿ ಈ ಸೊಸಾಯಿಟಿಯ ಮಾಸಪತ್ರಿಕೆ ಯಲ್ಲಿ ಯಾವ ಲೇಖಗಳಿರುತ್ತವೆಂಬುದನ್ನು ನೋಡುವ. ೧ನೆಯ ಸಂಪುಟದಲ್ಲಿ ಚಾಲುಕ್ಯ ವಿಷ್ಣುವರ್ಧನನ ತಾಮ್ರಶಾಸನವು ಮುದ್ರಿತ ವಾಗಿವೆ. ಆದರಲ್ಲಿಯೇ ಪುಲಿಕೇಶಿಯ ತಮ್ಮನಾದ ಜಯಸಿಂಹನೆಂಬ ವನ ಮಗನಾದ ನಾಗವರ್ಧನನ ತಾಮ್ರಶಾಸನವು ಮುದ್ರಿತವಾಗಿದೆ. ೧೮೫೫ನೆಯ ಇಸವಿಯಲ್ಲಿ ನೇರೂರಲ್ಲಿ ದೊರೆತ ಎರಡು ತಾಮ್ರಶಾಸನ ಗಳೂ ೯ನೆಯುದರಲ್ಲಿ ಮುದ್ರಿತವಾಗಿವೆ. ಅವುಗಳಲ್ಲಿ ಒಂದು ಚಾಲುಕ್ಯರ ೯ನೆಯ ಅರಸನಾದ ವಿಜಯಾದಿತ್ಯನದು. ಮತ್ತೊಂದು ಪುಲಿಕೇಶಿಯ ಮಗನಾದ ಚಂದ್ರಾದಿತ್ಯನೆಂಬವನ ಹೆಂಡತಿಯಾದ ವಿಜಯಭಟ್ಟಾರಿಕಾ ಎಂಬವಳದು. ಅದೇ ವಿಜಯಭಟ್ಟಾರಿಕೆಯ ಕೋಚೇರವಾ್‌ದಲ್ಲಿ ದೊರೆತ ಮತ್ತೊಂದು ತಾಮ್ರಶಾಸನವು ೯ನೆಯುದರಲ್ಲಿ ಮುದ್ರಿತವಾಗಿದೆ. ೧೦ ನೆಯುದರಲ್ಲಿ ರೇವತಿ ದ್ವೀಪದಿಂದ ಸತ್ಯಾಶ್ರಯನು (ಪುಲಿಕೇಶಿಯು) ಮತ್ತು ರಾಜೇಂದ್ರವರ್ಮನೆಂಬವನು ೫೩೭ನೆಯ ಶಕದಲ್ಲಿ ಕೊರಿಸಿದ ತಾಮ್ರಶಾಸನವು ಅಚ್ಚು ಹಾಕಲ್ಪಟ್ಟಿದೆ. ೯ನೆಯುದರಲ್ಲಿ ಡಾ. ಭಾವು ದಾಜಿಯವರು ಧಾರವಾಡ ಮತ್ತು ಮೈಸೂರ ಶಿಲಾಲೇಖಗಳ ಬಗ್ಗೆ ಬರೆದಿ ರುವರು. ೧೮ನೆಯ ಸಂಪುಟದಲ್ಲಿ ಹಿಂದಕ್ಕೆ ಹೇಳಿದ ನಾಗವರ್ಧನನ ತಾಮ್ರಶಾಸನದ ಸುಧಾರಿಸಿದ ಆವೃತ್ತಿಯು ಪ್ರಸಿದ್ಧವಾಗಿದೆ. ೧೬ನೆಯ ದರಲ್ಲಿ ಡಾ. ಪ್ಲೀಟರವರು ಚಾಲುಕ್ಯರ ಗುಜರಾಥದಲ್ಲಿಯ ಶಾಖೆಯ ಅರಸ ನಾದ ೨ನೆಯ ಪುಲಿಕೇಶಿಯ ಮಗನಾದ ಆದಿತ್ಯವರ್ಮನ ತಾಮ್ರಶಾಸ ನವು ಮುದ್ರಿತವಾಗಿದೆ. ಇದಲ್ಲದೆ ಒಂದನೆಯ ವಿಕ್ರಮಾದಿತ್ಯನ ಮೂರು

ತಾಮ್ರಶಾಸನಗಳೂ ವಿಜಯಾದಿತ್ಯನ ಒಂದು ತಾಮ್ರಶಾಸನವೂ ಮುದ್ರಿತ ವಾಗಿದೆ.

ರಾಷ್ಟ್ರಕೂಟ— ೨ನೆಯ ಸಂಪುಟದಲ್ಲಿ, ಸಾಮನಗಡದಲ್ಲಿ ಸಿಕ್ಕಿದ ತಾಮ್ರಶಾಸನವು (೬೭೫ ಶಕ) ಮುದ್ರಿತವಾಗಿದೆ. ೩ನೆಯದರಲ್ಲಿ, ರಾಷ್ಟ್ರ ಕೂಟದ ೧೫ನೆಯ ಅರಸನಾದ ೪ನೆಯ ಗೋವಿಂದನೆಂಬವನ ೮೫೫ ನೆಯ ಶಕದ ಸಾಂಗಲಿಯಲ್ಲಿ ದೊರೆತ ತಾಮ್ರದ ಶಾಸನವು ಮುದ್ರಿತ ವಾಗಿದೆ. ೧೮ನೆಯ ಸಂಪುಟದಲ್ಲಿ ೮೬೨ ಶಕದ ೩ನೆಯ ಕೃಷ್ಣನೆಂಬ ವನ ದೇವಳಿಯಲ್ಲಿ ದೊರೆತ ತಾಮ್ರಶಾಸನವೂ ಮತ್ತು ೧೩ನೆಯ ಅರಸ ನಾದ ೩ನೆಯ ಇಂದ್ರನ ನವಸರಿಯಲ್ಲಿ ದೊರೆತ ೮೩೬ನೆಯ ಶಕದ ಶಾಸ ನವೂ ಮುದ್ರಿತವಾಗಿದೆ. ೧೦ನೆಯ ಸಂಪುಟದಲ್ಲಿ, ಮಾಂಡಲಿಕ ಅರಸ ನಾದ ಪೃಥ್ವಿವರ್ಮನೆಂಬವನು ಸುಗಂಧವರ್ತಿ (ಸವದತ್ತಿ) ಯನ್ನು ೮೯೭ನೆಯ ಶಕದಲ್ಲಿ ಜೈನ ಗುಡಿಗೆ ದಾನಕೊಟ್ಟ ಶಿಲಾಲೇಖವೂ ಮತ್ತೂ ಒಂದು ೮೩೪ನೆಯ ಶಕದಲ್ಲಿ ಮುಳಗುಂದದ ಜೈನ ಗುಡಿ ಕಟ್ಟಿದ ಶಿಲಾ ಲೇಖಗಳೂ ಮುದ್ರಿತವಾಗಿವೆ. ೧ನೆಯ ಸಂಪುಟದಲ್ಲಿ ಖಾರೆ ಪಟ್ಟಣದ ಲ್ಲಿಯ ಶಾಸನವು ೧೮೭೩ನೆಯ ಇಸವಿಯಲ್ಲಿ ಮುದ್ರಿತವಾಯಿತು.

ಚಾಲುಕ್ಯರು— ಇವರ ಶಿಲಾಲೇಖಗಳು ಈ ಮಾಸಪತ್ರಿಕೆಯಲ್ಲಿ ಬಹಳವಾಗಿ ದೊರೆಯುವದಿಲ್ಲ. ೯ನೆಯ ಸಂಪುಟದಲ್ಲಿ ತ್ರಿಭುವನಮಲ್ಲ ವಿಕ್ರಮಾದಿತ್ಯನ ಶಿಲಾಲೇಖವಿದೆ. ೧೦ನೆಯದರಲ್ಲಿ ತೈಲಪದೇವನ ಮಾಂಡಲಿಕ ಅರಸನಾದ ಶಾಂತಿವರ್ಮನೆಂಬವನು ೯೦೨ನೆಯ ಶಕದಲ್ಲಿ ಸವದತ್ತಿಯಲ್ಲಿ ಜೈನ ಗುಡಿಗೆ ಕೊಟ್ಟ ತಾಮ್ರಶಾಸನವುಂಟು. ಮತ್ತೊಂ ದರಲ್ಲಿ ಕಾರ್ತವೀರ್ಯನ ಹೆಸರು ಇರುತ್ತದೆ. ೩ನೆಯದರಲ್ಲಿ ತ್ರಿಭುವನ ಮಲ್ಲನ ಮಾಂಡಲಿಕನಾದ ಸೇನನೆಂಬವನ ಹೆಸರುಂಟು. ೧೧ನೆಯದರಲ್ಲಿ ಡಾ. ಫ್ಲೀಟ ಇವರು ಸಿಂದ ವಂಶದ ಶಿಲಾಲೇಖಗಳನ್ನು ಮುದ್ರಿಸಿ ದ್ದಾರೆ. ಈ ಸಿಂದ ವಂಶದ ಶಿಲಾಲೇಖಗಳು ೨-೩-೪ನೆಯ ಸಂಪುಟ ಗಳಲ್ಲಿಯೂ ಉಂಟು.

ಕಲಚೂರ್ಯರು— ಕಲಚೂರಿಯ ಬಿಜ್ಜಳನ ಮಗನಾದ ಸೋಮ ನೆಂಬವನ ತಾಮ್ರಶಾಸನವು ೧೮ನೆಯ ಸಂಪುಟದಲ್ಲಿ ಮುದ್ರಿತವಾಗಿದೆ.

೨ನೆಯುದರಲ್ಲಿ ಯಾದವರ ೭ ಶಿಲಾಲೇಖಗಳು ಮುದ್ರಿತವಾಗಿವೆ. ೯ನೆಯು ದರಲ್ಲಿ ೧ ಮುದ್ರಿತವಾಗಿದೆ. ಮತ್ತು ೧೫ನೆಯು ಸಂಪುಟದಲ್ಲಿಯೂ ಯಾದವರ ಒಂದು ಲೇಖವು ಮುದ್ರಿತವಾಗಿದೆ. ಕೊಲ್ಹಾಪುರ ಶಿಲಾಹಾರ ವಂಶದಲ್ಲಿ ೧೫ ಮಂದಿ ಅರಸರು ಆಳಿದರು. ಅವರ ಶಿಲಾಲೇಖಗಳು ೨-೩-೧೩ನೆಯು ಸಂಪುಟದಲ್ಲಿ ಅಚ್ಚಾಗಿವೆ.

ಈ ಮಾಸಪತ್ರಿಕೆಯೊಳಗಿನ ಲೇಖಗಳಲ್ಲದೆ ಮತ್ತೆ ಕೆಲವರ ಪ್ರಯುತ್ನಗಳಿಂದ ಕರ್ನಾಟಕಕ್ಕೆ ಅತಿಶಯುವಾಗಿ ಸಹಾಯುವಾಗಿದೆ. ಈ ಬಗೆಯಾಗಿ ಪ್ರಯುತ್ನ ಮಾಡಿದವರಲ್ಲಿ, ಸರ್ ವಾಲ್ಟರ್ ಇಲಿಯಟ್ (Sir Walter Elliot) ಎಂಬವರೇ ಮೊದಲನೆಯುವರು. ಇವರು ಮದ್ರಾಸ ಇಲಾಖೆಯುಲ್ಲಿ ಸರಕಾರೀ ಅಧಿಕಾರಸ್ಥರಾಗಿದ್ದರು. ಇವರು ೭-೮ ವರ್ಷ ಸತತ ಶ್ರಮಪಟ್ಟು ಕರ್ನಾಟಕ ಪ್ರಾಂತ, ನಿಜಾಮು ರಾಜ್ಯದ ಪಶ್ಚಿಮ ಭಾಗ ಮತ್ತು ಮೈಸೂರ ಪ್ರಾಂತದ ಉತ್ತರ ಭಾಗ ಈ ಮೂರು ಪ್ರದೇಶದೊಳಗಿನ ಸುಮಾರು ೧೩೦೦ ಶಿಲೆಯು ಮತ್ತು ತಾಮ್ರಶಾಸನಗಳ ಲೇಖಗಳನ್ನು ಕೂಡಿಹಾಕಿದರು. ಅವುಗಳಲ್ಲಿ ಸ್ವಚ್ಛವಾದ ೫೯೫ ಲೇಖಗಳನ್ನು ಬೇರೆ ತೆಗೆದು, ಒಂದೊಂದರ ನಾಲ್ಕು ನಾಲ್ಕು ಪ್ರತಿಗಳನ್ನು ಮಾಡಿಸಿದರು. ಅವುಗಳಲ್ಲೊಂದು ಎಡಿನ್‌ಬರೋ ಪಟ್ಟಣದಲ್ಲಿರುವ ವಿಶ್ವವಿದ್ಯಾಲಯುದ ಪುಸ್ತಕಾಲಯು (Edinborough University) ದಲ್ಲಿ ಕರ್ನಾಟಕದ ಲೇಖಗಳು (Karnataka Inscriptions) ಎಂಬ ಹೆಸರಿನಿಂದ ಎರಡು ಸಂಪುಟಗಳಾಗಿ ಈಗ್ಯೂ ಇರುತ್ತದೆ. ಮತ್ತೊಂದು ಲಂಡನ್ ಪಟ್ಟಣದಲ್ಲಿರುವ ರಾಯುಲ್ ಏಶಿಯಾಟಿಕ್ ಸೊಸಾಯಿಟಿಯು (Royal Asiatic Society, London) ಲಾಯುಬ್ರರಿಯುಲ್ಲಿ ಇರುತ್ತದೆ. ಮಿಕ್ಕ ಎರಡು ಪ್ರತಿಗಳ ಅವಸ್ಥೆಯೇನಾಗಿದೆಯೋ ಗೊತ್ತೇ ಇಲ್ಲ. ಸರ್ ವಾಲ್ಟರ್ ಇಲಿಯಟ್ ಇವರು ಈ ೫೯೫ ಲೇಖಗಳ ಇತ್ಯರ್ಥವನ್ನು ತೆಗೆದು ಒಂದು ಪ್ರಬಂಧವನ್ನು ಬರೆದು ಅವರು ಅದನ್ನು ಲಂಡನ್ ಸೊಸಾಯಿಟಿಯು ಮುಂದೆ ೧೮೩೭ನೆಯು ಇಸವಿಯು ಜುಲೈ ತಿಂಗಳಲ್ಲಿ ಓದಿದರು. ಅದು ಹಿಂದು ಶಿಲಾಲೇಖಗಳು (Hindu Inscriptions) ಎಂಬ ಹೆಸರಿನಿಂದ ರಾಯುಲ್

ಏಶಿಯಾಟಿಕ್ ಸೊಸಾಯಿಟಿಯು ಹಳೆಯ ಮಾಸಪತ್ರಿಕೆಗಳ ನಾಲ್ಕನೆಯ ಸಂಪುಟದ ೧ನೇ ಪುಟದಲ್ಲಿ (Journal of the Royal Asiatic Society old Series Vol· IV Pages I & C) ಅದು ಮುದ್ರಿತ ವಾಗಿದೆ. ಮುಂದೆ ಅದರಲ್ಲಿ ಕೆಲವು ಸುಧಾರಣೆಗಳನ್ನು ಮಾಡಿ, ಅವರು ವಾಙ್ಮಯ ಮತ್ತು ಶಾಸ್ತ್ರ ಇವುಗಳ ಸಂಬಂಧಪಟ್ಟ ಮದ್ರಾಸ ಜರ್ನಲಿನ ೭ನೆಯ ಸಂಪುಟದ ೧೯೩ನೆಯ ಪುಟ (Madras Journal of the Literature and Science Vol. VII Page 193) ದಲ್ಲಿ ಪ್ರಸಿದ್ಧ ಗೊಳಿಸಿರುವರು.

ಅನಂತರ ಕರ್ನಲ್ ಮೆಕೆಂಝಿ ಸಾಹೇಬರು ದಕ್ಷಿಣ ಹಿಂದುಸ್ಥಾನ ದೊಳಗಿನ ಅನೇಕ ಪ್ರಾಚೀನ ಶಿಲಾಲೇಖಗಳನ್ನೂ ತಾಮ್ರಪಟಗಳನ್ನೂ ಮುದ್ರಣ ತೆಗೆದುಕೊಂಡು ದೊಡ್ಡ ಸಂಗ್ರಹ ಮಾಡಿರುವರು. ಅದು ಇನ್ನೂ ಪ್ರಸಿದ್ಧವಾದಂತೆ ತೋರಲಿಲ್ಲ.

ಇತ್ತ ಮೈಸೂರಿನಲ್ಲಿ ಮೈಸೂರ ಸರಕಾರದವರು, ಮೇಜರ್ ಡಿಕ್ಸನ್ (Major Dixon) ಇವರು ತೆಗೆದುಕೊಂಡ ತಸಬೀರುಗಳನ್ನು ಮುದ್ರಿಸಿದರು. ಮೇಜರ್ ಡಿಕ್ಸನ್ ಸಾಹೇಬರು ಮೈಸೂರ ಸರಕಾರದ ಆಶ್ರಯದಿಂದ ಚಿತ್ರಕಲ್ಲುದುರ್ಗ, ಬಳ್ಳಿಗಾಂವಿ, ಹರಿಹರ ಮುಂತಾದವು ಗಳಲ್ಲಿಯ ಸುಮಾರು ೬೦ ಲೇಖಗಳನ್ನು ೧೮೬೫ನೆಯ ಇಸವಿಯಲ್ಲಿ ಪ್ರಸಿದ್ಧ ಪಡಿಸಿದರು.

ಡಾ. ಪಿಗು ಮತ್ತು ಕರ್ನಲ್ ಬ್ರಿಗ್ಸ ಈ ಉಭಯತರು ಧಾರವಾಡ ಮತ್ತು ಮೈಸೂರ ಪ್ರಾಂತದೊಳಗಿನ ಸುಮಾರು ೬೦ ಶಿಲಾಲೇಖಗಳ ತಸಬೀರು ತೆಗೆದುಕೊಂಡಿದ್ದರು. ಅವುಗಳ ಆಧಾರದಿಂದ ಮಿ. ಹೋಪ್ ಎಂಬವರು ಸರಕಾರದವರ ಸಹಾಯದಿಂದ ಧಾರವಾಡ ಮತ್ತು ಮೈಸೂರುಗಳಲ್ಲಿಯ ಶಿಲಾಲೇಖಗಳು (Inscriptions in Dharwar and Mysore) ಎಂಬ ಪುಸ್ತಕದಲ್ಲಿ ೬೪ ಶಿಲಾಲಿಪಿಗಳ ತಸಬೀರುಗಳನ್ನು ಮುದ್ರಿಸಿದರು. ಆದರೆ ಇದರ ಹತ್ತೇ ಪ್ರತಿಗಳು ಮುದ್ರಿತವಾಗಿದ್ದವು. ಅವು ಇರುವ ವಿವರ:— (೧) ರಾಯಲ್ ಏಶಿಯಾಟಿಕ್ ಲಾಯಬ್ರರಿ ಲಂಡನ್ (Royal Asiatic Society London) (೨) ಸೊಸಾ-

ಯಿಟಿ ಏಶಿಯಾಟಿಕ್ ಪ್ಯಾರಿಸ್ ( Society Asiatic Paris ) (೩) ರಾಯಲ್ ಓರಿಯಂಟಲ್ ಸೊಸಾಯಿಟಿ ಲೀಪ್ಸಿಕ್ ( Royal Oriental Society Leepzic ) (೪) ಇಂಡಿಯಾ ಆಫೀಸ್ ಲಾಯಬ್ರರಿ ಲಂಡನ್ ( India Office Library London ) (೫) ಮಿಸ್ ಥಾಮಸ್ ( Miss Thomas) ಮಿಕ್ಕ ಪ್ರತಿಗಳು ಮುಂಬಯಿಗೆ ಕಳುಹಿಸಿಕೊಡಲ್ಪಟ್ಟಿದ್ದವು. ಅವುಗಳ ಪತ್ತೆ ಇಲ್ಲ.

ಆದರೆ ಮೇಲೆ ಹೇಳಿದ ಸಂಗ್ರಹಗಳು ದೊರೆಯಲಿಕ್ಕೆ ಕಠಿಣವಾದುದರಿಂದ ಅವುಗಳನ್ನು ಒಟ್ಟಿಗೆ ಕೂಡಿಸಿ ಕ್ರಮವಾಗಿ ಒಂದೇ ಗ್ರಂಥದಲ್ಲಿ ಇಂಡಿಯಾ ಆಫೀಸ್ ( India Office ) ನ ವತಿಯಿಂದ ೧೮೭೮ ನೆಯ ಇಸವಿಯಲ್ಲಿ ಡಾ. ಫ್ಲೀಟ ಎಂಬವರು ಮುದ್ರಿಸಿದರು. ಈ ಪುಸ್ತಕದ ಹೆಸರು ( Pali Sankirt and old Kanarese Inscriptions from the Bombay Presidency and Parts of the Madras Presidency and Mysore ) ಮುಂಬಯಿ ಇಲಾಖೆಯ ಮತ್ತು ಮದ್ರಾಸ ಇಲಾಖೆಯ ಮತ್ತು ಹಳೆಗನ್ನಡ ಭಾಷೆಗಳಲ್ಲಿರುವ ಲೇಖಗಳು. ಆದರೆ ಇದರ ಒಂಬತ್ತೇ ಪ್ರತಿಗಳು ಮುದ್ರಿತವಾಗಿದ್ದವು. ಅವು ಮುಂದೆ ಹೇಳಿದ ಸ್ಥಳಗಳಲ್ಲಿ ಇರುತ್ತವೆ— (೧) ಇಂಡಿಯಾ ಆಫೀಸ, ಲಂಡನ್ ( India Office London ) (೨) ಬ್ರಿಟಿಷ್ ಮ್ಯುಝಿಯಮ್, ಲಂಡನ ( British Museum London ) (೩) ರಾಯಲ್ ಏಸಿಯಾಟಿಕ್ ಸೊಸಾಯಿಟಿ, ಲಂಡನ್ ( Royal Asiatic Society London) (೪) ಮುಂಬಯಿ ಸೆಕ್ರೆಟರಿಯೇಟ ( The Bombay Secretariat ) (೫) ರಾಯಲ್ ಏಸಿಯಾಟಿಕ್ ಸೊಸಾಯಿಟಿಯ ಮುಂಬಯಿ ಶಾಖೆ ( The Bombay branch of the Royal Asiatic Society ) (೬) ಆನ್. ಮಿ. ಗಿಬ್ಸ ( Hon. Mr. Gibbs ) (೭) ಡಾ. ಬರ್ಗೆಸ್ (೮) ಡಾ. ಫ್ಲೀಟ ( Dr. Fleet ) (೯) ಬಾಡ್ಲಿಯನ್ ರಾಯಬ್ರರಿ ( Bodlean Library ).

ಪ್ರೊ. ಡಾವುಸನ್ ( Prof. Dowson ) ಎಂಬವರು ರಾಯಲ್ ಏಶಿಯಾಟಿಕ್ ಸೊಸಾಯಿಟಿ ( Journal of the Royal Asiatic

Society ) ಯ ಮಾಸಪತ್ರಿಕೆಯಲ್ಲಿ ಹಲಕೆಲವು ಲಿಪಿಗಳನ್ನು ಅಚ್ಚು ಹಾಕಿಸಿದ್ದಾರೆ. ಅಲ್ಲದೆ, ಅವರು ದಕ್ಷಿಣದೊಳಗಿನ ಚಾಲುಕ್ಯರಾಜರ ವಿಷಯಕ್ಕೆ ಆ ಸೊಸಾಯಿಟಿಯ ಒಂದನೆಯ ವ್ಯಾಲ್ಯೂಮ ( New Series ) ದಲ್ಲಿ ಒಂದು ಲೇಖವನ್ನು ಬರೆದಿರುವರು. ಇದಲ್ಲದೆ, ಪಂಡಿತ ಬಾಳ ಗಂಗಾಧರಶಾಸ್ತ್ರಿ, ಸರ್ ಲಿಗ್ರಾಂಡ, ಜೇಕಬ ಮತ್ತು ಕ್ಯಾಪ್ಟನ್ ಜರ್ವಿಸ ಇವರು ಚಾಲುಕ್ಯರ ವಿಷಯವಾಗಿ ಕೆಲವು ಲೇಖಗಳನ್ನು ಮುದ್ರಿಸಿದ್ದಾರೆ. ( Journal Bom. R. As. Vol. II, III, J. R. A. S. Vol; IX) ಮುಂಬಯಿ ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ಸಂಪುಟ ೨,೩; ಮತ್ತು ರಾಯಲ್ ಏಶಿಯಾಟಿಕ್ ಸೊಸಾಯಿಟಿಯ ೯ನೆಯ ಸಂಪುಟಗಳಲ್ಲಿ ಮಿಸ್ತರ ನ್ಯಾಥೆನ್ ಇವರು ಚಾಲುಕ್ಯರ ವಂಶಾವಳಿಯನ್ನು ಪ್ರಸಿದ್ಧಗೊಳಿಸಿದ್ದಾರೆ. ( J. R. A. S. Vol. V. 345 ) ಪಂಡಿತ ಕಾಶೀನಾಥ ತೆಲಂಗ ಇವರು ತೈಲಪನ ಪೂರ್ವದಲ್ಲಿ ಆದ ಚಾಲುಕ್ಯರ ವಿಷಯವಾಗಿ ಒಂದು ನಿಬಂಧವನ್ನು ಬರೆದು ಅದನ್ನು ಮುಂಬಯಿ ಸೊಸಾಯಿಟಿಯ ಜರ್ನಲಿನಲ್ಲಿ ಮುದ್ರಿಸಿದ್ದಾರೆ. ( Jour. B. R. A. S. voi. X 348-867) ಡಾ. ಟೇಲರ ಎಂಬವರು ಟ್ರಾನ್ಸರ್ಝಾಕ್ಶನ್ ಆಫ್ ಲಿಟರರಿ ಸೊಸಾಯಿಟಿ ಮುಂಬಯಿ ( Transactions of thc Literary Saciety of Bombay ) ಎಂಬುದರಲ್ಲಿಯೂ ಅನೇಕ ಲೇಖಗಳನ್ನು ಬರೆದಿರುವರು.

ಆದರೆ ಇವೆಲ್ಲ ತೀರ ಅಪರೂಪವಾದ ಪ್ರಯತ್ನಗಳು. ಒಂದೇ ಸಮನಾಗಿ ನಡೆದವುಗಳಲ್ಲ. ೧೮೭೨ ನೆಯ ಇಸವಿಯಲ್ಲಿ ಡಾ. ಬರ್ಗೆಸ್ ಇವರು ಇಂಡಿಯನ್ ಆ್ಯಂಟಿಕ್ವರಿ ಎಂಬ ಮಾಸಪತ್ರಿಕೆಯನ್ನು ತೆಗೆದಂದಿನಿಂದ ಈ ವಿಷಯವು ಒಂದೇ ಸಮನಾಗಿ ಚರ್ಚಿಸಲ್ಪಡಹತ್ತಿರುತ್ತದೆ. ಡಾ. ಬುಲ್ಹರ ಪ್ರೊ. ಇಗ್ಲಿಂಗ, ಮಿ. ಕಿಟೆಲ್, ಮಿ. ರೆನ್, ರೆ. ಫೋಕ್ಸ, ಮಿ. ತೆಲಂಗ, ಪ್ರೊ. ಪಾಠಕ, ಡಾ. ಫ್ಲೀಟ್ ( Dr. Bulher, Prof. Igling' Mr. Kittel, Mr. Ken, Revd, Folkes, Dr. Bhandarkar' Prof. Bhagawanlal Indraji, Mr. K. T. Telang, Prof. Pathak, Dr. Fleet ) ಇವರೇ ಮುಂತಾದವರು ಈ ವಿಷಯವಾಗಿ ಲೇಖಗಳನ್ನು ಬರೆದಿರುವರು. ಇವೆಲ್ಲವುಗಳಲ್ಲಿ ಡಾ. ಫ್ಲೀಟರು

ಶೋಧಿಸಿದ ಲಿಪಿಗಳೇ ಹೆಚ್ಚು. ೧೮೭೯ನೆಯ ಇಸವಿಯಲ್ಲಿ ಮಿ. ರಾಯಿಸ (Mr. Rice) ಇವರು ಡಿಕ್ಸನ್ (Dixon) ಇವರ ಸಂಗ್ರಹವನ್ನೂ ತಮ್ಮ ಸಂಗ್ರಹವನ್ನೂ ಒಟ್ಟುಗೂಡಿಸಿ ಮೈಸೂರಿನ ಲೇಖಗಳು (Mysore Inscriptions) ಎಂಬ ಪುಸ್ತಕವನ್ನು ಮುದ್ರಿಸಿದ್ದಾರೆ.

ಇಂಡಿಯನ್ ಆ್ಯಂಟಿಕ್ವರಿ ಎಂಬ ಮಾಸಪತ್ರಿಕೆಯು ಹೊರಡುವ ಪೂರ್ವದಲ್ಲಿಯ ಲೇಖಗಳು ಅಲ್ಲೊಂದು ಇಲ್ಲೊಂದು ಇರುವದರಿಂದ ವಾಚಕರಿಗೆ ಅವುಗಳನ್ನು ಕೈಲಾದಮಟ್ಟಿಗೆ ಗೊತ್ತುಮಾಡಿ ಕೊಟ್ಟಿರುವೆವು. ಆ ಮಾಸಪತ್ರಿಕೆಯಲ್ಲಿ ಕರ್ನಾಟಕದ ಇತಿಹಾಸದ ವಿಷಯವಾಗಿ ಎಷ್ಟು ಲಿಪಿಗಳು ಮತ್ತು ಯಾವ ಲೇಖಗಳು ಬಂದಿರುತ್ತವೆಂಬುದರ ಯಾದಿಯನ್ನು ಕೊಡಬೇಕೆಂದು ಹವಣಿಸಿದ್ದೆವು. ಆದರೆ ಅದನ್ನು ತಯಾರಿಸಲಿಕ್ಕೆ ಕಾಲಾವಧಿಯು ಬೇಕು. ಮತ್ತು ಇತಿಹಾಸವನ್ನು ಅಭ್ಯಾಸ ಮಾಡುವವರಿಗೆ ಕೆಲವು ಮಟ್ಟಿಗಾದರೂ ಅನುಕೂಲವಾಗಬೇಕೆಂದು ನಮ್ಮ ಮಿತ್ರರ ಸೂಚನೆಯ ಮೇರೆಗೆ ಈ ಪುಸ್ತಕವನ್ನು ಅವಸರದಿಂದ ಅಪೂರ್ಣಾವಸ್ಥೆಯಲ್ಲಿಯೇ ತೆಗೆದಿರುವೆವು.

ಕೊನೆಗೆ ಸೂಚಿಸುವುದೇನಂದರೆ:— ಎಪಿಗ್ರಾಫಿಯಾ ಇಂಡಿಕಾ (Epigraphia Indica) ಎಂಬ ಪತ್ರಿಕೆಯ ೭ನೆಯ ಸಂಪುಟದಲ್ಲಿ, ದಕ್ಷಿಣದಲ್ಲಿಯ ಯಾವತ್ತು ಶಿಲಾಲಿಪಿಗಳ ಪಟ್ಟಿಯೊಂದನ್ನು ಪ್ರೊ. ಕಿಲಹಾರ್ನ ಇವರು ಅತ್ಯಂತ ಪರಿಶ್ರಮಪಟ್ಟು ಮುದ್ರಿಸಿರುವರು. ಈ ಮುಂದಿನ ಪಟ್ಟಿಯೊಂದನ್ನು ಯಾರಾದರೂ ವಿದ್ವಾಂಸರು ತಯಾರಿಸಿದರೆ ನಮ್ಮ ಇತಿಹಾಸಕ್ಕೆ ದೊಡ್ಡ ಉಪಕಾರ ಮಾಡಿದಂತಾಗುವದು. ಇತಿಹಾಸವನ್ನು ಅಭ್ಯಾಸ ಮಾಡಲಿಚ್ಛಿಸುವವರು, ಈ ಪಟ್ಟಿಯನ್ನು ಕಣ್ಣುಮುಂದಿಟ್ಟುಕೊಂಡೇ ಅಭ್ಯಾಸ ಮಾಡಬೇಕು. ಇದೊಂದು ಸಂಗತಿಯು ಗೊತ್ತಿರದ ಮೂಲಕ ನಮ್ಮ ಎಷ್ಟೋ ಶ್ರಮವು ನಿರರ್ಥಕವಾಗಿರುತ್ತದೆ. ಆದುದರಿಂದ ನಾವು ಈ ಸಂಗತಿಯನ್ನು ಬೇಕೆಂದು ವಾಚಕರ ಧ್ಯಾನಕ್ಕೆ ತಂದುಕೊಟ್ಟಿದ್ದೇವೆ.

ಇನ್ನು ಕರ್ನಾಟಕದ ಇತಿಹಾಸಕ್ಕೆ ಅತ್ಯಂತ ಅವಶ್ಯವಾದ ಬೇರೆ

ಪುಸ್ತಕಗಳಾವುವೆಂದರೆ— (೧) ಫ್ಲೀಟ ಇವರ ೧೮೮೧ನೆಯ ಇಸವಿಯಲ್ಲಿ ಬರೆದ ಮುಂಬಯಿ ಇಲಾಖೆಯಲ್ಲಿಯ ಕನ್ನಡ ರಾಜಮನೆತನಗಳು (The Dynasties of the Kanarese Districts of Bombay Presidency) (೨) ಡಾ. ಭಾಂಡಾರಕರ ಇವರು ೧೮೮೪ನೆಯ ಇಸವಿಯಲ್ಲಿ ಬರೆದ ದಕ್ಷಿಣಾಪಥದ ಪ್ರಾಚೀನ ಇತಿಹಾಸ (The early history of the Dekkan) (೩) ಸಿವೆಲ್‌ರ "ಮರೆತುಹೋದ ಸಾಮ್ರಾಜ್ಯ" (Forgotten Empire be Sewell) (೪) ಬಿ. ಸೂರ್ಯನಾರಾಯಣ ರಾಯರ "ಎಂದೂ ಮರೆಯದ ಸಾಮ್ರಾಜ್ಯ" (The never to be forgotten Empire by B. Surya Narayanrao) (೫) ರಾ. ವೆಂಕಟ ರಂಗೋ ಕಟ್ಟಿಯವರು ಭಾಷಾಂತರಿಸಿದ "ಕರ್ನಾಟಕ ಗ್ಯಾಝಿಟಿಯರ್" (೬) "ಮೈಸೂರ ಗ್ಯಾಝಿಟಿಯರ್" ಇವೇ ಮೊದಲಾದವುಗಳು.

ಕರ್ನಾಟಕದ ಹಳೆಯ ಇತಿಹಾಸವನ್ನು ಇತಿಹಾಸದೃಷ್ಟಿಯಿಂದ ಅಭಿಮಾನಪೂರ್ವಕವಾಗಿ ಡಾ. ಭಾಂಡಾರಕರರು ಮೊದಲು ಬರೆದರು. ಡಾ. ಫ್ಲೀಟರು ಕೇವಲ ಕನ್ನಡ ಪ್ರಾಂತದ ಇತಿಹಾಸವನ್ನು ಬರೆದಿದ್ದರೂ ಅವರು ಅದನ್ನು ಶಿಲಾಲಿಪಿಗಳ ದೃಷ್ಟಿಯಿಂದ ಮಾತ್ರವೇ ಶೋಧಿಸಿರುವರು. ಅವರು ತಮ್ಮ ಇತಿಹಾಸದಲ್ಲಿ ಒಟ್ಟು ಸುಮಾರು ೨೦೦ ಶಿಲಾಲಿಪಿಗಳಿಂದ ಹೊರಡುವ ಇತಿಹಾಸವನ್ನು ಸಂಗ್ರಹಿಸಿದ್ದಾರೆ. ಡಾ. ಫ್ಲೀಟರು ನಮ್ಮ ಇತಿಹಾಸಕ್ಕೆ ಮಾಡಿದ ಉಪಕಾರವನ್ನು ಅಷ್ಟಿಷ್ಟೆಂದು ಹೇಳಲಳವಲ್ಲ. ಇವರು ಈ ಪ್ರಾಂತದ ಕಮಿಶನರಾಗಿದ್ದರು. ಇವರು ತಾವು ಹೋದ ಹೋದಲ್ಲಿ ಕಂಡ ಶಿಲಾಲಿಪಿಗಳ ಮುದ್ರೆಗಳನ್ನು ತೆಗೆದುಕೊಂಡಿರುವರು. ಅವರು ಈ ಇತಿಹಾಸವನ್ನು ಬರೆದು ಮೂರು ತಪಗಳಾಗಿ ಹೋದರೂ ಇಂದಿನವರೆಗೂ ಯಾವ ಕನ್ನಡಿಗನೂ ಅತ್ತ ಸ್ವಾಭಿಮಾನದಿಂದ ದೃಷ್ಟಿ ತಿರುಗಿಸಲಿಲ್ಲವೆಂಬುದಕ್ಕಿಂತ ಹೆಚ್ಚು ಕರುಣಾಸ್ಪದವಾದ ಸಂಗತಿಯು ಮತ್ತಾವುದಿದೆ ?

ಡಾ. ಭಾಂಡಾರಕರರವರು ಬರೆದ ಪುಸ್ತಕವು ಕನ್ನಡಿಗರಿಗೆ ಬಹಳ ಬೆಲೆಯುಳ್ಳದ್ದಾಗಿದೆ. ಆದರೆ ಡಾ. ರವರು ಕರ್ನಾಟಕದ ಅಭಿಮಾನ

ದಿಂದ ಅದನ್ನು ಬರೆಯಲಿಕ್ಕೆ ಪ್ರವರ್ತಿಸಿಲ್ಲವೆಂಬುದನ್ನು ಮರೆಯಕೂಡದು. ಈ ಕಾರಣಕ್ಕೋಸ್ಕರವೇ ಈ ಪುಸ್ತಕವನ್ನು ಮೊದಲಿನಿಂದ ಕೊನೆಯ ವರೆಗೆ ಓದಿದರೂ ಅದು ಕರ್ನಾಟಕಕ್ಕೆ ತಿಲಾಂಶವಾದರೂ ಸಂಬಂಧಿಸಿರಬಹುದೆಂಬ ಕಲ್ಪನೆಯೇ ಮನಸ್ಸಿನಲ್ಲಿ ಮೂಡುವದಿಲ್ಲ. ಇಷ್ಟೇ ಅಲ್ಲ, ಅದನ್ನು ಓದುವವರಿಗೆ ಅದು ಮಹಾರಾಷ್ಟ್ರದ ಇತಿಹಾಸವೆಂತಲೇ ಭಾಸವಾಗುತ್ತದೆ. ಆದುದರಿಂದ ಅದನ್ನೋದುವ ಕನ್ನಡಿಗರು, ಡಾಕ್ಟರರವರು ಆ ಪುಸ್ತಕವನ್ನು ತಮ್ಮ ಪ್ರಾಂತದ ಇತಿಹಾಸವೆಂಬ ದೃಷ್ಟಿಯಿಂದ ಬರೆದಿದ್ದರೂ ಅದು ಮುಖ್ಯವಾಗಿ ಕರ್ನಾಟಕದ ಇತಿಹಾಸವೇ ಆಗಿರುತ್ತದೆಂಬ ಭಾವನೆಯುನ್ನು ಮನಸ್ಸಿನಲ್ಲಿ ದೃಢವಾಗಿಟ್ಟುಕೊಂಡು ಅದನ್ನು ಓದಬೇಕೆಂದು ನಾವು ಒತ್ತಾಯದಿಂದ ಸೂಚಿಸುತ್ತೇವೆ. ಇರಲಿ, ಕರ್ನಾಟಕದ ಹಳೆಯ ಇತಿಹಾಸಕ್ಕೆ ಈಗ ಆಧಾರಭೂತವಾಗಿರುವ ಇವೆರಡು ಗ್ರಂಥಗಳ ಕರ್ತರಿಗೆ ನಾವೆಲ್ಲರೂ ಅತ್ಯಂತ ಋಣಿಗಳಾಗಿದ್ದೇವೆ.

ರಾ. ಬಿ. ಸೂರ್ಯನಾರಾಯಣರಾವ ಮತ್ತು ಮಿ. ಸಿವೆಲ್ಲ ಸಾಹೇಬರು ಬರೆದ ವಿಜಯನಗರದ ಇತಿಹಾಸಗಳು ಕನ್ನಡಿಗರಿಗೆ ಸಾಮಾನ್ಯತಃ ಗೊತ್ತಿರುವುದರಿಂದ ಅವುಗಳ ಬಗ್ಗೆ ಹೆಚ್ಚಿಗೆ ಬರೆಯುವ ಕಾರಣವಿಲ್ಲ.

ಶುದ್ಧ ಕನ್ನಡಿಗರಲ್ಲಿ ಕೇವಲ ಕರ್ನಾಟಕದ ಅಭಿಮಾನದಿಂದ ಈ ವಿಷಯವನ್ನು ಅಭ್ಯಾಸ ಮಾಡಿದವರು ನಮಗೆ ಪೂಜ್ಯರಾದ ರಾ. ವೆಂಕಟರಂಗೊ ಕಟ್ಟಿ ಎಂಬವರೇ ! ಇವರು ತಮ್ಮ ಉತ್ಕಟವಾದ ದೇಶಾಭಿಮಾನದಿಂದ ಕರ್ನಾಟಕದ ಸೇವೆಯನ್ನು ಮಾಡಿರುವದರಿಂದ ಇವರ ಹೆಸರನ್ನು ಯಾವ ಕನ್ನಡಿಗನೂ ಮರೆಯುವಂತಿಲ್ಲ. ಇವರು ಸರಕಾರೀ ನವಕರಿಯಲ್ಲಿದ್ದಾಗ ಸರಕಾರದವರ ಅಪ್ಪಣೆಯ ಮೇರೆಗೆ ಕರ್ನಾಟಕ ಗ್ಯಾಝಿಟಿಯರನ್ನು ಕನ್ನಡದಲ್ಲಿ ಸರಸವಾಗಿ ಭಾಷಾಂತರಿಸಿರುವರು. ಇದು ನಮ್ಮ ಇತಿಹಾಸವನ್ನು ಅಭ್ಯಾಸ ಮಾಡುವವರಿಗೆ ಅವಶ್ಯವಾದ ಪುಸ್ತಕವು. ಇದಲ್ಲದೆ ಇವರು ಚಿಕ್ಕದೊಂದು ಕರ್ನಾಟಕದ ಇತಿಹಾಸವನ್ನು ಬರೆದಿರುವರು.

ರಾ. ಪಾಠಕರರಿಗೆ ಶಿಲಾಲಿಪಿಗಳ ಮೇಲೆ ಬಲು ಪ್ರೀತಿ. ಇವರು

೨೫–೩೦ ವರ್ಷಗಳಿಂದ ಈ ಲಿಪಿ ಶೋಧನದ ಕೆಲಸವನ್ನು ಆಗಾಗ ಮಾಡುತ್ತ ಬಂದಿರುತ್ತಾರೆ. ಈಗಲೂ ಅವರು ಆ ವ್ಯವಸಾಯುವನ್ನು ಬಿಟ್ಟಿಲ್ಲ.

ಇರಲಿ, ಇಲ್ಲಿಯುವರೆಗೆ ಕರ್ನಾಟಕದ ಇತಿಹಾಸದ ಬಗ್ಗೆ ಪ್ರತ್ಯಕ್ಷವಾಗಿಯಾಗಲಿ, ಅಪ್ರತ್ಯಕ್ಷವಾಗಿಯಾಗಲಿ ಯಾರು ಪ್ರಯತ್ನಪಟ್ಟರೆಂಬುದನ್ನೂ ಪಡುತ್ತಿರುವರೆಂಬುಡನ್ನೂ ನಿವೇದಿಸಿರುವೆವು. ಇವರೆಲ್ಲರ ಪ್ರಯತ್ನಗಳ ಫಲವನ್ನು ಗೊತ್ತುಮಾಡಿಕೊಂಡು, ಕೇವಲ ಇತಿಹಾಸದ ಅಭಿಮಾನದಿಂದ ಪ್ರೇರಿತರಾದ ಜನರು ಮುಂದೆ ಬಂದು ಈ ಕಾರ್ಯವನ್ನು ಕೈಕೊಳ್ಳಬೇಕೆಂದು ನಮ್ಮ ಪ್ರಾರ್ಥನೆ.

———

## ಪೂರಕ ಪ್ರಕರಣ ೨

## ಲಿಪಿಗಳ ಮುದ್ರಣ ಪದ್ಧತಿ

ವಾಚಕರೇ! ನಾವು ಈ ಪ್ರಕರಣದಲ್ಲಿ ಶಿಲಾಲಿಪಿ ಮತ್ತು ತಾಮ್ರಶಾಸನಗಳ ಮುದ್ರೆಗಳನ್ನು ತೆಗೆದುಕೊಳ್ಳುವ ರೀತಿಯನ್ನು ಹೇಳುವೆವು. ಶಿಲಾಲಿಪಿಗಳನ್ನು ಓದುವುದು ತುಸು ಕಠಿಣ ಕಾರ್ಯವು. ಆದರೆ ಅವುಗಳನ್ನು ಕಾಗದದ ಮೇಲೆ ಮುದ್ರಿಸಿಕೊಳ್ಳುವುದು ಅಷ್ಟೊಂದು ಕಠಿಣವಾದ ಕೆಲಸವಲ್ಲ. ಸ್ವಲ್ಪ ಅಭ್ಯಾಸದಿಂದ ಅದನ್ನು ಪ್ರತಿಯೊಬ್ಬನೂ ಕಲಿಯಬಹುದು. ಮೇಲಾಗಿ, ಈಗಿನ ಪರಿಸ್ಥಿತಿಯಲ್ಲಿ ಶಿಲಾಲಿಪಿಗಳನ್ನು ಓದುವುದಕ್ಕಿಂತ ಲಿಪಿಗಳನ್ನು ಸಂಗ್ರಹಿಸುವ ಕೆಲಸವು ಹೆಚ್ಚು ಮಹತ್ವದ್ದಾಗಿದೆ. ಶೋಧದ (research) ಕ್ಕಿಂತ ರಕ್ಷಣವು (Conservation) ಹೆಚ್ಚು ಮಹತ್ವವುಳ್ಳದ್ದೆಂದು ಅನೇಕ ವರ್ಷಗಳ ಅನುಭವದಿಂದ ಗೊತ್ತಾಗಿದೆ. ಆದುದರಿಂದ ನಾವು ನಮ್ಮ ದೇಶದಲ್ಲಿ ಅಲ್ಲೊಂದು ಇಲ್ಲೊಂದು ಬಿದ್ದಿರುವ ಶಿಲಾಲಿಪಿಗಳನ್ನು ಮೊದಲು ರಕ್ಷಿಸಬೇಕು. ಮತ್ತು ಅವುಗಳ ಮುದ್ರಣವನ್ನು ತೆಗೆದು, ಇತಿಹಾಸ-ಮಂಡಲದಂಥ ಒಂದು ಸಂಸ್ಥೆಯಲ್ಲಿ ಸಂಗ್ರಹಿಸಿಟ್ಟರೆ, ಇಂದಿಲ್ಲ ನಾಳೆ ಯಾವ ಪುಣ್ಯಾತ್ಮನಾದರೂ ಅವುಗಳನ್ನು ಓದಿ ಸಾರವನ್ನು ತೆಗೆದಾನು, ಆದರೆ ಈ ವಿಷಯದಲ್ಲಿ ಇಲ್ಲಿಯ ವರೆಗೆ ಆದ ಕೆಲಸವನ್ನು ನಾವು ಮೊದಲು ಅರಿತುಕೊಳ್ಳದೆ ಕೆಲಸಕ್ಕೆ ಪ್ರವೃತ್ತರಾದರೆ ನಿಷ್ಕಾರಣವಾಗಿ ಶ್ರಮವೂ ವೆಚ್ಚವೂ ಬೆಳೆಯುವದು. ಆದಕಾರಣ ಮುದ್ರಣದ ರೀತಿಯನ್ನು ಹೇಳುವ ಪೂರ್ವದಲ್ಲಿ ಎಷ್ಟು ಶಿಲಾಲಿಪಿಗಳು ಮುದ್ರಿತವಾಗಿರುತ್ತವೆಂಬುದನ್ನು ಹೇಳುವೆವು. ನಮ್ಮ ಸುದೈವದಿಂದ ೯೦೦ನೆಯ ಇಸವಿಯ ವರೆಗೆ ಮುದ್ರಿತವಾದ ಶಿಲಾಲೇಖಗಳದೊಂದು ಸಂಪೂರ್ಣ ಪಟ್ಟಿಯನ್ನು ಪ್ರೊ. ಕಿಲಹಾರ್ನ ಎಂಬವರು ಎಪಿಗ್ರಾಫಿಯಾ ಇಂಡಿಕಾ (Epigraphia Indica) ಪತ್ರಿಕೆಯ ೭ನೆಯ ಸಂಪುಟದ ಕೊನೆ

ಯಲ್ಲಿ ಕೊಟ್ಟಿರುತ್ತಾರೆ. ಇದರಲ್ಲಿ, ಸುಮಾರು ೧೦೦೦ ಶಾಸನಗಳ ಯಾದಿಯು ಇರುತ್ತದೆ. ಅವುಗಳಲ್ಲಿ ೨೧೦ ತಾಮ್ರಶಾಸನಗಳೂ ೮೯೦ ಶಿಲಾಶಾಸನಗಳೂ ಇರುತ್ತವೆ. (೩೨೦ ಕನ್ನಡ, ೨೯೦ ಸಂಸ್ಕೃತ, ೯೦ ಕನ್ನಡ ಸಂಸ್ಕೃತಮಿಶ್ರ, ಮಿಕ್ಕವು ತೆಲುಗು ಮುಂತಾದವುಗಳು.) ಮುಂದಿನ ಪಟ್ಟಿಯನ್ನು ಮಾತ್ರ ತಯಾರಿಸಬೇಕಾಗಿದೆ. ಇದಲ್ಲದೆ ಡಾ. ಫ್ಲೀಟ ಸಾಹೇಬರು ತೆಗೆದುಕೊಂಡ ೫೦೦-೬೦೦ ಮುದ್ರಣಗಳ ಸಂಗ್ರಹವು ಪುಣೆಯಲ್ಲಿ ಆರ್ಕಿಯಾಲಿಜಿಕಲ್ ಡಿಪಾರ್ಟಮೆಂಟಿನ ಒಂದು ಕೊಠಡಿಯಲ್ಲಿ ಬಿದ್ದಿರುವುದನ್ನು ನಾವು ಸ್ವತಃ ನೋಡಿದ್ದೇವೆ. ಅದರ ಪಟ್ಟಿಯು ಅಲ್ಲಿ ದೊರೆಯಲಿಲ್ಲ. ಆ ಪಟ್ಟಿಯೊಂದನ್ನು ಸಿದ್ಧ ಮಾಡಿದರೆ, ಯಾವ ಯಾವ ಶಿಲಾಲಿಪಿಗಳು ಮುದ್ರಿತವಾಗಿವೆಯೆಂಬುದನ್ನು ತಿಳಿದುಕೊಳ್ಳಲಿಕ್ಕೆ ಅನುಕೂಲವಾಗುವದು. ಇಷ್ಟು ಮಾಹಿತಿಯು ದೊರೆಯಬೇಕಾದರೆ ನಮಗೆ ಪ್ರಯಾಸವಾದುದರಿಂದ ಮುಂದೆ ಮಾರ್ಗದರ್ಶಿಯಾಗಬೇಕೆಂದು ನಾವು ಈ ಮಾಹಿತಿಯನ್ನು ಇಲ್ಲಿ ನಮೂದಿಸಿ ಇಟ್ಟಿರುವೆವು.

ಲಿಪಿಗಳನ್ನು ಓದುವ ಕೆಲಸಕ್ಕೆ ಏನಾದರೂ ಹಂಚಿಕೆಯುಂಟೋ ಎಂಬ ಬಗ್ಗೆ ನಾವು ಬಹಳ ಶೋಧಿಸಿದ್ದೇವೆ. ಆದರೆ ಅದು ಕೇವಲ ಅಭ್ಯಾಸದಿಂದಲೇ ಸಾಧ್ಯವಾಗತಕ್ಕುದೆಂದು ಅನೇಕ ತಜ್ಞರ ಮತವುಂಟು. ಆದರೂ ತೀರ ಹಿಂದಿನ ಅಕ್ಷರಗಳ ಸರಣಿಯು ಹೇಗಿತ್ತೆಂಬುದು ಕೆಲ ಮಟ್ಟಿಗೆ ಮುಂದೆ ಕಾಣಿಸಿದ ಪುಸ್ತಕಗಳಿಂದ ಗೊತ್ತಾಗುವದು. (೧) (English tarnslation og Bulher's Indische Palaeographic and the tables called Tafels.) (೨) ಭಾರತೀಯ ಪ್ರಾಚೀನ ಲಿಪಿಮಾಲಾ ಎಂಬ ಹಿಂದೀ ಪುಸ್ತಕದಲ್ಲಿ ಕನ್ನಡ ಅಕ್ಷರಗಳ ಅನೇಕ ಮಾದರಿಗಳು ಕೊಡಲ್ಪಟ್ಟಿವೆ.

ಮೇಲೆ ಹೇಳಿದ ಸೂಚನೆಗಳನ್ನು ಲಕ್ಷದಲ್ಲಿಟ್ಟು ಮುಂದಿನ ರೀತಿಯಂತೆ ಮುದ್ರಣಗಳನ್ನು ತೆಗೆದುಕೊಳ್ಳಬೇಕು. ಈ ಕೆಲಸಕ್ಕೆ ಇಂಗ್ಲಿಷ ಜ್ಞಾನವು ಬೇಕೇಬೇಕೆಂತಲೂ ಇಲ್ಲ. ಈ ವಿಷಯದ ಕಡೆಗೆ ಕನ್ನಡ ಅಧ್ಯಾಪಕರ ಲಕ್ಷ್ಯವು ವೇಧಿಸಿದರೆ ನಮ್ಮ ಕಾರ್ಯವು ಸುಲಭವಾಗಿ ಆಗಬಹುದಾಗಿದೆ.

## ಮುದ್ರಣದ ರೀತಿ

(೧) ಮೊದಲು ಕಲ್ಲಿನಲ್ಲಿ ಕೂತಂಥ ಮಣ್ಣು, ಸುಣ್ಣ, ಎಣ್ಣೆ ಮುಂತಾದುವನ್ನು ಮೆಲ್ಲನೆ ಮೊಳೆಗಳಿಂದ ತೆಗೆದು ಕಲ್ಲನ್ನು ಚೆನ್ನಾಗಿ ತೊಳೆಯಬೇಕು. ಹೀಗೆ ಮಾಡುವಾಗ, ಅಕ್ಷರಗಳು ನಿಚ್ಚಳವಾಗಿ ಕಾಣ ಬೇಕೆಂದು ಯಾವ ಸಾಮಾನುಗಳನ್ನೂ ಕಲ್ಲಿಗೆ ಒತ್ತಿ ತಿಕ್ಕಬಾರದು. ಅಕ್ಷರ ಗಳು ನೆಟ್ಟಗೆ ಕಾಣಬೇಕೆಂದು ಕಲ್ಲಿಗೆ ಮಸಿಹಚ್ಚಿ ಕಪ್ಪು ಮಾಡಬಾ ರದು. ಇದರಿಂದ ಅಕ್ಷರಗಳು ತಿಳಿಯುವುವೆಂದು ನಿಮಗೆ ಮೊದಲು ತೋರಿದರೂ ಅದು ಕಲ್ಲನ್ನು ಕೆಡಿಸಿಬಿಡುವುದಲ್ಲದೆ, ಮುಂದೆ, ನೋಡು ವವರಿಗೂ ತೊಂದರೆಯುಂಟು.

(೨) ಪ್ರಥಮತಃ ವೃತ್ತಪತ್ರಿಕೆಗಳಿಗೆ ಬಳಸುವ ಉತ್ತಮ ತರದ ಕಾಗದವನ್ನು ತೆಗೆದುಕೊಂಡು ಅದನ್ನು ಕೆಲವು ನಿಮಿಷ ನೀರಿನಲ್ಲಿ ತೋಯಿಸಬೇಕು. ಹುರುಬರಕಾದ ಲಿಪಿಗಳಿಗೆ ದೇಶೀಯ ಕಾಗದಗಳನ್ನು ಬಳಸಬೇಕು. ಆ ಕಾಗದವನ್ನು ನೀರಿನಲ್ಲಿ ತೋಯಿಸಿಡಬೇಕು. ಫೂಲ ಸ್ಕೇಪ ಕಾಗದಗಳು ಸಾಮಾನ್ಯವಾಗಿ ಎಲ್ಲ ತರದ ಲಿಪಿಕಲ್ಲುಗಳಿಗೂ ಉಪಯೋಗಕ್ಕೆ ಬರುತ್ತವೆ.

(೩) ಆ ತೋಯಿಸಿದ ಕಾಗದವನ್ನು, ಅತ್ತಿತ್ತ ಸರಿದಾಡದಂತೆ ಒಂದೇ ಸಮನಾಗಿ ಆ ಲಿಪಿಕಲ್ಲಿನ ಮೇಲೆ ಇಡಬೇಕು. ನಡುನಡುವೆ ಮಡಿಕೆ ಬೀಳಗೊಡಬಾರದು. ಆ ತೋಯಿಸಿದ ಪತ್ರವು ಆಗ ಕಲ್ಲಿಗೆ ಅಂಟಿ ಕೊಳ್ಳುವುದು.

(೪) ಕೂಡಲೇ, ಬಿರುಸಾದ ಕುಂಚನ್ನಾದರೂ ವಸ್ತ್ರವನ್ನಾದರೂ ತೆಗೆದುಕೊಂಡು ಗಾಳಿಯಿಂದ ಹಾರದೆ ಕಾಗದವು ಕಲ್ಲಿಗೆ ಅಚ್ಚುಕಟ್ಟಾಗಿ ಹತ್ತಿಕೊಳ್ಳುವಂತೆ ಮೆಲ್ಲಗೆ ಜಾಣತನದಿಂದ ಒತ್ತಬೇಕು. ಆ ಕಾಗದ ವೆಲ್ಲ ಸಂದಿಗೊಂದಿ ಸಹ ಬಿಡದಂತೆ ಕಲ್ಲಿಗೆ ಸರಿಯಾಗುವಂತೆ ಹಗುರಾಗಿ ಒತ್ತುತ್ತಿರಬೇಕು. ಅಕ್ಷರಗಳು ಆಳವಾಗಿ ಕೊರೆಯಲ್ಪಟ್ಟಿದ್ದರೆ ಅಥವಾ ಮೇಲ್ಪದಿಯು ಡೊಂಕಾಗಿದ್ದರೆ ಕಾಗದಕ್ಕೆ ಅನೇಕ ಕಡೆಗೆ ರಂಧ್ರಗಳು ಬೀಳುವವು. ಹೀಗಾದ ಪಕ್ಷಕ್ಕೆ, ಆ ಕಾಗದದ ಮೇಲೆ ಮತ್ತೊಂದು,

ಅದು ಹರಿಯಹತ್ತಿದರೆ ಮತ್ತೂ ಒಂದು ಕಾಗದವನ್ನು ಮೊದಲಿನಂತೆಯೇ ತೋಯಿಸಿ ಹಾಕಿ ಒತ್ತಬೇಕು.

(೫) ಒತ್ತುವ ಕ್ರಮವು ಮುಗಿದೊಡನೆಯೆ ಕಾಗದವನ್ನು ತೆಗೆಯಬಾರದು. ಒಣಗಿದ ಕೂಡಲೆ ಅದು ತನ್ನಷ್ಟಕ್ಕೆ ತಾನೇ ಕಳಚಿ ಬೀಳುವುದು. ಅದೆಲ್ಲ ಮುಗಿದ ನಂತರ ನಿಮ್ಮ ಕಾಗದವು ಮುದ್ರಿಸಿದಂತಾಗುವುದು. ಈ ಕಾಗದವು ಒಣಗಿರುವ ಕಾರಣ, ಅದು ಬಹು ಬಿರುಸಾಗಿದ್ದು ಎಷ್ಟು ಒತ್ತಿದರೂ ಹಾಗೇ ಇರುತ್ತದೆ. ಆಮೇಲೆ ಅದನ್ನು ಸುರುಳಿ ಸುತ್ತಿಟ್ಟು ಅದು ಒದ್ದೆಯಾಗದಂತೆ ಎಚ್ಚರವಿಡಬೇಕು.

(೬) ಕಾಗದವು ಕಲ್ಲಿಗೆಲ್ಲ ಸಾಕಾಗುವಷ್ಟು ದೊಡ್ಡದಾಗಿರದಿದ್ದರೆ, ಮೇಲೆ ಹೇಳಿದ ರೀತಿಯಲ್ಲಿಯೇ ಕಲ್ಲುಗಳ ಒಂದೊಂದೇ ಭಾಗವನ್ನು ಅಳತೆ ಮಾಡಿ ತೆಗೆದುಕೊಳ್ಳಬೇಕು. ಆದರೆ ಈ ಮುದ್ರಣವಾದ ಕೂಡಲೆ ಆಯಾ ಕಾಗದಗಳಿಗೆ ನಂಬರುಗಳನ್ನು ಹಾಕಿ ಜೋಡಿಸಿ ಅದರ ಮೇಲೆ ಅದು ಇಂಥ ಗುಡಿಯಲ್ಲಿ ಇಂಥ ದಿಕ್ಕಿಗಿರುವ ಶಿಲಾಲೇಖವೆಂದು ಮುಂತಾಗಿ ಬರೆಯುವದಕ್ಕೆ ಮರೆಯಬಾರದು.

(೭) ಮಿಕ್ಕ ಯಂತ್ರಗಳ ಕೆಲಸದಂತೆ ಈ ಕೆಲಸವನ್ನು ಮಾಡಲಿಕ್ಕೂ ರೂಢಿಯು ಬೇಕಾಗುತ್ತದೆ. ಪ್ರತಿಯೊಂದರ ಮೂರು ನಾಲ್ಕು ಮುದ್ರಣಗಳನ್ನು ತೆಗೆದುಕೊಂಡರೆ ಅಕ್ಷರಗಳ ತಪ್ಪುಗಳನ್ನು ತಿಳಿಯಲಿಕ್ಕೂ, ಅವುಗಳನ್ನು ತಿದ್ದಲಿಕ್ಕೂ ಅನುಕೂಲವಾಗುವದರಿಂದ ಬೇರೆ ಬೇರೆ ಮೂರು ನಾಲ್ಕು ಪ್ರತಿಗಳನ್ನು ಮುದ್ರಿಸಿಕೊಳ್ಳುವುದು ಒಳ್ಳೆಯದು.

೨ನೆಯ ರೀತಿ:— ಈ ರೀತಿಯೂ ಮೇಲಿನಂತೆಯೇ ಇದ್ದರೂ ಯೋಗ್ಯವಾದ ಮತ್ತು ಹದನಾದ ಉಪಕರಣಗಳೂ ಅನುಭವವೂ ಇದ್ದರೆ ಇದರಲ್ಲಿ ಮುದ್ರೆಗಳು ಹೆಚ್ಚು ಸ್ಫುಟವಾಗಿ ಮೂಡುವವು. ಮೊದಲು ಮುದ್ರಕರು ರೋಲರ್ ಒಂದನ್ನು ತೆಗೆದುಕೊಂಡು ಅದಕ್ಕೆ ಮಸಿ ಹಚ್ಚಿ, ಕಲ್ಲು ಸ್ವಲ್ಪ ತಣ್ಣಗಿರುವಾಗಲೇ (ಆದರೆ ಒದ್ದೆಯಲ್ಲ) ಅದರ ಮೇಲೆ ಉರುಳಿಸಬೇಕು, ಚರ್ಮಸಹಿತವಾದ ಉಣ್ಣೆಯ ಕುಂಚದಿಂದ ಅದನ್ನು ಮೆಲ್ಲಗೆ ಒತ್ತಿದರೆ, ಮಸಿ ಹತ್ತದಿರುವಲ್ಲಿ ಮಸಿ ಹತ್ತ

ವುದು, ಮತ್ತು ಮಸಿ ಹೆಚ್ಚು ಹತ್ತಿದ ಸ್ಥಳವು ಬೆಳ್ಳಗಾಗುವುದು. ಇದ ರಿಂದ ಸೂಕ್ಷ್ಮ ಕೆಲಸವು ಬಹು ಸೊಗಸಾಗುವದು. ಆ ಮೇಲೆ ಪೂರ್ವ ದಂತೆ ಕಾಗದವನ್ನು ಕಲ್ಲಿನ ಮೇಲೆ ಒಣಗಲಿಕ್ಕೆ ಬಿಡಬೇಕು. ಮತ್ತು ಏನಾದೀತೋ ಎಂದು ಸಂಶಯ ತೆಗೆದುಕೊಳ್ಳದೆ ಸುರುಳಿಯಾಗಿ ಸುತ್ತ ಬೇಕು. ಇದಕ್ಕಾಗಿ ಬೇಕಾಗುವ ಮಸಿಗಾಗಿ ಪರ್ಶಿಯನ್ ಮಸಿಯನ್ನಾ ದರೂ ಬಳಸಬಹುದು. ಹೆಚ್ಚು ಮಸಿಯನ್ನು ಹಾಕಿದರೆ ಮುದ್ರೆಯು ಕೆಡುವದು. ಆದುದರಿಂದ ಸರಿಯಾಗಿ ಬೇಕಾದಷ್ಟು ಮಸಿಯನ್ನೇ ಹಾಕ ಬೇಕು. ಆದರಂತೆ 'ರೂಲ'ವನ್ನು ಒತ್ತುವಾಗ ಅದನ್ನು ಒಂದೇ ಸಮ ನಾಗಿ ಉರುಳಿಸಬೇಕು. ಎಂದರೆ ಅಕ್ಷರಗಳ ಸಂದಿಯಲ್ಲಿ ಮಸಿ ಹೋಗದೆ ಅಕ್ಷರಗಳು ಬೆಳ್ಳಗೆ ಉಳಿಯುವವು. ಮಿಕ್ಕ ಕಡೆಗೆ ಮಸಿ ಹತ್ತುವುದು.

**೩ನೆಯ ರೀತಿ**— ಈ ರೀತಿಯು ಬಹಳ ಸುಲಭವಾಗಿರುತ್ತದೆ. ವಿಶೇಷ ಖರ್ಚೂ ಬೇಡ. ಇದು ಮೇಲಿನ ರೀತಿಯಂತೆಯೇ ಇರುತ್ತದೆ. ಲಿಪಿಗಳಿಗೆ ಒದ್ದೆಯ ಕಾಗದವನ್ನು ಅಂಟಿಸಿ, ಬಿರುಸಾದ ಕುಂಚಿನಿಂದ ಮೆಲ್ಲಗೆ ಅಕ್ಷರಗಳ ಮೇಲೆ ಬಡೆಯಬೇಕು. ಅಂದರೆ ಅಕ್ಷರಗಳ ಸಂದಿ ಯಲ್ಲಿ ಆ ಒದ್ದೆಯ ಕಾಗದವು ಹೋಗಿ ಕೂಡುವುದು. ಕೂಡಲೆ ಚರ್ಮದ ಪ್ಯಾಡ್ ಒಂದನ್ನು ತೆಗೆದುಕೊಂಡು ಅದಕ್ಕೆ ಎರಡನೆಯ ರೀತಿಯಲ್ಲಿ ಹೇಳಿದಂತೆ ತಯಾರು ಮಾಡಿದ ಕಾಡಿಗೆಯ ಮಸಿಯನ್ನು ಹಚ್ಚಿ; ಆ ಒದ್ದೆಯ ಕಾಗದದ ಮೇಲೆ ಬಡೆಯಬೇಕು. ಹಾಗೆ ಮಾಡಿದರೆ ಅಕ್ಷರ ಗಳ ಸಂದಿಯಲ್ಲಿ ಕುಳಿತ ಕಾಗದಕ್ಕೆ ಮಸಿಯು ಹತ್ತದೆ ಮಿಕ್ಕ ಕಡೆಗೆಲ್ಲ ಮಸಿ ಹತ್ತುವುದು. ಅಕ್ಷರಗಳು ಬೆಳ್ಳಗಾಗಿ ಕಾಣುವವು. ಕಾಡಿಗೆಯಲ್ಲಿ ಅಂಟು ಬಹಳ ಹಾಕಬಾರದು. ಕಾಡಿಗೆಯು ಹಾರಿ ಹೋಗಬಾರದೆಂದು ಸ್ವಲ್ಪ ಅಂಟು ಹಾಕಬೇಕಾಗುತ್ತದೆ. ರಬ್ಬರ ಸ್ಟಾಂಪು ಒತ್ತುವಂತೆ ಆ ಒದ್ದೆಯ ಕಾಗದದ ಮೇಲೆ ಮೆಲ್ಲಗೆ ಹಚ್ಚಬೇಕು.

**ತಾಮ್ರಶಾಸನ ಮುದ್ರಣ**— ಮೊದಲು ತಾಮ್ರಪಟವನ್ನು ಸಬಕಾರ ಹಚ್ಚಿ ಚನ್ನಾಗಿ ತೊಳೆಯಬೇಕು. ಅದರಿಂದ ಸ್ವಚ್ಛವಾಗದಿದ್ದರೆ ನೈಟ್ರಿಕ್ ಅಸಿಡ್‌ನ ನೀರನ್ನು ಸ್ವಲ್ಪ ಹಾಕಬೇಕು. ಈ ನೀರನ್ನು

ಹೆಚ್ಚು ಹಾಕಿದರೆ ಶಾಸನವು ಕೆಡುವ ಸಂಭವವದೆ. ಆ ಶಾಸನವು ಒಣ ಗಿದ ನಂತರ ಮುದ್ರಿಸುವ ಮಸಿಯನ್ನು ಕುಂಚಿನಿಂದ ಮೆಲ್ಲಗೆ ಬಳೆಯ ಬೇಕು. ಇದಕ್ಕಾಗಿಯೇ ಒಂದು ದೊಡ್ಡ ಕುಂಚವನ್ನು ಮಾಡಿಸಿಡ ಬೇಕು ಅಥವಾ ಒಂದು ಕಾಜಿನ ತುಣಕನ್ನು ತೆಗೆದುಕೊಂಡು, ಅದರ ಮೇಲೆ ಮಸಿಯನ್ನು ಹಾಕಿ, ಅದನ್ನೆಲ್ಲ ಅದಕ್ಕೆ ಚೆನ್ನಾಗಿ ಒಂದೂ ಕಡೆಗೆ ಬಿಡದಂತೆ ಹಚ್ಚಬೇಕು. ಡ್ರಾಯಿಂಗ ಪೇಪರದಂಥ ದಪ್ಪಾದ ಮೆತ್ತ ಗಿನ ಕಾಗದವೇ ಒಳ್ಳೆಯದು. ಕಾಗದವನ್ನು ತಾಮ್ರಪಟಕ್ಕಿಂತ ಹೆಚ್ಚು ದೊಡ್ಡದಾಗಿ ಕತ್ತರಿಸಿ, ಸ್ವಲ್ಪ ನೀರು ಚಿಮ್ಮಡಿಸಿ, ಅದರ ಮೇಲ್ಭಾಗ ವನ್ನು ಶಾಸನದ ಮೇಲೆ ಹಾಕಿ, ಕಾಗದವನ್ನು ಹಿಮ್ಮಗ್ಗಲಿಗೆ ಮಡಿಚ ಬೇಕು. ಹೀಗೆ ಮಾಡಿದರೆ, ಆ ಶಾಸನವು ಅತ್ತಿತ್ತ ಅಲುಗಾಡುವುದಿಲ್ಲ. ಶಾಸನಕ್ಕೆ ಬಳೆಯಿದ್ದರೆ, ಆ ಕಾಗದದೊಳಗೆ ಬಳೆ ಹಾಯುವಂತಹ ದೊಂದು ರಂಧ್ರವನ್ನು ಮಾಡಬೇಕು. ಮೇಲ್ಭಾಗವನ್ನು ಬಿರುಸಾದ ಸ್ವಚ್ಛ ಕಾಗದದಿಂದ ಮೆಲ್ಲನೆ ಒತ್ತಬೇಕು. ಒತ್ತದೆ ಇರುವ ಸ್ಥಳದಲ್ಲಿ ಒಂದು ಹಸೀ ಬಟ್ಟೆಯನ್ನು ಯಾವಾಗಲೂ ಮುಚ್ಚಿ ಇಡಬೇಕು. ಆಮೇಲೆ ಧಕ್ಕೆಯಾಗದಂತೆ ಕಾಗದವನ್ನು ತೆಗೆದು ಒಣಗಲಿಕ್ಕೆ ಇಡಬೇಕು. ಮುದ್ರೆ ಗಳು ಹಿಮ್ಮುಖ ಆಗಿರುತ್ತವೆ. ಆದರೆ ಫೋಟೋ ತೆಗೆದುಕೊಂಡರೆ ಅವು ಮತ್ತೆ ಮುಮ್ಮುಖ ಆಗುತ್ತವೆ. ಮಸಿಯ ಕಲೆಗಳು ಪೂರ್ಣವಾಗಿ ಹೋಗ ಬೇಕಾದರೆ ಟರ್ಪೆಂಟಾಯಿನವನ್ನು ಸ್ವಲ್ಪ ಹಚ್ಚಿ, ಆಮೇಲೆ ಶಾಸನವನ್ನು ಸಬಕಾರದಿಂದ ತೊಳೆಯಬೇಕು. ಹಾಗೆ ಮಾಡಿದರೆ ಅದು ಸ್ವಚ್ಛವಾ ಗುವದು.

ಮೇಲೆ ಹೇಳಿದ ರೀತಿಗಳಲ್ಲದೆ ಮಿಕ್ಕ ರೀತಿಗಳುಂಟು. ಆದರೆ ಅವಕ್ಕೆ ಬಹಳ ವೆಚ್ಚ ತಗಲುವುದರಿಂದ ಸಾಮಾನ್ಯ ಜನರಿಗೆ ಸಾಧ್ಯವಿಲ್ಲ. ಆದರೆ, ತಾಮ್ರಶಾಸನವನ್ನು ಆರ್ಕೆಯಾಲಾಜಿಕಲ್ ಖಾತೆಯವರ ಕಡೆಗೆ ಕಳಿಸುವದೇ ಒಳ್ಳೆಯದು. ಅವರು ಅದರ ತಸಬೀರು ತೆಗೆದುಕೊಂಡು ತಿರುಗಿ ಕಳಿಸುವರು.

---

## ಕಲ್ಯಾಣ ಚಾಲುಕ್ಯರ ವಂಶಾವಳಿ

( ಸುಧಾರಿಸಿದ್ದು )

ನಾಲ್ಕನೆಯ ವಿಕ್ರಮಾದಿತ್ಯ (ತ್ರಿಭುವನಮಲ್ಲ)

|

(೧) ತೈಲ II ೯೭೩-೯೯೭

|

(೨) ಇರಿವ ಬೆಡಂಗ ಸತ್ಯಾಶ್ರಯ ೯೯೭-೧೦೦೮ — ದಶವರ್ಮನ್ ಅಥವಾ ಯಶೋವರ್ಮನ್

|

(೩) ವಿಕ್ರಮಾದಿತ್ಯ V ೧೦೦೯-೧೦೧೪ — (೪) ಅಯ್ಯಣ ೧೦೧೪ — (೫) ಜಯಸಿಂಹ II ಜಗದೇಕಮಲ್ಲ ೧೦೧೫-೧೦೪೨

(೬) ಸೋಮೇಶ್ವರ I ೧೦೪೨-೧೦೬೮

|

(೭) ಸೋಮೇಶ್ವರ II ೧೦೬೮-೧೦೭೬ — (೮) ವಿಕ್ರಮಾದಿತ್ಯ VI ೧೦೭೬-೧೧೨೭

|

(೯) ಸೋಮೇಶ್ವರ III

# ಅನುಬಂಧ

## ಕರ್ನಾಟಕದಲ್ಲಿ ಇತಿಹಾಸ ಸಂಶೋಧನೆಯ ಪ್ರಗತಿ

ಶ್ರೀ ಆಲೂರ ವೆಂಕಟರಾಯರ "ಕರ್ನಾಟಕ ಗತವೈಭವ" ಹತ್ತನೆಯ ಆವೃತ್ತಿಯನ್ನು ಹೊಂದಿದೆಯೆಂದಾಗ, ಅದರ ಜನಪ್ರಿಯತೆಗೆ ಬೇರೆ ಸಾಕ್ಷಿ ಬೇಕಿಲ್ಲ. ಓದುಗರು ಬಲ್ಲಂತೆ ಈ ಗ್ರಂಥ ಬರಿ ಹಿಂದಿನ ಆಗುಹೋಗುಗಳನ್ನು ವಿವರಿಸುವಂಥದಲ್ಲ. ಕೆಚ್ಚಿನ ಭಾಷೆಯಿಂದ ಕನ್ನಡಿಗರ ಅಭಿಮಾನವನ್ನು ಬಡಿದೆಬ್ಬಿಸಿ, ಹಿಂದಿನ ವೈಭವದ ಬೆಳಕಿನಲ್ಲಿ ಮುನ್ನುಗ್ಗಲು ಪ್ರೇರೇಪಿಸುವ ಗ್ರಂಥ. ಇಂಥ ಗ್ರಂಥವನ್ನು ಪರಿಷ್ಕರಿಸುವದು ಸಾಹಸವೇ. ಆದರೂ ಇದರ ಉಪಯುಕ್ತತೆ ಹೆಚ್ಚಾಗಲೆಂಬ ಅಪೇಕ್ಷೆಯಿಂದ ಇದು ಪ್ರಕಟವಾದಂದಿನಿಂದ– ಕಳೆದ ೫೦ ವರ್ಷಗಳಲ್ಲಿ– ಕನ್ನಡ ಸಂಶೋಧನೆಯಲ್ಲಿ ಆದ ಪ್ರಗತಿಯನ್ನು ಈ ಗ್ರಂಥಕ್ಕೆ ಪೂರಕವಾಗಿ ಸ್ಥೂಲವಾಗಿ ವಿವರಿಸಲಾಗಿದೆ.

ಪ್ರಸ್ತುತ ಗ್ರಂಥದ ೫ನೆಯ ಪ್ರಕರಣದಲ್ಲಿ ಶ್ರೀಯುತರು ಇತಿಹಾಸ ರಚನೆಯ ಸಾಧನ ಸಾಮಗ್ರಿಗಳನ್ನು ಸಂಕ್ಷಿಪ್ತವಾಗಿ ನಿರೂಪಿಸಿದ್ದಾರೆ. ಮತ್ತು ಈ ಸಾಧನ ಸಾಮಗ್ರಿಗಳ ಸಂಶೋಧನೆಯಲ್ಲಿ ನಡೆದ ಕೆಲಸದ ಬಗ್ಗೆ "ಕರ್ನಾಟಕ-ಇತಿಹಾಸ-ಸಂಶೋಧನ" ಎಂಬ ಪೂರಕ ಪ್ರಕರಣದಲ್ಲಿ ವಿವೇಚಿಸಿದ್ದಾರೆ. ಅಲ್ಲಿಂದಾಚೆ ಈ ಕ್ಷೇತ್ರದಲ್ಲಿ ಗಮನಾರ್ಹವಾದ ಪ್ರಗತಿಯಾಗಿದೆ. ಅದನ್ನಿಲ್ಲಿ ಅವಲೋಕಿಸಲಾಗಿದೆ.

### ಭೂ–ಶೋಧನೆ

ಇತಿಹಾಸ ಪೂರ್ವಕಾಲದ ಜನಜೀವನದ ಬಗ್ಗೆ ತಿಳುವಳಿಕೆಯನ್ನುಂಟು ಮಾಡಿಕೊಡುವಲ್ಲಿ, ಭೂ-ಶೋಧನೆ ಅಂದರೆ ಭೂಮಿಯನ್ನಗೆದು (Excavation) ಅಲ್ಲಿ ದೊರೆತ ಸಾಮಗ್ರಿಗಳನ್ನು ಪರಿಶೀಲಿಸುವದು ಮುಖ್ಯವಾದ ಸಾಧನ. ಹರಪ್ಪಾ, ಮೊಹೊಂಜೋದಾರೋಗಳಲ್ಲಿ ಅಗೆತದಿಂದ ಹೊಸ

ದೊಂದು ಸಂಸ್ಕೃತಿಯು ಬೆಳಕಿಗೆ ಬಂದದ್ದು ಎಲ್ಲರಿಗೂ ತಿಳಿದ ವಿಷಯ ವಾಗಿದೆ. ಕರ್ನಾಟಕದಲ್ಲಿ ಈ ರೀತಿಯ ದೊಡ್ಡ ಪ್ರಮಾಣದ ಭೂ-ಶೋಧನೆ ನಡೆದಿಲ್ಲವೇನೋ ಸರಿಯೇ. ಆದರೂ ಕೆಲವೆಡೆಗಳಲ್ಲಿ ನಡೆಯಿಸಿದ ಉತ್ಖನನ ದಿಂದ ಕ್ರಿ. ಪೂ. ೨ಸಾವಿರವರ್ಷಗಳ ಹಿಂದಿನ ಮಾನವನ ಜೀವನದ ಬಗ್ಗೆ ಹೊಸ ವಿಷಯಗಳು ತಿಳಿದು ಬಂದಿವೆ. ಇಂಥ ಕೆಲವು ಉತ್ಖನನಗಳನ್ನು ಇಲ್ಲಿ ಹೆಸ ರಿಸಬಹುದು. ಮೈಸೂರು ಪುರಾತತ್ವ ಶಾಖೆಯು ನಡೆಸಿದ ಟಿ. ನರಸೀಪುರದ ಬಳಿಯ ಉತ್ಖನನ, ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆ ಮತ್ತು ಪುಣೆಯ ಡೆಕ್ಕನ್ ಕಾಲೇಜ ಸಂಶೋಧನ ಸಂಸ್ಥೆ ಇವುಗಳು ಕೂಡಿ ನಡೆಯಿಸಿದ ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟ, ಸಂಗನಕಲ್ಲುಗಳಲ್ಲಿಯ ಉತ್ಖನನ, ಮತ್ತು ಇದೇ ಕನ್ನಡ ಸಂಶೋಧನ ಸಂಸ್ಥೆಯು ನಡೆಯಿಸಿದ ಹಿರೇಕೆರೂರು ತಾಲೂಕಿನಲ್ಲಿಯ ಹಳ್ಳೂರ ಬಳಿಯ ಉತ್ಖನನ. ತೀರ ಇತ್ತೀಚೆಗೆ ಗುಲ್ಬರ್ಗಾ ಜಿಲ್ಲೆಯ ಸನ್ನತಿ ಎಂಬ ಗ್ರಾಮದ ಬಳಿಯಲ್ಲಿ ಐತಿ ಹಾಸಿಕ ದೃಷ್ಟಿಯಿಂದ ಮಹತ್ವವಿರುವ ಸ್ಥಾನವನ್ನು ಕಂಡುಹಿಡಿಯಲಾ ಗಿದೆ. ಬೌದ್ಧ ಧರ್ಮದ ನೆಲೆಯಾಗಿದ್ದ ಈ ಸ್ಥಳದಲ್ಲಿ ದೊರೆತ ಕ್ರಿ. ಶ. ೧, ೨ನೆಯ ಶತಮಾನದ ಶಾಸನಗಳು, ದೊಡ್ಡಗಾತ್ರದ ಇಟ್ಟಂಗಿಗಳು, ಮಡಕೆಯ ಚೂರುಗಳು ಮುಂತಾದವುಗಳ ಪರಿಶೀಲನೆಯಿಂದ ಇಲ್ಲಿ ಉತ್ಖನನವನ್ನು ನಡೆಯಿಸಿದಾಗ, ಮಹತ್ವಪೂರ್ಣವಾದ ಅಂಶಗಳು ಬೆಳ ಕಿಗೆ ಬರುತ್ತವೆಯೆಂಬುದು ಸ್ಪಷ್ಟವಾಗುತ್ತದೆ.

## ಶಾಸನಗಳ ಶೋಧನೆ, ಸಂಗ್ರಹ

ನಾಡಿನ ಇತಿಹಾಸ ರಚನೆಗೆ ಶಾಸನಗಳ ಮಹತ್ವ ಎಷ್ಟೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಹಾಗೆ ನೋಡಿದರೆ, ನಮ್ಮ ಇತಿಹಾಸದ ಕಟ್ಟಡ ನಿಲ್ಲು ವದು ಶಾಸನಗಳ ಅಡಿಪಾಯದ ಮೇಲೆಯೇ ಎಂದು ಹೇಳಬಹುದು. ಈ ಕ್ಷೇತ್ರದಲ್ಲಿ ಅಂದರೆ ಶಾಸನಗಳ ಶೋಧನೆ ಮತ್ತು ಸಂಗ್ರಹಗಳ ಕಾರ್ಯ ದಲ್ಲಿ ಬಹಳಷ್ಟು ಪ್ರಗತಿಯಾಗಿದೆಯೆಂದು ಹೇಳಲಡ್ಡಿಯಿಲ್ಲ.

ಭಾರತದಲ್ಲಿ ಶಾಸನಗಳ ಸಂಗ್ರಹ ಮತ್ತು ಅಭ್ಯಾಸದ ಕಾರ್ಯವು ೧೯ ನೇ ಶತಮಾನದ ಕೊನೆಯ ಭಾಗದಿಂದಲೇ ಆರಂಭವಾಯಿತು. ಕನ್ನಡ

ನಾಡಿನ ಶಾಸನಗಳ ವಿಷಯವಾಗಿಯೂ ಇದೇ ಮಾತನ್ನು ಹೇಳಬಹುದು. ಈ ಕಾಲಕ್ಕೆ ಅಂದಿನ ಮೈಸೂರು ಸಂಸ್ಥಾನದಲ್ಲಿ ಪುರಾತತ್ವ ವಿಭಾಗದ ಮುಖ್ಯಾಧಿಕಾರಿಗಳಾದ ಲುಯಿ ರೈಸರು ಈ ಬೃಹತ್ ಕಾರ್ಯವನ್ನು ಕೈಕೊಂಡರು. ಅಲ್ಲಿಯ ಎಲ್ಲ ಜಿಲ್ಲೆಗಳಲ್ಲಿಯ ಶಾಸನಗಳನ್ನು ಸಂಗ್ರಹಿಸಿ, ಅವುಗಳನ್ನು ಕನ್ನಡ ಮತ್ತು ರೋಮನ್ ಲಿಪಿಗಳಲ್ಲಿ ಪೂರ್ತಿಪಾಠ ಮತ್ತು ಇಂಗ್ಲಿಷ ಭಾಷಾಂತರಗಳೊಂದಿಗೆ ೧೨ ಸಂಪುಟಗಳಲ್ಲಿ ( Epigraphia Carnatica ) ಪ್ರಕಟಿಸಿದರು. ಕನ್ನಡ ನಾಡಿನ ಇತಿಹಾಸದ ಅಭ್ಯಾಸಿಗಳಿಗೆ ಇದೊಂದು ಅಮೂಲ್ಯ ನಿಧಿಯಾಗಿದೆಯೆಂಬುದು ಎಲ್ಲರಿಗೂ ತಿಳಿದ ವಿಷಯವೇ. ತದನಂತರ ಇದೇ ಮಾಲಿಕೆಯಲ್ಲಿ ಇನ್ನೂ ಎರಡು ಸಂಪುಟಗಳು ಹೊರಬಂದವು. ಈಗ ಕೆಲವು ವರ್ಷಗಳ ಹಿಂದೆ ಮತ್ತೊಂದು ಸಂಪುಟವು ಪ್ರಕಟವಾಯಿತು. ಇವೆಲ್ಲ ಸಂಪುಟಗಳ ಮೂಲಕ ಬೆಳಕು ಕಂಡ ಒಟ್ಟು ಶಾಶನಗಳ ಸಂಖ್ಯೆ ೯,೦೦೦ ಕ್ಕೂ ಮೇಲ್ಪಟ್ಟು.

ಇದೇ ಕಾಲಕ್ಕೆ ಉತ್ತರ ಕರ್ನಾಟಕದಲ್ಲಿಯ ಶಾಸನಗಳ ಸಂಗ್ರಹ ಕಾರ್ಯ ನಡೆಯಿತು. ಆದರೆ ಈ ಪ್ರಯತ್ನವು ಮೈಸೂರಿನಲ್ಲಿಯಂತೆ ಸುಸಂಘಟಿತವಾಗಿರದೆ ಹೆಚ್ಚು ಕಡಿಮೆ ವೈಯಕ್ತಿಕವಾಗಿದ್ದಿತು. ಡಾ. ಫ್ಲೀಟರು ತಮ್ಮ ' ಕನ್ನಡ ಜಿಲ್ಲೆಗಳ ಅರಸುಮನೆತನಗಳು ' (Dynasties of Kanarese Districts) ಎಂಬ ಗ್ರಂಥಕ್ಕೋಸುಗ ಉತ್ತರ ಕರ್ನಾಟಕ ಮತ್ತು ಹೈದರಾಬಾದದ ಕನ್ನಡ ಜಿಲ್ಲೆಗಳಲ್ಲಿ ಸಂಚರಿಸಿ, ಅನೇಕ ಶಾಸನಗಳನ್ನು ಸಂಗ್ರಹಿಸಿ, ಅವುಗಳ ಆಧಾರದಿಂದಲೇ ತಮ್ಮ ಗ್ರಂಥವನ್ನು ರಚಿಸಿದರು. ಈ ಎಲ್ಲ ಶಾಸನಗಳು Sanskrit, Prakrit and Old Canarese Inscriptions) ಎಂಬ ಸಂಪುಟದಲ್ಲಿ ಮುದ್ರಿತವಾಗಿದ್ದು, ಆ ಸಂಪುಟವೀಗ ಉಪಲಬ್ಧವಿಲ್ಲದಾಗಿದೆ.

ಮೈಸೂರಿನಲ್ಲಿಯಂತೆ ಉತ್ತರ ಕರ್ನಾಟಕದಲ್ಲಿಯೂ ಇಂಥ ಕಾರ್ಯ ನಡೆಯುವದು ಅಗತ್ಯವಿದ್ದಿತು. ಇದನ್ನು ಮನಗಂಡು ಅಂದಿನ ಇತಿಹಾಸ ತಜ್ಞರೂ ಅಭಿಮಾನಿಗಳೂ ಆದ ಆಲೂರ ವೆಂಕಟರಾಯರು ಮೊದಲಾದ ಮುಖಂಡರು ಈ ದಿಶೆಯಲ್ಲಿ ಸತತ ಪ್ರಯತ್ನ ನಡೆಸಿದರು. ಇವರ ಪ್ರಯತ್ನದ ಫಲವಾಗಿ ಕೇಂದ್ರ ಸರಕಾರದ ಪುರಾತತ್ವ ವಿಭಾಗದ ಶಾಸನ

ಶಾಖೆಯವರು ಇಲ್ಲಿಯ ಪ್ರತಿಯೊಂದು ತಾಲೂಕಿನ ಪ್ರತಿಯೊಂದು ಹಳ್ಳಿಗೆ ಹೋಗಿ, ಅಲ್ಲಿಯ ಶಾಸನಗಳನ್ನು ಸಂಗ್ರಹಿಸುವ ಕಾರ್ಯವನ್ನು ಕೈಕೊಂಡರು. ಈ ಕಾರ್ಯವು ೧೯೨೬ ರಷ್ಟು ಹಿಂದೆಯೇ ಆರಂಭವಾದರೂ ಇಂದಿಗೂ ಅರ್ಧದಷ್ಟು ಮಾತ್ರ ಪೂರೈಸಿದೆ. ದೇಶವು ಸ್ವತಂತ್ರವಾಗಿ, ಹಿಂದಿನ ಹೈದರಾಬಾದವು ವಿಲೀನಗೊಂಡಾಗ, ಕೇಂದ್ರ ಶಾಸನ ಶಾಖೆಯು ಅಲ್ಲಿಗೂ ತನ್ನ ಕಾರ್ಯವ್ಯಾಪ್ತಿಯನ್ನು ಬೆಳೆಸಿತು. ಪರಿಣಾಮವಾಗಿ ರಾಯಚೂರ ಜಿಲ್ಲೆಯ ಲಿಂಗ್ಸುಗೂರು, ಮಾನ್ವಿ ತಾಲೂಕುಗಳಲ್ಲಿಯ ಶಾಸನಗಳೆಲ್ಲ ಇಂದು ಸಂಗ್ರಹಿತವಾಗಿವೆ. ಕೇಂದ್ರ ಶಾಸನ ಶಾಖೆಯವರಿಂದ ಇಲ್ಲಿಯವರೆಗೆ ಸಂಗ್ರಹಿಸಲ್ಪಟ್ಟ ಕನ್ನಡ ಶಾಸನಗಳ ಸಂಖ್ಯೆ ಸುಮಾರು ೭,೦೦೦.

ಇದಿಷ್ಟು ಕೇಂದ್ರ ಸರಕಾರದವರಿಂದ ನಡೆದ ಕಾರ್ಯವಾದರೆ, ಪ್ರಾದೇಶಿಕ ಸರಕಾರಗಳೂ ಈ ದಿಶೆಯಲ್ಲಿ ಕೆಲಸ ಮಾಡಿದವು. ರೈಸರ ನಂತರ ಅಂದಿನ ಮೈಸೂರು ಸರಕಾರದ ಪುರಾತತ್ವ ವಿಭಾಗವು ಶಾಸನಗಳ ಸಂಗ್ರಹ ಕಾರ್ಯವನ್ನು ಅಲ್ಪ ಸ್ವಲ್ಪವಾಗಿ ಮುಂದುವರೆಸಿತು. ಕರ್ನಾಟಕದ ಭಾಷೆ, ಸಾಹಿತ್ಯಗಳ ಸಂಶೋಧನೆಯನ್ನು ನಡೆಸಲು ಈ ಭಾಗದಲ್ಲಿ ಸಂಸ್ಥೆಯೊಂದು ಅಗತ್ಯವೆಂಬುದನ್ನು ಮನಗಂಡು, ಅಂದಿನ ಮುಂಬಯಿ ಸರಕಾರದವರು ೧೯೩೯ ರಲ್ಲಿ ಕನ್ನಡ ಸಂಶೋಧನ ಸಂಸ್ಥೆಯನ್ನು ಧಾರವಾಡದಲ್ಲಿ ಸ್ಥಾಪಿಸಿದರು. ಅಂದಿನಿಂದ ಈ ಸಂಸ್ಥೆಯು ಶಾಸನ ಸಂಗ್ರಹ ಕಾರ್ಯವನ್ನು ನಡೆಸಿದೆ. ಇಲ್ಲಿಯವರೆಗೆ ಈ ಸಂಸ್ಥೆಯಲ್ಲಿ ಸುಮಾರು ಎರಡು ಸಾವಿರದಷ್ಟು ಶಾಸನಗಳು ಸಂಗ್ರಹಿಸಲ್ಪಟ್ಟಿವೆ.

ಇಂಥ ಸಂಸ್ಥೆಗಳಷ್ಟೇ ಅಲ್ಲದೆ, ಕೆಲವು ವಿದ್ವಾಂಸರು ಇತಿಹಾಸ ಸಂಶೋಧನೆಯಲ್ಲಿ ಆಸ್ಥೆಯಿಂದ, ವೈಯಕ್ತಿಕ ಪ್ರಯತ್ನದಿಂದ ಶಾಸನಗಳ ಶೋಧನ ಮತ್ತು ಪ್ರಕಾಶನ ಕಾರ್ಯಗಳನ್ನು ಕೈಕೊಂಡಿದ್ದಾರೆ. ಇಂಥವರಲ್ಲಿ ದಿ. ನಾ. ಶ್ರೀ. ರಾಜಪುರೋಹಿತರು, ಪ್ರೊ. ಕುಂದಣಗಾರರು, ಡಾ. ನಂದೀಮಠ, ಡಾ. ಪಾಂಡುರಂಗರಾವ ದೇಸಾಯಿ ಇವರನ್ನು ಉಲ್ಲೇಖಿಸಬಹುದು. ಡಾ. ಪಾಂಡುರಂಗರಾಯರು ಹಿಂದೆ ಕೇಂದ್ರ ಶಾಸನ ಶಾಖೆಗೆ ಮತ್ತು ಸದ್ಯ ಕನ್ನಡ ಸಂಶೋಧನ ಸಂಸ್ಥೆಗೆ ಸಂಬಂಧಿಸಿದವರಾದರೂ

-- –

ಅದಕ್ಕೂ ಹಿಂದೆಯೇ ಸ್ವಯ ,ೇರಣೆಯಿಂದ ಅನೇಕ ಶಾಸನಗಳನ್ನು ಶೋಧಿಸಿ ಪ್ರಕಟಿಸಿದ್ದಾರೆ.

ಈ ಎಲ್ಲ ಪ್ರಯತ್ನಗಳಿಂದ ಇಂದು ಆಯಾ ಭಾಗಗಳಲ್ಲಿ ಶೇಖರಿಸಲಾದ ಶಾಸನಗಳ ಸಂಖ್ಯೆ, ಹಳೆಯ ಮೈಸೂರು ಸಂಸ್ಥಾನದಲ್ಲಿಯವನ್ನು ಹಿಡಿದು ಒಟ್ಟು ಸುಮಾರು ೧೮,೦೦೦ ಆಗುವದು. ಇವೆಲ್ಲ ಶಾಸನಗಳು ನಮ್ಮ ನಾಡಿನ ಇತಿಹಾಸದ ಅಮೂಲ್ಯ ನಿಧಿಯಾಗಿವೆ. ಹೀಗೆ ಬಹುಸಂಖ್ಯೆಯಲ್ಲಿ ಶಾಸನಗಳು ದೊರೆತದ್ದರಿಂದಲೇ ಬೇರೆ ಬೇರೆ ರಾಜಮನೆತನಗಳ ಚರಿತ್ರೆಯನ್ನು ರಚಿಸುವದು ಸಾಧ್ಯವಾಗಿದೆ. ಉದಾಹರಣೆಗೆ ಹೊಯ್ಸಳ ವಂಶದ ಚರಿತ್ರೆಯನ್ನು ಬರೆಯುವದು ರೈಸರ ( Epigrapha Carnatica ) ದಲ್ಲಿಯ ಶಾಸನಗಳ ಆಧಾರದಿಂದಲೇ ಸಾಧ್ಯವಾಗಿದೆ. ಅದೇ ರೀತಿಯಾಗಿ ಕರ್ನಾಟಕದಲ್ಲಿ ಹೆಸರಾಂತ ಚಾಲುಕ್ಯ ಮನೆತನದ ಚರಿತ್ರೆ ದೊರೆಯುವದೂ ನಮಗೆ ಈ ವರೆಗೆ ದೊರೆತ ಶಾಸನಗಳಿಂದಲೇ ಎಂದು ಹೇಳಬಹುದು. ಕರ್ನಾಟಕ, ಮಹಾರಾಷ್ಟ್ರಗಳೆರಡರಲ್ಲಿಯೂ ತಮ್ಮ ರಾಜ್ಯವನ್ನು ವಿಸ್ತರಿಸಿದ ಯಾದವ ಅಥವಾ ಸೇವುಣ ವಂಶದ ಬಗ್ಗೆ ವಿವರಗಳು, ಅವರ ನಾಡು, ನುಡಿ, ಹುಟ್ಟು ಮುಂತಾದವುಗಳ ಬಗೆಗೆ ಸ್ಪಷ್ಟವಾದ ಸಂಗತಿಗಳು ಇತ್ತೀಚೆಗೆ ದೊರೆತ ಅನೇಕ ಶಾಸನಗಳಿಂದಲೇ ಉಪಲಬ್ಧವಾಗಿವೆ. ಈ ವರೆಗೆ ತಿಳಿದ ವಿಷಯಗಳ ಮೇಲೆ ಹೆಚ್ಚು ಬೆಳಕು ಬೀರುವ ಶಾಸನಗಳು ಕೆಲವಾದರೆ ಇನ್ನೂ ಕೆಲವು ಹೊಸ ವಿಷಯಗಳನ್ನು ಹೊರಗೆಡಹುತ್ತವೆ. ಗೋವೆಯ ಭಾಗದಲ್ಲಿ ೬-೭ ಶತಮಾನಗಳಲ್ಲಿ ಮೌರ್ಯ ಮತ್ತು ಭೋಜ ಮನೆತನಗಳು ಆಳುತ್ತಿದ್ದುದು, ಕೊಂಕಣ ಮತ್ತು ಕರಾಡಗಳ ಶಿಲಾಹಾರರಲ್ಲದೆ ಅದೇ ಮನೆತನದ ಇನ್ನೂ ಕೆಲವು ಶಾಖೆಗಳು, ರಾಯಚೂರು, ಬೀದರ ಜಿಲ್ಲೆಗಳಲ್ಲಿ ಕದಂಬರ ಮನೆತನದ ಶಾಖೆಗಳು ಅಧಿಕಾರದಲ್ಲಿದ್ದುದು ಕನ್ನಡ, ಸಂಸ್ಕೃತಗಳಲ್ಲಿ ಶಾಸನಗಬ್ಬಗಳನ್ನು ರಚಿಸಿದ ಕವಿಗಳ ವಿಷಯಗಳು, ಇತ್ಯಾದಿಯಾಗಿ ಅನೇಕ ಮಹತ್ವದ ವಿಷಯಗಳು ನಮಗೆ ಇತ್ತೀಚೆಗೆ ದೊರೆತ ಶಾಸನಗಳಿಂದ ತಿಳಿದು ಬಂದಿದೆ.

ಇತ್ತೀಚೆಗೆ ಮಹಾರಾಷ್ಟ್ರ ರಾಜ್ಯದ ಗೋದಾವರೀ ತೀರದ ನಾಂದೇಡ ಜಿಲ್ಲೆಯಲ್ಲಿ ಅನೇಕ ಕನ್ನಡ ಶಾಸನಗಳು ದೊರೆತಿದ್ದು ಪ್ರಾಚೀನ ಕರ್ನಾಟ-

ಟಕದ ವಿಸ್ತಾರವನ್ನು ಸೂಚಿಸುವ ಮಹತ್ವದ ಶಾಸನಗಳಾಗಿವೆ. ಈ ಪುಸ್ತಕದ ೩ನೆಯ ಪ್ರಕರಣದಲ್ಲಿ ವೆಂಕಟರಾಯರು ಈ ಬಗ್ಗೆ ವಿವೇಚಿಸುತ್ತ ಮಹಾರಾಷ್ಟ್ರದಲ್ಲಿಯ ಅನೇಕ ಕನ್ನಡದ ಕುರುಹುಗಳನ್ನು ವಿವರಿಸಿದ್ದಾರೆ. ಅವುಗಳಿಗೆ ಈ ಶಾಸನಗಳನ್ನು ಸೇರಿಸಬಹುದು. ಗೋದಾವರೀ ಪರಿಸರದಲ್ಲಿ ದೊರೆತ ಈ ಶಾಸನಗಳು ಕನ್ನಡ ನಾಡಿನ ವಿಸ್ತಾರದ ಬಗ್ಗೆ ಪ್ರಬಲ ಆಧಾರಗಳಾಗಿದ್ದು ಅದು ಗೋದಾವರಿಯ ವರೆಗೆ ಹಬ್ಬಿತ್ತೆಂಬ ನೃಪತುಂಗನ ಹೇಳಿಕೆಯನ್ನು ದೃಢಪಡಿಸುತ್ತವೆ.

## ಶಾಸನ ಪ್ರಕಾಶನ

ಹೀಗೆ ಸಂಗ್ರಹಿತವಾದ ಶಾಸನಗಳಲ್ಲಿ ಅರ್ಧದಷ್ಟು ಮಾತ್ರ ಪ್ರಕಟವಾಗಿವೆ. ರೈಸರು ಶೇಖರಿಸಿದ ೯,೦೦೦ ಕ್ಕೂ ಮೇಲ್ಪಟ್ಟ ಶಾಸನಗಳನ್ನು ಅವರು ೧೨ ಸಂಪುಟಗಳಲ್ಲಿ ಪ್ರಕಟಿಸಿದ ವಿಷಯವನ್ನು ಈಗಾಗಲೇ ತಿಳಿಸಿದೆ. ತದನಂತರ ಅದೇ ಮಾಲಿಕೆಯಲ್ಲಿ ಇನ್ನೂ ಮೂರು ಸಂಪುಟಗಳು ಪ್ರಕಟವಾದವು. ಕೇಂದ್ರ ಸರಕಾರದ ಶಾಸನ ಶಾಖೆಯಲ್ಲಿ ಸಂಗ್ರಹಿಸಲ್ಪಟ್ಟ ಶಾಸನಗಳ ಸಾರಾಂಶಗಳು ಆಯಾ ವರ್ಷಗಳ ವಾರ್ಷಿಕ ವರದಿಗಳಲ್ಲಿ ಕೊಡಲ್ಪಟ್ಟಿದ್ದರೂ ಸುಮಾರು ೧೫೦೦ ಶಾಸನಗಳ ಪೂರ್ತಿ ಪಾಠ ಮಾತ್ರ ಪ್ರಕಾಶಿತವಾಗಿವೆ. ಇವುಗಳಲ್ಲಿ ಸುಮಾರು ೧೦೦೦ ಮುಂಬಯಿ ಕರ್ನಾಟಕ ಅಂದರೆ ಈಗಿನ ಉತ್ತರ ಕರ್ನಾಟಕದ ಭಾಗದವುಗಳಾದರೆ ಉಳಿದವು ಬಳ್ಳಾರಿ, ದಕ್ಷಿಣ ಕನ್ನಡ ಜಿಲ್ಲೆ ಮತ್ತು ಮದ್ರಾಸ, ಆಂಧ್ರ ಪ್ರಾಂತದವು. ಮುಂಬಯಿ ಕರ್ನಾಟಕದ ಸುಮಾರು ೪೦೦ ಶಾಸನಗಳನ್ನೊಳಗೊಂಡ ಸಂಪುಟ ಅಚ್ಚಿನಲ್ಲಿದ್ದು ಅವು ಶೀಘ್ರದಲ್ಲಿಯೇ ವಿದ್ವಾಂಸರ ಕೈಸೇರಲಿವೆ. ಕನ್ನಡ ಸಂಶೋಧನ ಸಂಸ್ಥೆಯಲ್ಲಿಯ ಶಾಸನಗಳಲ್ಲಿ ಸುಮಾರು ೬೮೦ ಶಾಸನಗಳ ಸಾರಾಂಶಗಳು ಪ್ರಕಟವಾಗಿವೆ. ಇಲ್ಲಿಯವರೆಗೆ ನಾಲ್ಕು ಸಂಪುಟಗಳಲ್ಲಿ ೧೮೩ ಶಾಸನಗಳ ಪೂರ್ತಿ ಪಾಠಗಳು ಒದಗಿಸಲ್ಪಟ್ಟಿವೆ. ಇನ್ನುಳಿದ ಶಾಸನಗಳ ಪೂರ್ತಿ ಪಾಠಗಳನ್ನೂ ಟಿಪ್ಪಣಿಗಳೊಂದಿಗೆ ಪ್ರಕಟಿಸುವ ಸಿದ್ಧತೆ ನಡೆದಿದೆ.

ಗ್ರಂಥರೂಪವಾಗಿ ಶಾಸನಗಳನ್ನು ಪ್ರಕಟಿಸಿದ ವ್ಯಕ್ತಿಗತ ವಿದ್ವಾಂಸರಲ್ಲಿ ಕುಂದಣಗಾರರು ೧೯೩೯ರಲ್ಲಿ ' Inscriptions in Northern Karnatak and Kolhapur state ' ಎಂಬ ಹೆಸರಿನಿಂದ ಶಾಸನಗಳನ್ನು ಬೆಳಕಿಗೆ ತಂದರು. ಡಾ. ಪಾಂಡುರಂಗರಾವ ದೇಸಾಯಿಯವರು ' ಶಾಸನ ಪರಿಚಯ ' ' A corpus of Inscriptions of Kannada Districts in Hyderabad state ', Kannada Inscriptions from Andhra Pradesh ' ಮತ್ತು ' Select inscriptions ' ಎಂಬ ಗ್ರಂಥಗಳ ಮೂಲಕ ಬಹಳಷ್ಟು ಶಾಸನಗಳ ಪಾಠಗಳನ್ನೊದಗಿಸಿದ್ದಾರೆ. ಮತ್ತು ಇವರ ' Jainism in South India and some Jaina Epigraphs ) ಎಂಬ ಗ್ರಂಥದಲ್ಲಿಯೂ ೫೩ ಶಾಸನಗಳ ಪೂರ್ತಿಪಾಠ ಮತ್ತು ಭಾಷಾಂತರಗಳು ಇವೆ.

ಇದೇ ವರ್ಷ ಪ್ರಕಟವಾದ ಡಾ. ಶ್ರೀನಿವಾಸ ರಿತ್ತಿ ಮತ್ತು ಜಿ. ಸಿ. ಶೀಳಕೆ ಅವರ ' Inscriptions from Nanded District ' ಎಂಬ ಗ್ರಂಥದಲ್ಲಿ ಕರ್ನಾಟಕದ ಇತಿಹಾಸಕ್ಕೆ ಸಂಬಂಧಿಸಿದ ೪೨ ಶಾಸನಗಳಿವೆ.

ಇವಲ್ಲದೆ Karnatak University Journal. ಮುಂತಾದ ನಿಯತಕಾಲಿಕಗಳಲ್ಲಿ ಆಗಾಗ ಕನ್ನಡ ಶಾಸನಗಳು ಪ್ರಕಟವಾಗುತ್ತಿದ್ದು, ಇತಿಹಾಸದ ಅಭ್ಯಾಸಿಗಳಿಗೆ ಸಾಮಗ್ರಿಯನ್ನೊದಗಿಸುತ್ತವೆ.

ಕೇವಲ ಶಾಸನಗಳನ್ನು ಪ್ರಕಟಿಸುವ ನಿಯತಕಾಲಿಕವೆಂದರೆ ಭಾರತ ಸರಕಾರದ Epigraphica indica ಒಂದೇ. ಇದರಲ್ಲಿ ಅನೇಕ ಕನ್ನಡ ಶಾಸನಗಳು ಪ್ರಕಟವಾಗಿವೆ. ವೆಂಕಟರಾಯರು ೧ನೇ ಪೂರಕ ಪ್ರಕರಣದಲ್ಲಿ ಉಲ್ಲೇಖಿಸಿದ Indian Antiquery ಬಹು ಹಿಂದೆಯೇ ನಿಂತಿತು. ತದನಂತರ Indian Antiquery – New Series ಎಂಬ ಪತ್ರಿಕೆ ಪ್ರಾರಂಭವಾಗಿ ಕೆಲ ವರ್ಷಗಳಲ್ಲಿ ಅದೂ ನಿಂತಿತು. ಇತ್ತೀಚೆಗೆ ೧೯೭೪ ರಿಂದ ಇದೇ ಹೆಸರಿನ ಪತ್ರಿಕೆ ಮುಂಬೈಯಿಂದ ಪ್ರಕಟವಾಗುತ್ತಿದ್ದು ಆದರಲ್ಲಿ ಇಲ್ಲಿಯವರೆಗೆ ಯಾವ ಶಾಸನಗಳೂ ಪ್ರಕಟಿತವಾಗಿಲ್ಲ.

**ಚರಿತ್ರ ರಚನೆ**

ನಾಡಿನ ತುಂಬೆಲ್ಲ ಐತಿಹಾಸಿಕ ಅವಶೇಷಗಳು, ಸಾಮಗ್ರಿಗಳು ಹರಡಿದ್ದರೂ, ಅವುಗಳಲ್ಲೆಷ್ಟೋ ಭಾಗವು ಈಗ ಪ್ರಕಾಶಿತವಾಗಿದ್ದರೂ ಕನ್ನಡ ನಾಡಿನ ಸಮಗ್ರ ಚರಿತ್ರೆಯೊಂದು ಇನ್ನೂ ಬೆಳಕಿಗೆ ಬಂದಿಲ್ಲ. ೧೯ನೆಯ ಶತಮಾನದ ಕೊನೆಯಲ್ಲಿಯೇ ಇಂಥ ಪ್ರಯತ್ನಗಳು ಆರಂಭವಾದವು. ಆಗ ಪ್ರಕಟವಾದ ಡಾ. ಫ್ಲೀಟರ Dynasties of Canarese Districts ಮತ್ತು ಭಾಂಡಾರಕರರ Early History of the Deccan ಇವುಗಳನ್ನು ವೆಂಕಟರಾಯರು ಉಲ್ಲೇಖಿಸಿದ್ದಾರೆ. ಡಾ. ರೈಸರ Mysore and Coorg from Inscriptions ಎಂಬ ಗ್ರಂಥವನ್ನೂ ಇಲ್ಲಿ ಹೆಸರಿಸಬಹುದು. ಇವು ನಾಡಿನ ರಾಜಕೀಯ ಇತಿಹಾಸದ ಸ್ಥೂಲ ಕಲ್ಪನೆಯನ್ನು ಕೊಡುತ್ತವೆಯಾದರೂ ಅವು ಸಮಗ್ರ ಚಿತ್ರವನ್ನು ರೂಪಿಸಲಾರವು. ೧೯೨೬ರಲ್ಲಿ ಧಾರವಾಡದ ರಾ. ಹ. ದೇಶಪಾಂಡೆಯವರು "ಕರ್ನಾಟಕ ಸಾಮ್ರಾಜ್ಯ" ವನ್ನು ಬರೆಯಲು ತೊಡಗಿದರು. ಎರಡು ಸಂಪುಟಗಳಲ್ಲಿ ೧೨ನೆಯ ಶತಮಾನದವರೆಗೆ ಇತಿಹಾಸವನ್ನು ನಿರೂಪಿಸಲು ಶಕ್ತರಾದರು. ಇದರ ಮುಂದಿನ ಭಾಗವು ಇನ್ನೂ ಹಸ್ತಪ್ರತಿಯಾಗಿಯೇ ಉಳಿದಿದೆ. ಶ್ರೀ ರಾಜಪುರೋಹಿತರು ರಚಿಸಿದ ಕರ್ನಾಟಕ ಇತಿಹಾಸದ ಚಿಕ್ಕ ಸಂಪುಟವನ್ನು ನಾವು ಇಲ್ಲಿ ಗಮನಿಸಬಹುದು. ಶಾಸನಗಳ ಆಧಾರದ ಮೇಲೆ ಪ್ರಮಾಣಬದ್ಧವಾದ ಒಂದು ಚರಿತ್ರ ಗ್ರಂಥವನ್ನು ಒದಗಿಸಲು ಇದೇ ಕಾಲಕ್ಕೆಯೇ, ಶಾಸನ ತಜ್ಞರಾದ ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣರಾಯರು ಮತ್ತು ಪಂಚಮುಖಿಯವರು ತೊಡಗಿದರು. ಅವರ ಪ್ರಯತ್ನದ ಫಲವಾಗಿ ೧೯೪೬ರಲ್ಲಿ "ಕರ್ನಾಟಕದ ಅರಸು ಮನೆತನಗಳು" ಎಂಬ ಗ್ರಂಥವು ಹೊರಬಂದಿತು. ಆದರೆ ಈ ಗ್ರಂಥದ ವ್ಯಾಪ್ತಿ ಕ್ರಿ. ಶ. ೮ನೆಯ ಶತಮಾನಕ್ಕೆ ಮಾತ್ರ ಸೀಮಿತವಾಗಿದೆ. ಇದೇ ವರ್ಷ ಪ್ರಕಟವಾದ ಇನ್ನೊಂದು ಗ್ರಂಥವೆಂದರೆ ಡಾ. ಮುಗಳಿಯವರ Heritage of Karnatak ಎಂಬುದು. ಕರ್ನಾಟಕದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದ ದಿಗ್ದರ್ಶನವನ್ನು ನಾವು ಇಲ್ಲಿ

ಕಾಣಬಹುದು. ಇತ್ತೀಚೆಗೆ ದಕ್ಷಿಣ ಭಾರತ ಪುಸ್ತಕ ಸಂಸ್ಥೆಯವರಿಂದ ಪ್ರಕಾಶಿತವಾದ, ಎಂ. ವಿ. ಕೃಷ್ಣರಾಯರ 'ಕರ್ನಾಟಕದ ಚರಿತ್ರೆ' ಕರ್ನಾಟಕದ ಸಂಕ್ಷಿಪ್ತ ಇತಿಹಾಸ ಮಾತ್ರ.

ಹೀಗೆ ಪ್ರಮಾಣಭೂತವಾದ ಸಮಗ್ರ ಚರಿತ್ರೆಯ ಕೊರತೆ ಇಂದಿಗೂ ಇದ್ದೇ ಇದೆ. ಈ ಕೊರತೆಯನ್ನು ಮನಗಂಡೇ ಇಂಥ ಗ್ರಂಥ ರಚನೆಯಲ್ಲಿ ಕೆಲವು ಪ್ರಯತ್ನಗಳು ನಡೆದಿವೆ. ಮೈಸೂರ ಸರಕಾರದವರು ಯೋಜಿಸಿದ Karnataka Through The Ages ಎಂಬುದು ಮತ್ತು ಶ್ರೀ ಪಂಚಮುಖಿಯವರು ಯೋಜಿಸಿದ ಸಂಪುಟಗಳು ಇವನ್ನು ಇಲ್ಲಿ ಉದಾಹರಿಸಬಹುದು. ೧೦ನೆ ಶತಮಾನದವರೆಗಿನ ಇತಿಹಾಸವನ್ನೊಳಗೊಂಡ ಶ್ರೀ ಪಂಚಮುಖಿಯವರ ಒಂದು ಸಂಪುಟ ಇದೀಗ ಪ್ರಕಟವಾಗಿದೆ. ಮೊನ್ನೆ ಮೊನ್ನೆ ಡಾ. ತಿಪ್ಪೇರುದ್ರಸ್ವಾಮಿಯವರ 'ಕರ್ನಾಟಕ ಸಂಸ್ಕೃತಿ ಸಮೀಕ್ಷೆ' ಎಂಬ ಇನ್ನೊಂದು ಗ್ರಂಥ ಪ್ರಕಟವಾಗಿದೆ. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯು ಈ ದಿಶೆಯಲ್ಲಿ ಕಾರ್ಯ ಪ್ರವೃತ್ತವಾಗಿದ್ದು ಈಗಾಗಲೇ ಬಹುಮಟ್ಟಿಗೆ ಪ್ರಗತಿಯನ್ನು ಸಾಧಿಸಿದೆ. ಕರ್ನಾಟಕದ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಚರಿತ್ರೆಯನ್ನೊಳಗೊಂಡ ಸಂಪುಟವೊಂದು ಶೀಘ್ರದಲ್ಲಿಯೇ ಹೊರಬರಲಿದೆ.

ಕರ್ನಾಟಕದ ಬೇರೆಬೇರೆ ರಾಜಮನೆತನಗಳನ್ನು ಕುರಿತು ಬಿಡಿಬಿಡಿಯಾದ ಅಭ್ಯಾಸಗಳೂ ಕೆಲಮಟ್ಟಿಗೆ ನಡೆದಿವೆ. ೧೯೩೧ ರಲ್ಲಿ ಪ್ರಕಟವಾದ ಜಿ. ಎಂ. ಮೊರೇಸರ 'ಕದಂಬ ಕುಲ' ವಿವಿಧ ಕದಂಬ ಮನೆತನಗಳನ್ನು ಕುರಿತಾದ ಅಭ್ಯಾಸವಾಗಿದೆ. ಎಂ. ವಿ. ಕೃಷ್ಣರಾಯರ ತಳಕಾಡಿನ ಗಂಗರನ್ನೂ ಇಲ್ಲಿ ಹೆಸರಿಸಬಹುದು. ಡಾ. ದೇಸಾಯಿ ಪಾಂಡುರಂಗರಾಯರ "ವಿಜಯನಗರ ಸಾಮ್ರಾಜ್ಯ" ಹಿಂದೆಯೇ ಪ್ರಕಾಶಿತವಾಗಿದ್ದರೂ ಇಂದಿಗೂ ಆಧಾರಗ್ರಂಥವಾಗಿದೆ. ಅವರದೇ ಆದ 'ಕರ್ನಾಟಕದ ಕಲಚುರಿಗಳು' ಕಲಚುರಿ ಮನೆತನದ ಅಭ್ಯಾಸಪೂರ್ಣ ಕೃತಿಯಾಗಿದೆ. ಡಾ. ಸಾಲೆತೊರೆಯವರ ಎರಡು ಸಂಪುಟಗಳು ವಿಜಯನಗರದ ಆಳಿಕೆಯ ವಿವರಗಳನ್ನೆಲ್ಲ ಒಳಗೊಂಡಿದೆ. ೧೯೩೪ ರಷ್ಟು ಹಿಂದೆಯೇ ಡಾ. ಆಳ್ತೇಕರರು ರಾಷ್ಟ್ರಕೂಟ ಮನೆತನದ ಬಗ್ಗೆ ತಮ್ಮ ಅಭ್ಯಾಸಪೂರ್ಣವಾದ ಗ್ರಂಥವನ್ನು ಪ್ರಕಟಿಸಿ

ದರು. ೧೯೫೦ರಲ್ಲಿ ಡಾ. ಕೊಫಿಲೋ ಅವರು ಮತ್ತು ೧೯೫೭ರಲ್ಲಿ ಡಾ. ಡೆರೆಟ್ ಅವರು ಹೊಯ್ಸಳ ವಂಶದ ಚರಿತ್ರೆಯನ್ನೊದಗಿಸಿದರು. ಡಾ. ಬಿ. ಆರ್. ಗೋಪಾಲ ಅವರು ಸಿದ್ಧಪಡಿಸಿದ ಕಲ್ಯಾಣದ ಚಾಲುಕ್ಯ ಮನೆತನದ ಆರಂಭದಿಂದ ಕ್ರಿ. ಶ. ೧೦೭೬ರ ವರೆಗಿನ ಚರಿತ್ರೆ ಇನ್ನೂ ಪ್ರಕಟವಾಗಬೇಕಾಗಿದೆ. ಇದೇ ರೀತಿ ಡಾ. ಶ್ರೀನಿವಾಸ ರಿತ್ತಿಯವರ ಸೇವುಣರು ಅಥವಾ ದೇವಗಿರಿ ಯಾದವರು ಎಂಬ ಪ್ರಬಂಧ ಇತ್ತೀಚೆಗೆ ದೊರೆತ ಶಾಸನಗಳ ಕೂಲಂಕಷ ಪರಿಶೋಧನೆಯಿಂದ ಕಂಡುಬಂದ ಹೊಸ ವಿಷಯಗಳನ್ನೊಳಗೊಂಡ ಚರಿತ್ರಗ್ರಂಥವಾಗಿದ್ದು ಇನ್ನೂ ಪ್ರಕಾಶಿತವಾಗಬೇಕಾಗಿದೆ. ವಿಜಯನಗರದ ಬಗೆಗೆ ಅನೇಕ ಗ್ರಂಥಗಳಿದ್ದರೂ ಕನ್ನಡದಲ್ಲಿಯ ಸಾಮಗ್ರಿಗಳನ್ನು ಪರಿಶೋಧಿಸಿ ವಿಜಯನಗರದ ಚರಿತ್ರೆಯನ್ನು ಬರೆಯುವ ಪ್ರಯತ್ನವು ಸ್ವಾಗತಾರ್ಹವೇ ಆಗಿದೆ.

ಇದಲ್ಲದೆ ಕರ್ನಾಟಕದ ಚರಿತ್ರೆಯ ಅಂಶಗಳು ನಮಗೆ ಭಾರತೀಯ ಇತಿಹಾಸಗಳ ಸಂಪುಟಗಳಲ್ಲಿಯೂ ಲೇಖನ ಸಂಗ್ರಹಗಳಲ್ಲಿಯೂ ದೊರೆಯುತ್ತವೆ. ಭಾರತೀಯ ವಿದ್ಯಾಭವನದ A History and Culture of Indian people ಎಂಬ ಸಂಪುಟಗಳನ್ನೂ, ಯಾಝುದಾನಿಯವರಿಂದ ಸಂಪಾದಿತ Early History of Deccan ಎಂಬ ಗ್ರಂಥದ ಸಂಪುಟಗಳನ್ನೂ ಎಂ. ವಿ. ಕೃಷ್ಣರಾಯರ Glimpses of Karnatak ಮತ್ತು ದಿವಾಕರ ರಂಗರಾಯರ ಓಂನೇಪುಟ್ಟುಹಬ್ಬದ ನಿಮಿತ್ತ ಪ್ರಕಟಿಸಿದ Karnataka Darshana ಎಂಬ ಗ್ರಂಥವನ್ನೂ ಇಲ್ಲಿ ಹೆಸರಿಸಬಹುದು. ವಿವಿಧ ನಿಯತಕಾಲಿಕೆಗಳಲ್ಲಿ ಆಗಾಗ ಬಂದ ಲೇಖನಗಳಂತೂ ಸರಿಯೇ. ಹೀಗೆ ಕರ್ನಾಟಕದ ಚರಿತ್ರೆ ನಮಗೆ ಸದ್ಯಕ್ಕೆ ಈ ವಿಧವಾಗಿ ದೊರೆಯುತ್ತಿದ್ದರೂ ಕರ್ನಾಟಕದ ಜನಜೀವನದ ಪೂರ್ಣ ಚಿತ್ರವನ್ನೊದಗಿಸುವ ಪ್ರಮಾಣಭೂತವಾದ ಆಧಾರಗ್ರಂಥಗಳು ಅಗತ್ಯವಾಗಿವೆ ಎಂಬುದು ನಿರ್ವಿವಾದ.

**ಕಾರ್ಯವ್ಯಾಪ್ತಿ**

ಹೀಗೆ ಸಂಶೋಧನ ಕ್ಷೇತ್ರದಲ್ಲಿ ಎಷ್ಟೋ ಪ್ರಗತಿಯಾಗಿದ್ದರೂ ಇನ್ನೂ ಸಾಧಿಸಬೇಕಾದ ಕಾರ್ಯ ಬಹಳಷ್ಟಿದೆ. ಭೂ-ಶೋಧನೆಯ ದೃಷ್ಟಿಯಿಂದ ಮಹತ್ವದ ಸ್ಥಳಗಳಲ್ಲಿ ಅನ್ವೇಷಣೆ ( Exploration ) ನಡೆ

ಯಿಂಸಿ, ಉತ್ಖನನಗಳನ್ನು ಕೈಕೊಳ್ಳಬೇಕಾಗಿದೆ. ಆಗ ಇತಿಹಾಸಪೂರ್ವ ಕಾಲದ ಬಗ್ಗೆ ಇನ್ನಷ್ಟು ಮಾಹಿತಿ ದೊರೆಯುತ್ತದೆ. ಶಾಸನಗಳ ಸಂಗ್ರಹಣೆಯ ಕಾರ್ಯವು ತ್ವರಿತಗತಿಯಿಂದ ಸಾಗಬೇಕಾಗಿದೆ. ಮೈಸೂರು ವಿಭಾಗದಲ್ಲಿ ಈ ಕಾರ್ಯ ಹಿಂದೆಯೇ ಬಹುಮಟ್ಟಿಗೆ ಪೂರೈಸಿದ್ದರೂ, ಉಳಿದ ಭಾಗಗಳಲ್ಲಿ ಸಂಗ್ರಹಿಸದೆ ಉಳಿದ ಶಾಸನಗಳು ಹೇರಳವಾಗಿವೆ. ಬಳ್ಳಾರಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ನೂರಾರು ಶಾಸನಗಳು ಪ್ರಕಾಶಿತವಾಗಿದ್ದರೂ ಅಲ್ಲಿ ಇನ್ನೂ ಅನೇಕ ಹೊಸ ಶಾಸನಗಳು ದೊರೆಯುತ್ತವೆ. ಧಾರವಾಡ, ಬೆಳಗಾಂವ, ಕಾರವಾರ ಜಿಲ್ಲೆಗಳಲ್ಲಿಯು ಶಾಸನಗಳ ಸಂಗ್ರಹಣೆಯೂ ಪೂರ್ಣವಾಗಿಲ್ಲ. ರಾಯಚೂರು, ಕಲಬುರ್ಗಿ, ಬೀದರ ಜಿಲ್ಲೆಗಳಲ್ಲಿಯಂತೂ ಬಹಳಷ್ಟು ಮಹತ್ವದ ಶಾಸನಗಳು ದೊರೆಯುತ್ತವೆಂಬುದು ಅನುಭವದ ಮಾತಾಗಿದೆ. ಈ ಎಲ್ಲ ಭಾಗಗಳನ್ನು ಪರಿಶೋಧಿಸಿದಾಗ ನಮಗೆ ಎಳೆಂಟು ಸಾವಿರದಷ್ಟು ಶಾಸನಗಳು ದೊರೆಯುವದರಲ್ಲಿ ಸಂದೇಹವಿಲ್ಲ. ಇವೆಲ್ಲವುಗಳನ್ನು ಸಂಗ್ರಹಿಸಿ, ಶೋಧಿಸಿ, ಪ್ರಕಟಿಸಿದಾಗ ಚರಿತ್ರೆಯ ಅಭ್ಯಾಸಿಗಳಿಗೆ ಅಮೂಲ್ಯ ನಿಧಿ ದೊರೆತಂತಾಗುತ್ತದೆ. ನಾಣ್ಯಗಳ ಸಂಗ್ರಹಣೆ ಮತ್ತು ವ್ಯವಸ್ಥಿತವಾದ ಅಭ್ಯಾಸದಲ್ಲಿ ಹೆಚ್ಚಿನ ಪ್ರಗತಿಯಾಗಿಲ್ಲ. ತಾಡೋಲೆಯ, ಕಾಗದದ, ಹಸ್ತಪ್ರತಿಗಳಲ್ಲಿಯ ಕಾವ್ಯಗಳನ್ನು ಸಂಶೋಧಿಸಿ ಐತಿಹಾಸಿಕ ಸಾಮುಗ್ರಿಯನ್ನು ಕಲೆಹಾಕುವದು ಅಷ್ಟೇ ಮಹತ್ವದ ವಿಷಯುವಾಗಿದೆ. ಪ್ರತಿಯೊಂದು ಜಿಲ್ಲೆಯಲ್ಲಿಯ ಪ್ರಾಚೀನ ದೇವಾಲಯಗಳ ಪಟ್ಟಿಯನ್ನು ತಯಾರಿಸಿ ಅವುಗಳನ್ನು ವಾಸ್ತುಶಿಲ್ಪ ( Architecture ) ಮತ್ತು ಕಲೆಯ ದೃಷ್ಟಿಯಿಂದ ಅಭ್ಯಸಿಸಬೇಕಾದ ಕಾರ್ಯ ಇನ್ನೂ ಆರಂಭವಾಗಬೇಕಾಗಿದೆ. ಈ ಎಲ್ಲ ಕಾರ್ಯಗಳನ್ನು ಸಾಧಿಸಿದಾಗ ಕನ್ನಡ ಸಂಸ್ಕೃತಿಯ ಪೂರ್ಣ ಚಿತ್ರವನ್ನು ಬಿಡಿಸುವದು ಸಾಧ್ಯವಾಗುತ್ತದೆ.

---